# ಅಜ್ಞಾನದಲ್ಲಿ ಉಗ್ರವಾದ ಬೀಜಗಳು




(Regd.No.459/2011)

ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು





# ಅಜ್ಞಾನದಲ್ಲಿ ಉಗ್ರವಾದ ಬೀಜಗಳು


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಆಗಸ್ಟ್ –2016

ಪ್ರತಿಗಳು : 1000 **ಬೆಲೆ. 110/–**

## "ಇಂದೂ ಜ್ಞಾನವೇದಿಕೆ" ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## "ಇಂದೂ ಜ್ಞಾನವೇದಿಕೆ" ಪ್ರಕಟಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ – ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು-ಪಾದರಸಮು.
05. ಯುಗಮು-ಯೋಗಮು.
06. ನೈಜಂ-ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ-ಸೈತ್ಯಂ.
09. ಶೈವಮು-ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ-ಸೃಷ್ಠಿಕರ್ತ.
12. ಕಾಯ-ಪಂಡು-ಕಾಯ.
13. ಜ್ಞಾನಮು-ವಿಜ್ಞಾನಮು.
14. ವಾರ-ಮಾಸ-ವತ್ಸರ.
15. ಸೇಕೂವಲಿ-ಕೂಲಿಸೇವಾ.
16. ಧರ್ಮಮು-ಅಧರ್ಮಮು.
17. ಏಕ್‌ನಿರಂಜನ್-ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ-ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು - ಆರ್ಯುಲು.
22. ಪ್ರಭುವು - ಪ್ರಭುತ್ವಂ.
23. ಭೂತಂ - ಮಹಾಭೂತಂ.
24. ಪ್ರಭು - ಪ್ರಜ.
25. ಯಾದವ್.
26. ಪುಸ್ತಕಮು-ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ-ವಿಕೃತಿ.
29. ಮಾಟ-ಮಂದು.
30. ಏಕತ-ಏಕಾಗ್ರತ.
31. ಹರಿಕಾಲು-ಹರಿಚೇಯಿ.
32. ಪುಟ್ಟಗೋಸಿ-ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ-ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು-ಅಮಾಯಕುಡು.
37. ಮರಣಮು-ಶರೀರಮು.
38. ದ್ವಿತೀಯುಡು-ದ್ವಿತೀಯುಡು.
39. ಎದಮೀದಮುದ್ರ-ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ-ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ-ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು-ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ - ಗುರುವು ದೈವಮು.
48. ಕಲಿಯುಗಮು.
49. ಮತಮು-ಪಥಮು.
50. ದಿವ್ಯಖುರಾನ್-ಹದೀಸು.
51. ತಲ್ಲಿ.
52. ಪುಟ್ಟುಟ - ಗಿಟ್ಟುಟ.
53. ಗೋರು - ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು - ಹಿಂದುವು.
61. ಸ್ತ್ರೀ-ಪು/ಲಿಂಗಮು.

## ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ‘ಇಂದೂ ಜ್ಞಾನವೇದಿಕೆ’ ಗ್ರಂಥಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : ಶ್ರೀನಿವಾಸ–09705864675, ಲಕ್ಷ್ಮಿಣಾರಾಯಣಾಚಾರಿ–09440556968. ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ ‘ಸಿ’ (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆಂಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಅಜ್ಞಾನದಲ್ಲಿ ಉಗ್ರವಾದ ಬೀಜಗಳು 

'ಉಗ್ರವಾದ' ಎಂಬ ಪದ ಎಲ್ಲರಿಗೂ ಸುಪರಿಚಯವಾದುದು, ಉಗ್ರವಾದದಲ್ಲಿ ಹಿಂಸೆ, ಮಾರಣಹೋಮ ಹೊರತು ಏನೂ ಇಲ್ಲವೆಂದು ಎಲ್ಲರಿಗೂ ತಿಳಿದಿದೆ. ಈದಿನ ಕೆಲವು ಮನುಷ್ಯರಲ್ಲಿ ಮಾತ್ರ ಉಗ್ರವಾದವಿದೆ. ಆದರೇ ನಾಳೆ ಎಲ್ಲರಲ್ಲೂ ಬರಬಹುದು. ಉಗ್ರವಾದ ಯಾವಾಗ ಎಷ್ಟು ಜನರೊಳಗೆ ಹರಡುತ್ತದೋ ಹೇಳಲಾರೆವು. ಒಂದುಬಾರಿ ಉಗ್ರವಾದಕ್ಕೆ ಭಯಪಡುವ ಮನುಷ್ಯ, ತನ್ನಲ್ಲಿರುವ ಅಜ್ಞಾನದಿಂದ ತಾನೇ ಉಗ್ರವಾದಿಯಾಗಿ ಬದಲಾಗಬಲ್ಲನು. ಆದ್ದರಿಂದ ಭವಿಷ್ಯತ್ತಿನಲ್ಲಿ ಯಾರು ಹೇಗೆ ಬದಲಾಗುತ್ತಾರೋ ಹೇಳಲಾರೆವು. ಉಗ್ರವಾದ ಒಂದು ಬೀಜವಂತದ್ದು. ಅದು ಮೊಳಕೆ ಬರುವುದಕ್ಕೆ ಅನುಕೂಲವಾದ ಭೂಮಿ ಮನುಷ್ಯನಲ್ಲಿನ ಅಜ್ಞಾನವೇ. ಮನುಷ್ಯನಲ್ಲಿ ಅಜ್ಞಾನ ವಿದ್ದಾಗ ಉಗ್ರವಾದ ಬೀಜ ಆತನಲ್ಲಿ ಮೊಳಕೆ ಮೊಡೆದು ಕೊನೆಗೆ ಮಹಾ ವೃಕ್ಷವು ಆಗಬಲ್ಲದು. ಆದ್ದರಿಂದ ಎಷ್ಟೋ ಹೆಸರು ಪಡೆದ ಉಗ್ರವಾದಿಗಳು ಅನೇಕ ದೇಶಗಳಲ್ಲಿ ತಯಾರಾಗಿದ್ದಾರೆ. ಉಗ್ರವಾದ ಒಂದು ದೇಶಕ್ಕೋ, ಒಂದು ಮತಕ್ಕೋ ಪರಿಮಿತವಾಗಿರುವುದಾಗಲೀ, ಸಂಬಂಧಿಸಿರುವುದಾಗಲೀ ಅಲ್ಲ. ಉಗ್ರವಾದ ಅಜ್ಞಾನವಿರುವ ಪ್ರತಿ ದೇಶದಲ್ಲಿಯೂ, ಪ್ರತಿ ಮತದಲ್ಲಿಯೂ ಉದ್ಭವಿಸಬಲ್ಲದು. ದೈವಜ್ಞಾನವನ್ನು ಅನುಸರಿಸಿ ಎಲ್ಲಾದರೆ ಅಜ್ಞಾನವಿದೆಯೋ ಅಲ್ಲಿ ಉಗ್ರವಾದ ಬೀಜಗಳು ಮೊಲಕೆ ಮೊಡೆಯಲು ಅವಕಾಶವಿರುವುದರಿಂದ, ಉಗ್ರವಾದವನ್ನು ಕುರಿತು ಸಮಗ್ರವಾಗಿ ತಿಳಿಯಬೇಕೆಂದರೇ ಮೊದಲು ದೈವಜ್ಞಾನವೆಂದರೇ ಏನೋ, ಅಜ್ಞಾನವೆಂದರೇ ಏನೋ ತಿಳಿಯಬೇಕಾದ ಅವಶ್ಯವಿದೆ.

ದೈವಜ್ಞಾನವೆಂದರೆ ಏನೋ ತಿಳಿಯುವುದಕ್ಕೆ ಪ್ರಯತ್ನಿಸಿದರೇ, ದೇವರಿಂದ ಹೇಳಲಾಗಿರುವುದು ಅಥವಾ ದೇವರಿಂದ ಪ್ರಕಟಿಸಲಾಗಿರುವುದನ್ನು ದೈವಜ್ಞಾನ ಎನ್ನುತ್ತೇವೆ. ಮನುಷ್ಯರಿಂದ ಪ್ರಕಟಿಸಲಾಗಿರುವುದು ಪ್ರಪಂಚ ಜ್ಞಾನವೆಂದೂ, ದೇವರಿಂದ ಪ್ರಕಟಿಸಲಾಗಿರುವುದನ್ನು ದೇವರ ಜ್ಞಾನ ಅಥವಾ ದೈವಜ್ಞಾನವೆಂದೂ ಹೇಳಬಹುದು. ದೇವರ ಜ್ಞಾನ ದೇವರಿಗೆ ಹೊರತು ಮತ್ತೆ

ಇತರ ಯಾವ ಮನುಷ್ಯನಿಗೂ ತಿಳಿದಿಲ್ಲ, ಆದ್ದರಿಂದ ದೇವರಿಗೆ ಸಂಬಂಧಿಸಿದ ಜ್ಞಾನವೆಲ್ಲವೂ ದೇವರೇ ಸ್ವತಃವಾಗಿ ಹೇಳಬೇಕಾಗಿದೆ. ಆದರೇ ಇಲ್ಲೊಂದು ಚಿಕ್ಕ ಸಂಶಯ ಕೆಲವರಿಗೆ ಬರಬಹುದು. ಅದೇನೆಂದರೇ! ರಾಮಾಪುರ ಎಂಬ ಊರಿನಲ್ಲಿ ದೇವರೆಂದು ನಂಬಿದ ನರಸಿಂಹಸ್ವಾಮಿ ಗುಡಿಯಲ್ಲಿನ ನರಸಿಂಹನು, ಪೂನಕ (ಸೂಕ್ಷ್ಮ) ಬಂದು ಆ ಊರಿನಲ್ಲಿನ ಪ್ರಜೆಗಳಿಗೆ ಕೆಲವು ಮಾತುಗಳನ್ನು ಹೇಳಿ, ನಾನು ಹೇಳಿದಹಾಗೆ ನಡೆದುಕೊಳ್ಳಿರೆಂದು ಹೇಳಿದ್ದಾನಂತೆ. ಆತನು ಹೇಳಿರುವ ಮಾತುಗಳಲ್ಲಿ ಕೆಲವನ್ನು ನೋಡಿದರೆ ಹೀಗೆ ಇವೆ. "ಆದಿತ್ಯವಾರ ಪೂರ್ವಕ್ಕೆ ಪ್ರಯಾಣ ಮಾಡಬೇಡ್ರಿ. ಸೋಮವಾರ ಮಾಂಸವನ್ನು ತಿನ್ನಬೇಡ್ರಿ. ಮಂಗಳವಾರ ಸಾಲ ಮಾಡಬೇಡ್ರಿ. ಬುಧವಾರ ತಲೆ ಸ್ನಾನ ಮಾಡಬೇಡ್ರಿ. ಗುರುವಾರ ಗುಡಿಗೆ ಹೋಗಬೇಡ್ರಿ. ಶುಕ್ರವಾರ ಬಿಳಿ ವಸ್ತ್ರಗಳು ಧರಿಸಿ. ಶನಿವಾರ ನನ್ನನ್ನು ಭಕ್ತಿಯಿಂದ ಪೂಜಿಸಿರಿ" ಎಂದು ಹೇಳಿದ್ದಾನೆ. ಆ ಊರಿನ ಪ್ರಜೆಗಳೆಲ್ಲರಿಗೂ ನರಸಿಂಹಸ್ವಾಮಿ ಅವರ ಆರಾಧ್ಯದೈವವಾಗಿರುವುದರಿಂದ, ಆತನು ಹೇಳಿದ ಮಾತುಗಳನ್ನು ಮುಖ್ಯವಾದ ವಚನಗಳಾಗಿ ನಂಬಿ ಹಾಗೇ ಆಚರಿಸುತ್ತಿದ್ದರು. ರಾಮಾಪುರದ ಪಕ್ಕದಲ್ಲೇ ತುರಕಪಲ್ಲೆ ಎಂಬ ಊರು ಇದೆ. ಆ ಊರಿನಲ್ಲಿ ಗ್ರಾಮ ದೇವತೆಯಾದ ದೊಡ್ಡಮ್ಮ ಆರಾಧ್ಯದೈವವಾಗಿ ಇದ್ದಳು.

ಪ್ರತಿ ಮಂಗಳವಾರ ತುರಕಪಲ್ಲೆಯಲ್ಲಿ ದೊಡ್ಡಮ್ಮ ಗುಡಿಗೆ ಹೋಗುವವರೆಲ್ಲರೂ ದೊಡ್ಡಮ್ಮನನ್ನೇ ದೊಡ್ಡ ದೇವತೆಯಾಗಿ ಭಾವಿಸಿ ಪೂಜಿಸುತ್ತಿದ್ದರು. ಆದರೇ ಆ ಊರಿನ ಪ್ರಜೆಗಳೆಲ್ಲರೂ ಸುಖವಾಗಿ ಬದುಕುವುದಕ್ಕೆ, ರೋಗಗಳು ಬಾರದಂತಿರುವುದಕ್ಕೆ ದೊಡ್ಡಮ್ಮ ದೇವತೆ ಮೈಯೊಳಗೆ ಬಂದು, ಅಲ್ಲಿರುವ ಭಕ್ತರೊಂದಿಗೆ ಮಾತನಾಡುತ್ತಾ ಕೆಲವು ಮಾತುಗಳು ಹೇಳುವುದು ನಡೆದಿದೆ. "ಆದಿತ್ಯವಾರ ಎಲ್ಲೂ ಪ್ರಯಾಣ ಮಾಡಬೇಡ. ಸೋಮವಾರ ಹೊಸ ವಸ್ತ್ರಗಳು ಧರಿಸಬೇಡ. ಮಂಗಳವಾರ ತಲೆಸ್ನಾನ ಮಾಡಬೇಡ. ಬುಧವಾರ ಗುಡಿಗೆ ಹೋಗಬೇಡ. ಗುರುವಾರ ಮಾಂಸ ತಿನ್ನಬೇಡ. ಶುಕ್ರವಾರ ಮನೆ ಶುಭ್ರ ಮಾಡಿಕೊಂಡು ದೇವತಾಪೂಜೆ ಮಾಡು. ಶನಿವಾರ ಸಾಲ ಮಾಡಬೇಡ"

ಎಂದು ಹೇಳಿದೆ. ಈ ವಿಧವಾಗಿ ರಾಮಾಪುರದಲ್ಲಿ ನರಸಿಂಹ ಸ್ವಾಮಿ ಕೆಲವು ನಿಯಮಗಳು ಇಟ್ಟಾಗ, ತುರಕಪಲ್ಲೆ ದೊಡ್ಡಮ್ಮ ಕೆಲವು ನಿಯಮಗಳನ್ನು ಇಟ್ಟಿದೆ. ರಾಮಾಪುರ ಪ್ರಜೆಗಳು ನರಸಿಂಹಸ್ವಾಮಿಯೇ ನಿಜವಾದ ದೇವರೆಂದು ಪೂಜಿಸುತ್ತಾ, ಆತನು ಹೇಳಿರುವುದೇ ದೈವವಾಕ್ಕುಗಳಾಗಿ ಭಾವಿಸಿ ಆ ವಾಕ್ಯಗಳನ್ನೇ ತಪ್ಪದೇ ಆಚರಿಸುತ್ತಾ, ಉಳಿದ ಗ್ರಾಮಗಳ ಪ್ರಜೆಗಳನ್ನು ಸಹ ಆಚರಿಸೆಂದು ಹೇಳುತ್ತಿದ್ದರು. ಅದೇ ರೀತಿ ತುರಕಪಲ್ಲೆದವರೂ ಸಹ ತಮ್ಮ ಗ್ರಾಮದೇವತೆಯಾದ ದೊಡ್ಡಮ್ಮ ಹೇಳಿದ ವಾಕ್ಯಗಳನ್ನೇ ಪೂರ್ತಿಯಾಗಿ ದೈವ ವಾಕ್ಯಗಾಳಗಿ ಲೆಕ್ಕಿಸಿ ಅವರು ಆಚರಿಸುವುದೇ ಅಲ್ಲದೆ ಉಳಿದ ಸುತ್ತ ಮುತ್ತ ಗ್ರಾಮಗಳ ಪ್ರಜೆಗಳನ್ನು ಸಹ ಆಚರಿಸೆಂದು, ಹಾಗೆ ಆಚರಿಸುವುದರಿಂದ ಮನುಷ್ಯನಿಗೆ ಎಂತಹ ಕಷ್ಟಗಳು ಬರುವುದಿಲ್ಲವೆಂದೂ, ಅದೇ ನಿಜವಾದ ಜ್ಞಾನ ಆಚರಣೆ ಎಂದು ಹೇಳುತ್ತಿದ್ದರು. ಹೀಗೆ ರಾಮಾಪುರದವರು ಆಚರಿಸುವ ಆಚರಣಗಳೇ ನಿಜ ಜ್ಞಾನವೆಂದು ಪ್ರಚಾರ ಮಾಡಿದಾಗ, ತುರಕಪಲ್ಲೆದವರು ಸಹ ತಮ್ಮ ದೇವತೆ ಹೇಳಿರುವುದೇ ನಿಜ ಜ್ಞಾನವೆಂದು ಹೇಳಿಕೊಳ್ಳುತ್ತಿದ್ದರು.

ರಾಮಾಪುರದವರು ಆದಿತ್ಯವಾರ ಪೂರ್ವಕ್ಕೆ ಪ್ರಯಾಣ ಮಾಡದಿರುವಾಗ, ತುರಕಪಲ್ಲೆದವರು ಯಾವ ದಿಶೆಗೂ ಹೋಗುವವರಲ್ಲ. ರಾಮಾಪುರದವರು ಸೋಮವಾರ ಮಾಂಸ ತಿನ್ನದಿರುವಾಗ, ತುರಕಪಲ್ಲೆದವರು ಗುರುವಾರ ತಿನ್ನದಂತೆ ಇದ್ದರು. ಈ ವಿಧವಾಗಿ ಯಾರಿಗೆ ಅವರು ತಮ್ಮದು ದೊಡ್ಡ ದೈವಜ್ಞಾನ ಎಂದು ಪ್ರಚಾರ ಮಾಡುತ್ತಾ, ರಾಮಾಪುರದವರು ತುರಕಪಲ್ಲೆದವರು ಹೇಳಿರುವುದು ಒಪ್ಪಿಕೊಳ್ಳದೇ ಇರುವಾಗ, ತುರಕಪಲ್ಲೆದವರು ರಾಮಾಪುರದವರು ಹೇಳಿರುವುದು ಒಪ್ಪಿಕೊಳ್ಳದೇ ತಮ್ಮದೇ ದೊಡ್ಡ ಆಚರಣೆಯೆಂದು ಹೇಳುತ್ತಿದ್ದರು. ಹೀಗೆ ಯಾರಿಗೆ ಅವರು ತಮ್ಮದೇ ದೊಡ್ಡ ಜ್ಞಾನವೆಂದು ವಾದಿಸಿಕೊಳ್ಳುತ್ತಿದ್ದರು. ಸ್ವಲ್ಪ ಕಾಲಕ್ಕೆ ರಾಮಾಪುರದಲ್ಲಿನ ನರಸಿಂಹಸ್ವಾಮಿ ದೇವರೇ ಅಲ್ಲವೆಂದು, ತುರಕಪಲ್ಲೆದಲ್ಲಿನ ತಮ್ಮ ದೊಡ್ಡಮ್ಮೇ ನಿಜವಾದ ಶಕ್ತಿ ಇರುವ ದೇವತೆಯೆಂದು ತುರಕಪಲ್ಲೆದವರು ಎಂದಾಗ! ತುರಕಪಲ್ಲೆದಲ್ಲಿನ ದೊಡ್ಡಮ್ಮ ದೇವತೆಯೇ

ಅಲ್ಲವೆಂದು, ರಾಮಾಪುರದಲ್ಲಿನ ತಮ್ಮ ನರಸಿಂಹಸ್ವಾಮಿಯೇ ನಿಜವಾದ ದೇವರೆಂದೂ ರಾಮಾಪುರದವರು ಎನ್ನುತ್ತಿದ್ದರು.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೇ! **ದೇವರ ಜ್ಞಾನ ದೇವರಿಗೇ ತಿಳಿದಿದೆ, ಆದ್ದರಿಂದ ದೇವರ ಜ್ಞಾನವನ್ನು ದೇವರೇ ಹೇಳಬೇಕು** ಎಂಬ ಮಾತು ವಾಸ್ತವವೇ. ಆದರೇ ಯಾವುದು ದೇವರ ಮಾತು? ಯಾರು ದೇವರು? ಎಂದು ಮೊದಲು ತಿಳಿದರೇ ನಂತರ ದೈವಜ್ಞಾನವನ್ನು ಸುಲಭವಾಗಿ ಆಶ್ರಯಿಸಬಹುದು. ಮೊದಲು **'ಯಾರು ದೇವರು?"** ಎಂದು ತಿಳಿಯದೇ ಇದು ದೇವರ ಮಾತು ಎಂದು ನಿರ್ಣಯಿಸಿ ಹೇಳುವುದಕ್ಕೆ ಸಾಧ್ಯವಿದಿಲ್ಲ. ಹಾಗೆಂದು ಯಾರನ್ನೋ ದೇವರು ಅಲ್ಲದವರನ್ನು ದೇವರೆಂದು ನಂಬಿದರೇ, ಅವರಲ್ಲಿ ದೈವತ್ವ ಇಲ್ಲದಿರುವಾಗ ಅವರ ಮಾತು ದೈವವಾಕ್ಕು ಎಂದು ಹೇಳಲಾಗುವುದಿಲ್ಲ. ಅಂತಹವರು ಹೇಳಿದ ಮಾತುಗಳು ದೇವರ ಜ್ಞಾನವೇ ಅಲ್ಲವೆಂದು ಹೇಳಬಹುದು. ಇಲ್ಲಿ ನಾವು ಹೇಳಿಕೊಂಡಿರುವುದರ ಪ್ರಕಾರ ರಾಮಾಪುರದವರಿಗೆ ನರಸಿಂಹಸ್ವಾಮಿ ದೇವರಾದರೇ, ತುರಕಪಲ್ಲೆದವರಿಗೆ ದೊಡ್ಡಮ್ಮ ದೇವರೆಂದು ಭಾವಿಸಲಾಗಿದೆ. ಆದರೇ ಅವರಿಬ್ಬರಲ್ಲಿ ದೈವತ್ವ ಇಲ್ಲದಿರುವಾಗ ಅವರ ಮಾತುಗಳು ದೈವ ವಾಕ್ಕುಗಳು ಅಲ್ಲ. ಅವರದು ದೈವಜ್ಞಾನವಲ್ಲ. ಅಂತಹ ಸಂದರ್ಭದಲ್ಲಿ ದೇವರು ಅಲ್ಲದಿರುವುದನ್ನು ದೇವರೆಂದು ನಂಬಿದ ಪ್ರತಿ ಮನುಷ್ಯ ಮೋಸಹೋಗುತ್ತಾನೆ. ದೈವಜ್ಞಾನ ಅಲ್ಲದನ್ನು ದೈವಜ್ಞಾನವೆಂದು ನಂಬಿದ ಪ್ರತಿ ಮನುಷ್ಯ ಮೋಸಹೋದಂತೇಯಾಗುತ್ತದೆ. ನರಸಿಂಹಸ್ವಾಮಿ ಹೇಳಿದ ಮಾತುಗಳಾಗಲೀ, ದೊಡ್ಡಮ್ಮ ಹೇಳಿದ ಮಾತುಗಳಾಗಲೀ ಎರಡೂ ಪ್ರಪಂಚಕ್ಕೆ ಸಂಬಂಧಿಸಿರುವವೇ ಯಾಗುತ್ತವೆ. ಒಟ್ನಲ್ಲಿ ಪ್ರಯಾಣ ವಿಷಯ ಪ್ರಪಂಚ ಸಂಬಂಧವಾಗಿರುವುದೇ ಅಗಲೀ ದೈವ ಸಂಬಂಧವಾಗಿರುವುದಲ್ಲ. ತಲೆ ಸ್ನಾನ ಮಾಡುವುದಾಗಲೀ ಹೊಸ ವಸ್ತ್ರಗಳು ಧರಿಸುವುದಾಗಲೀ, ಮಾಂಸ ತಿನ್ನುವುದಾಗಲೀ, ಮನೆ ಶುಭ್ರಮಾಡಿಕೊಳ್ಳುವುದಾಗಲೀ, ಸಾಲ ಮಾಡುವುದಾಗಲೀ ಹಾಗೇ ಅನ್ಯದೇವತಾರಾಧನೆ ಮಾಡುವುದಾಗಲೀ ಎಲ್ಲಾ ಪ್ರಪಂಚ ವಿಷಯಗಳೇ ಆಗುತ್ತವೆ.

ಪ್ರಪಂಚ ವಿಷಯಗಳನ್ನು ಹೇಳುವವರನ್ನು ಪ್ರಪಂಚ ಸಂಬಂಧವಾಗಿಯೇ ಭಾವಿಸಬೇಕು. ದೈವ ವಿಷಯಗಳನ್ನು ಹೇಳುವವರನ್ನು ದೈವ ಸಂಬಂಧವಾಗಿಯೇ ಭಾವಿಸಬೇಕು. ಇಲ್ಲಿ ನರಸಿಂಹಸ್ವಾಮಿ ಮತ್ತು ದೊಡ್ಡಮ್ಮ ಹೇಳಿದ ಮಾತುಗಳನ್ನನುಸರಿಸಿ ಅವರಿಬ್ಬರನ್ನೂ ದೇವರಾಗಿ ಲೆಕ್ಕಿಸುವುದಕ್ಕೆ ಆಗುವುದಿಲ್ಲ. ಆದರೇ ರಾಮಾಪುರದವರು, ತುರಕಪಲ್ಲೆದವರು ಎಲ್ಲರೂ ದೇವರಲ್ಲದ ದೇವರನ್ನು, ದೈವತ್ವವಿಲ್ಲದ ದೇವತೆಗಳನ್ನು ಅವರು ದೇವರಾಗಿ ವಿಶ್ವಾಸಿಸುವುದು ನಡೆದಿದೆ. ವಿಷವನ್ನು ತಿಳಿಯದೆ ತಿನ್ನುವ ಆಹಾರವೇ ಎಂದು ನಂಬಿ ತಿಂದರೂ ವಿಷ ತನ್ನ ಕೆಲಸವನ್ನು ತಾನು ಮಾಡುತ್ತದೆ. ವಿಷವನ್ನು ಆಹಾರವೆಂದು ನಂಬಿದರೂ ಅದು ವೃಥಾ ನಂಬಿಕೆಯಾಗುತ್ತದೆ. ಹಾಗೆಯೇ ದೇವರು ಅಲ್ಲದಿರುವವರನ್ನು ದೇವರೆಂದು ಯಾರು ನಂಬಿದರೂ ಅವರ ನಂಬಿಕೆ ವೃಥಾ ಆಗುತ್ತದೆ. ಅವರು ದೇವರೊಂದಿಗೆ ಸಮಾನವಾಗಲೀ, ದೇವರಾಗಲೀ ಅಲ್ಲ. ದೇವರ ವಿಧಾನ ತಿಳಿಯದವರೆಲ್ಲರೂ **"ದೇವರು ಯಾರು?"** ಎಂದು ತಿಳಿಯದೆ ದೇವರು ಅಲ್ಲದವರನ್ನು ದೇವರೆಂದು ನಂಬಿ ಮೋಸ ಹೋಗುವುದು ನಡೆಯುತ್ತಿದೆ. ಅವರ ಜೀವನಗಳನ್ನು ದೇವರು ಅಲ್ಲದ ಅನ್ಯದೇವತೆಗಳ ಭಕ್ತಿಯಲ್ಲಿ ವೃಥಾ ಮಾಡಿಕೊಳ್ಳುವುದು ನಡೆಯುತ್ತಿದೆ. ಈ ದಿನ ಭೂಮಿ ಮೇಲೆ ಪ್ರತಿ ಮನುಷ್ಯ ಯಾವುದೋ ಒಂದು ದೇವರನ್ನು, ಯಾವುದೋ ಒಂದು ಜ್ಞಾನವನ್ನು ನಂಬಿ, ಅವರು ಕಲಿತುಕೊಂಡ ಜ್ಞಾನದ ಪ್ರಕಾರ ನಡೆದುಕೊಳ್ಳುತ್ತಿದ್ದಾರೆ. ಆ ಸೂತ್ರದ ಪ್ರಕಾರ ಉಗ್ರವಾದಿ ಕೂಡಾ ತಾನು ನಂಬಿದ ಜ್ಞಾನದ ಪ್ರಕಾರ, ತಾನು ಕಲಿತ ಜ್ಞಾನದ ಪ್ರಕಾರ ತಾನು ಮಾಡುವ ಉಗ್ರವಾದ ಸರಿಯಾದುದೇಯೆಂದು ಅಂದುಕೊಳ್ಳುತ್ತಿದ್ದಾನೆ. ಈ ವಿಧವಾಗಿ ಪ್ರತಿ ಮನುಷ್ಯ ತನಗೆ ತಿಳಿದ ಜ್ಞಾನದ ಪ್ರಕಾರ ನಡೆದುಕೊಳ್ಳುತ್ತಾ, ಅದೇ ನಿಜವಾದ ಜ್ಞಾನವೆಂದೂ, ತಾನು ನಂಬಿರುವುದೇ ನಿಜವಾದ ದೇವರೆಂದು ಅಂದುಕೊಳ್ಳುತ್ತಿದ್ದಾನೆ. **ಒಬ್ಬ ಮನುಷ್ಯ ನಂಬಿಕೊಂಡಿರುವುದು ನಿಜವಾದ ದೈವ ಆದಾಗ ಆತನು ನಿಜವಾದ ದೈವಜ್ಞಾನದ ಪ್ರಕಾರವೇ ನಡೆದುಕೊಳ್ಳುವನು. ಹಾಗೆ ನಡೆದುಕೊಂಡವನಿಂದ ಸಮಸ್ಯೆ ಎಷ್ಟು ಮಾತ್ರ ಇರುವುದಿಲ್ಲ. ದೇವರು ಅಲ್ಲದವನನ್ನು ದೇವರೆಂದು ನಂಬಿದವನೊಂದಿಗೇ ಭೂಮಿ ಮೇಲೆ ಸಮಸ್ಯೆಗಳು ಏರ್ಪಡುತ್ತಿವೆ.**

ಹಿಂದೂಮತದಲ್ಲಿ ಎಷ್ಟೋಮಂದಿ ದೇವತೆಗಳನ್ನು ಆಶ್ರಯಿಸಿದವರು ಇದ್ದಾರೆ. ಅವರಲ್ಲಿ ಯಾರು ನಂಬಿದ ದೇವರನ್ನು ಅವರು ದೊಡ್ಡವನೆಂದು ಹೇಳಿಕೊಳ್ಳುವುದು ನಡೆಯುತ್ತಿದೆ. ಒಬ್ಬನು ರಾಮನನ್ನು ದೇವರೆಂದು ಪೂಜಿಸಿದರೇ, ರಾಮನಿಗಿಂತ ಆಂಜನೇಯನೇ ದೊಡ್ಡವನೆಂದು ನಂಬುವವರು ಕೆಲವರು ಇದ್ದಾರೆ. ತಿರುಪತಿ ವೆಂಕಟೇಶ್ವರನು ದೊಡ್ಡವನು, ಆತನೇ ನಿಜವಾದ ದೇವರು ಎಂದು ಒಬ್ಬನೆಂದರೆ, ಮತ್ತೊಬ್ಬನು ನರಸಿಂಹಸ್ವಾಮಿಯೇ ದೊಡ್ಡವನೆಂದು ಆತನನ್ನು ಮೀರಿದ ದೇವರು ಇಲ್ಲವೆಂದು ಅನ್ನುತ್ತಿದ್ದಾನೆ. ಹೀಗೆ ಒಂದು ಹಿಂದೂ ಮತದಲ್ಲಿ ದೇವರ ವಿಷಯದಲ್ಲಿ ಏಕಾಭಿಪ್ರಾಯವಿಲ್ಲದೆ ಯಾರಿಗೆ ತೋಚಿದಹಾಗೆ ಅವರು ಈತನೇ ದೇವರೆಂದು ಬೇರೆ ಬೇರೆ ಅಭಿಪ್ರಾಯಗಳಿಂದ ಬೇರೆಬೇರೆ ದೇವತೆಗಳನ್ನು ಹೇಳುತ್ತಿದ್ದಾರೆ. ಇನ್ನು ಇತರ ಮತಗಳ ವಿಷಯದೊಳಗೆ ಬಂದರೆ ಒಂದು ಮತದವರು ನಿರ್ಣಯಿಸಿ ಹೇಳಿದ ದೇವರನ್ನು ಮತ್ತೊಂದು ಮತದವರು ಒಪ್ಪಿಕೊಳ್ಳುತ್ತಿಲ್ಲ. ಒಂದೊಂದು ಮತದವರು ಒಂದೊಂದು ದೇವತೆಗಳನ್ನು ನಮ್ಮ ದೇವರೇ ನಿಜವಾದ ದೇವರೆಂದು ಹೇಳುವುದು ನಡೆಯುತ್ತಿದೆ. ಒಟ್ಟಾರೆ ಪ್ರಪಂಚದಲ್ಲಿ ಹನ್ನೆರಡು ಮತಗಳಿರುವಾಗ ಅದರಲ್ಲಿ ದೊಡ್ಡವು, ಮುಖ್ಯವಾದವು, ಶಾಸ್ತ್ರಬದ್ಧ ದೈವಜ್ಞಾನ ಇರುವವು ಮೂರು ಮಾತ್ರವೇ ಇವೆ. ಆ ಮೂರು ಮತಗಳ ಹೆಸರುಗಳನ್ನು ಹೇಳಿದರೆ ಹಿಂದೂ, ಕ್ರೈಸ್ತವ, ಇಸ್ಲಾಮ್ ಮತಗಳಾಗಿ ಹೇಳಬಹುದು. ಈ ಮೂರು ಮತಗಳು ಸಹ ಒಬ್ಬರು ಹೇಳಿದ ದೇವರನ್ನು ಮತ್ತೊಬ್ಬರು ಒಪ್ಪಿಕೊಳ್ಳುತ್ತಿಲ್ಲ. ಈ ವಿಧವಾಗಿ ಹನ್ನೆರಡು ಮತಗಳು ಒಬ್ಬೊಬ್ಬರು ಒಂದೊಂದು ಮಾರ್ಗದಲ್ಲಿ ನಡೆಯುವುದನ್ನು ಪ್ರಾರಂಭಿಸಿ, ಒಬ್ಬೊಬ್ಬರು ಒಂದೊಂದು ದೇವರನ್ನು ಅವರ ಮತಗಳಲ್ಲಿ ಪ್ರತಿಪಾದಿಸಿ ಹೇಳುತ್ತಿದ್ದಾರೆ. ಮುಖ್ಯವಾದ ಹಿಂದೂ, ಕ್ರೈಸ್ತ, ಇಸ್ಲಾಮ್ ಮತಗಳಲ್ಲಿ ಬೇರೆಬೇರೆ ದೇವತೆಗಳನ್ನು ತಮ್ಮ ದೇವರೆಂದು ಹೇಳಿಕೊಂಡರೂ, ಅವರ ಮಾರ್ಗದಲ್ಲಿ ಅಭಿಪ್ರಾಯಬೇಧಗಳು ಇವೆ. ಇಸ್ಲಾಮ್ ಮತದಲ್ಲಿ ಅಲ್ಲಾನೇ ದೇವರೆಂದು ಎಲ್ಲರೂ ಹೇಳಿದರೂ, ಅವರು ನಡೆದುಕೊಳ್ಳುವ ಮಾರ್ಗದಲ್ಲಿ, ಆಚರಿಸುವ ವಿಧಾನದಲ್ಲಿ ಬೇರೆ ಬೇರೆ ಗುಂಪುಗಳಾಗಿ ತಯಾರಾಗಿ ನಮ್ಮದೇ

ಸರಿಯಾದ ಮಾರ್ಗವೆಂದು ಅವರ ಮತದಲ್ಲಿ ಅವರೇ ವಾದಿಸಿಕೊಳ್ಳುವುದು ನಡೆಯುತ್ತಿದೆ. ಅಲ್ಲಾನೇ ದೇವರೆಂದು ಹೇಳುವ ಇಸ್ಲಾಮ್‌ನಲ್ಲಿ ಒಂದು ವಿಧವಾಗಿ ಹೇಳಿದರೆ ಎರಡು ವಿಧಗಳ ಸೀಳಿಕೆಗಳಿವೆಯೆಂದು ಹೇಳಬಹುದು, ಮತ್ತೊಂದು ವಿಧವಾಗಿ ಹೇಳಿದರೇ 73 ವಿಧಗಳ ಸೀಳಿಕೆಗಳಿವೆಯೆಂದು ಹೇಳಬಹುದು. ಒಂದೇ ದೇವರನ್ನು ನಂಬಿದವರು 73 ವಿಧಗಳಾಗಿ ಇದ್ದಾರೆಂದರೇ ವಿಚಿತ್ರವೇ ಅಲ್ಲವೆ!

ಮನುಷ್ಯನಿಗೆ ಇಂದಿನವರೆಗೂ ಸಂಪೂರ್ಣವಾಗಿ ಅರ್ಥವಾಗದ ದೈವಜ್ಞಾನ ಸೃಷ್ಟ್ಯಾದಿಯಲ್ಲಿಯೇ ದೇವರು ಆಕಾಶವಾಣಿಯಿಂದ ಹೇಳಿದ್ದಾನೆ. ಅಂದಿಗೆ ಅರ್ಥವಾದರೂ ನಂತರ ಕಾಲದಲ್ಲಿ ಬಂದಿರುವ ಮನುಷ್ಯರಿಗೆ ಜ್ಞಾನ ಧರ್ಮಯುಕ್ತವಾಗಿ ತಿಳಿಯದಂತೆ ಹೋಗಿದೆ. ಅಧರ್ಮಗಳಿಂದ ಕೂಡಿದ ಜ್ಞಾನ ತಿಳಿಯುವುದರಿಂದ ಅಸಲಾದ ದೇವರು ಯಾರೋ ಮನುಷ್ಯರಿಗೆ ತಿಳಿಯದಂತೆ ಹೋಗಿದೆ. ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರಬಹುದು ಅದೇನೆಂದರೇ! ದೇವರು ಸೃಷ್ಟ್ಯಾದಿಯಲ್ಲಿ ಸಂಪೂರ್ಣವಾಗಿ ಜ್ಞಾನವನ್ನು ಹೇಳಿದಾಗ ಆಗ ದೈವಜ್ಞಾನ ಕೆಲವರಿಗಾದರೂ ತಿಳಿದಿರುತ್ತದೆ ಅಲ್ಲವೆ! ಒಂದುಬಾರಿ ತಿಳಿದ ಜ್ಞಾನ ಆ ಜನ್ಮದೊಂದಿಗೇ ಅಂತ್ಯವಾಗದೇ ಎರಡನೆಯ ಜನ್ಮಕ್ಕೂ ಸಹ ಜ್ಞಾನ ಬರುತ್ತದಲ್ಲವೆ! ಹಾಗಿರುವಾಗ ಒಂದು ಬಾರಿ ದೈವಜ್ಞಾನ ಧರ್ಮಯುಕ್ತವಾಗಿ ಇರುವುದು ನಡೆದರೇ ಎಂದಿಗೂ ಎಷ್ಟು ಜನ್ಮಗಳಿಗಾದರೂ ಹಾಗೇ ಇರುತ್ತದಲ್ಲವೆ! ಆ ವಿಧವಾಗಿ ಇರುವಾಗ ಒಂದು ಬಾರಿ ಇರುವ ದೈವಜ್ಞಾನ ನಂತರ ಕಾಲದಲ್ಲಿ ಮನುಷ್ಯರ ಹತ್ತಿರ ಏಕೆ ಇಲ್ಲದಂತೆ ಹೋಗಿದೆಯೆಂದು, ಏಕೆ ಅಧರ್ಮವಾಗಿ ಬದಲಾಗಿದೆಯೆಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಹೀಗೆ ಇದೆ. ಭಗವದ್ಗೀತೆಯಲ್ಲಿ ಇಂತಹ ಪ್ರಶ್ನೆಯನ್ನೇ ಅರ್ಜುನನು ಕೇಳಿದಾಗ **"ಒಂದು ಬಾರಿ ಜ್ಞಾನವನ್ನು ತಿಳಿದವರು ಪೂರ್ತಿ ಮೋಕ್ಷ ಹೊಂದದೇ ಹೋದರೇ, ಪುನಃ ಅದೇ ಜ್ಞಾನದಿಂದ ಜ್ಞಾನಿಗಳ ಮನೆಯಲ್ಲಾಗಲೀ, ಯೋಗಿಗಳ ಮನೆಯಲ್ಲಾಗಲೀ ಜನ್ಮಿಸುತ್ತಾರೆ"** ಎಂದು ಹೇಳಿರುವುದರಿಂದ ಕಲಿತ ದೈವಜ್ಞಾನ ಮರಣದೊಂದಿಗೆ ಹೋಗುವುದಿಲ್ಲ, ನಂತರ ಜನ್ಮಕ್ಕೂ ಸಹ ಬರುತ್ತದೆ. ಜ್ಞಾನವನ್ನು ಹೊಂದಿದವನು

ಕರ್ಮ ಉಳಿದು ಜನ್ಮಕ್ಕೆ ಹೋದರೇ ಹಾಗೆ ನಡೆಯುತ್ತದೆ. ಒಂದುವೇಳೆ ಅದೇ ಜನ್ಮದಲ್ಲೇ ಮೋಕ್ಷವನ್ನು ಹೊಂದಿದರೇ ಆತನು ಪುನಃ ಹುಟ್ಟುವುದಿಲ್ಲ. ಆತನ ಜ್ಞಾನ ಆತನನ್ನು ದೇವರ ಹತ್ತಿರಕ್ಕೆ ಸೇರಿಸುತ್ತದೆ. ಒಬ್ಬ ವ್ಯಕ್ತಿ ದೈವಜ್ಞಾನವನ್ನು ತಿಳಿದು ಮೋಕ್ಷವನ್ನು ಹೊಂದಿದರೇ ಆತನು ಭೂಮಿ ಮೇಲೆ ಇಲ್ಲದಂತೆ ಹೋಗುವನು. ಹಾಗೆ ಜ್ಞಾನಿಗಳೆಲ್ಲರೂ ಮೋಕ್ಷವನ್ನು ಹೊಂದಿದರೇ ಉಳಿದವರು ಅಜ್ಞಾನಿಗಳೇ ಇರುತ್ತಾರೆ. ಆಗ ಧರ್ಮಗಳಿಂದ ಕೂಡಿದ ಜ್ಞಾನವನ್ನು ತಿಳಿದವರು ಇಲ್ಲದಂತೆ ಹೋಗಿ ದೈವಜ್ಞಾನ ತಿಳಿಯದವರಿರುವುದರಿಂದ ಅಧರ್ಮಗಳಿಂದ ಕೂಡಿದ ಜ್ಞಾನ ವೃದ್ಧಿ ಆಗಬಲ್ಲದು. ಆದ್ದರಿಂದ ಭೂಮಿಮೇಲಿರುವ ಜ್ಞಾನಿಗಳು ಮೋಕ್ಷ ಹೊಂದಿದಾಗ, ಉಳಿದ ಅಜ್ಞಾನಿಗಳಲ್ಲಿ ಅಧರ್ಮಗಳಿಂದ ಕೂಡಿದ ಜ್ಞಾನ ಅಭಿವೃದ್ಧಿ ಹೊಂದುತ್ತಿದೆ. ಆಗ ದೇವರು ಪುನಃ ತನ್ನ ಜ್ಞಾನವನ್ನು ಧರ್ಮಯುಕ್ತವಾಗಿ ಬೋಧಿಸಬೇಕಾಗಿದೆ.

ಮನುಷ್ಯ ದೈವಜ್ಞಾನವನ್ನು ತಿಳಿಯದವನಾಗಿ, ತನಗೆ ತಿಳಿದಿರುವುದೇ ದೈವಜ್ಞಾನವೆಂದು ಅಂದುಕೊಳ್ಳುವುದರಿಂದ ಅಧರ್ಮ ಜ್ಞಾನ ವೃದ್ಧಿ ಆಗುತ್ತಿದೆ. ದೈವ ಜ್ಞಾನವನ್ನು ದೇವರು ಸೃಷ್ಟ್ಯಾದಿಯಲ್ಲಿಯೇ ಸಂಪೂರ್ಣವಾಗಿ ಬೋಧಿಸಿದ್ದರೂ, ಅದು ಕೆಲವರಿಗೆ ಮಾತ್ರವೇ ಅರ್ಥವಾಗುವುದರಿಂದ ಉಳಿದವರಿಗೆ ತಿಳಿಯದೆಂದೇ ಹೇಳಬಹುದು. ಅರ್ಥವಾದವರು ಮೋಕ್ಷವನ್ನು ಹೊಂದಿದಾಗ, ಅರ್ಥವಾಗದ ಅಜ್ಞಾನಿಗಳು ನಾವು ಜ್ಞಾನಿಗಳೆಂದು ಅವರಿಗೆ ತಿಳಿದ ಜ್ಞಾನವನ್ನು ಅವರು ಹೇಳುವುದರಿಂದ ಅಜ್ಞಾನ ಸುಲಭವಾಗಿ ಅಭಿವೃದ್ಧಿಯಾಗುತ್ತಿದೆ. ಹಾಗೆ ಅಭಿವೃದ್ಧಿಯಾದ ಅಜ್ಞಾನವನ್ನು ಇಲ್ಲದಂತೆ ಮಾಡಿ ಪುನಃ ಜ್ಞಾನವನ್ನು ಪ್ರತಿಷ್ಠಿಸುವುದಕ್ಕೆ ಪ್ರತಿ ಯುಗದಲ್ಲಿ ದೇವರು ಪ್ರಯತ್ನಿಸುತ್ತಲೇ ಇರುತ್ತಾನೆ. ಆದರೆ ದೇವರು ಪ್ರತ್ಯಕ್ಷವಾಗಿ ಯಾವ ಮನುಷ್ಯನಿಗೂ ತನ್ನ ಜ್ಞಾನವನ್ನು ಹೇಳಲಿಲ್ಲ, ನಡೆಯಬೇಕಾಗಿರುವ ಕಾಲದಲ್ಲಿಯೂ ಸಹ ಹೇಳುವುದಿಲ್ಲ. ದೇವರು ರೂಪ, ನಾಮ, ಕ್ರಿಯೆಗಳು ಇಲ್ಲದವನಾಗಿ ಇರುವು ದರಿಂದ ಯಾವ ಮನುಷ್ಯನೊಂದಿಗೂ ನೇರವಾಗಿ ಮಾತನಾಡುವುದಕ್ಕೆ ಅವಕಾಶವಿಲ್ಲ. ದೇವರ ಜ್ಞಾನ ದೇವರಿಗೆ ಹೊರತು ಯಾವ ಮನುಷ್ಯನಿಗೂ

ತಿಳಿದಿಲ್ಲ. ಆದ್ದರಿಂದ ದೇವರ ಜ್ಞಾನವನ್ನು ದೇವರೇ ಹೇಳಬೇಕಾಗಿರುತ್ತದೆ. ದೇವರು ಪ್ರತ್ಯಕ್ಷವಾಗಿ ಯಾರೊಂದಿಗೂ ಮಾತನಾಡುವುದಿಲ್ಲ, ಆದ್ದರಿಂದ ದೇವರು ತನ್ನ ಜ್ಞಾನವನ್ನು ಪರೋಕ್ಷವಾಗಿ ಮನುಷ್ಯರಿಗೆ ಹೇಳುವುದಕ್ಕೆ ಏರ್ಪಾಟು ಮಾಡಿಕೊಂಡಿದ್ದಾನೆ. ಒಂದು ಬಾರಿ ಸೃಷ್ಟ್ಯಾದಿಯಲ್ಲಿ ಆಕಾಶವಾಣಿಯಿಂದ ಜ್ಞಾನವನ್ನು ಹೇಳುವುದು ನಡೆದಿದೆ. ದೇವರು ತನ್ನ ಜ್ಞಾನವನ್ನು ಮನುಷ್ಯರಿಗೆ ಮೂರು ವಿಧಗಳಾಗಿ ಬೋಧಿಸಬೇಕೆಂದುಕೊಂಡಿದ್ದಾನೆ. ಆ ಮೂರು ವಿಧಾನಗಳಲ್ಲಿ ಒಂದು ವಿಧಾನ ಆಕಾಶವಾಣಿಯಿಂದ ಹೇಳುವುದು ನಡೆದಿದೆ. ಅದು ಅಲ್ಲದೇ ಇನ್ನೂ ಎರಡು ವಿಧಾನಗಳ ಪ್ರಕಾರ ದೇವರು ಮನುಷ್ಯನಿಗೆ ತನ್ನ ಜ್ಞಾನವನ್ನು ತಿಳಿಸುವನು. ಅದರಲ್ಲಿ ಒಂದು ತೆರೆಮರೆಯಿಂದ ಹೇಳುವುದು, ಎರಡನೆಯದು ಪ್ರತ್ಯಕ್ಷವಾಗಿ ಕಾಣಿಸುವ ಒಂದು ಆಕಾರದಿಂದ ಹೇಳುವುದು. ತೆರೆಮರೆಯಿಂದ ಅಂದರೆ ಹೇಳುವವನು ಕಾಣಿಸದಂತಿದ್ದು ಹೇಳುವುದು ಆದಾಗ, ಪ್ರತ್ಯಕ್ಷವಾಗಿ ತಾನು ಧರಿಸಿದ ಆಕಾರದಿಂದ ಹೇಳಿಸುವುದು ಮೂರನೆಯ ವಿಧಾನವಾಗಿದೆ. ನಡೆದುಹೋದ ಚರಿತ್ರೆಯಲ್ಲಿ ಈ ಮೂರು ವಿಧಗಳ ಬೋಧನೆಗಳು ಮುಗಿದುಹೋಗಿವೆ.

ದೇವರಿಗೆ ರೂಪವಿರುವುದಿಲ್ಲ, ಆದರೂ ದೇವರು ರೂಪವನ್ನು ಧರಿಸಿ ಮಾರು ವೇಷದಲ್ಲಿ ಬಂದು ತನ್ನ ಜ್ಞಾನವನ್ನು ತಾನೇ ಹೇಳುವನು. ಮಾರುವೇಷ ದಲ್ಲಿ ಬಂದಿರುವವನನ್ನು ಯಾರೂ ಗುರುತಿಸಲಾರರು, ಆದ್ದರಿಂದ ಮಾರುವೇಷದಲ್ಲಿ ಇರುವವನನ್ನು ದೇವರೆಂದು ಹೇಳಲಾರೆವು. ವಾಣಿಯಿಂದ ಜ್ಞಾನವನ್ನು ಹೇಳಿದರೂ ಆಗಲೂ ಸಹ ದೇವರ ಜ್ಞಾನವನ್ನು ಹೇಳಿದ್ದಾನೆಂದು ಯಾರೂ ಕಂಡುಕೊಳ್ಳಲಾರರು. ಇನ್ನು ಒಂದು ಹೆಸರು ಇರುವವನಾಗಿದ್ದೂ, ಕಾಣಿಸದೆ ಮಾತನಾಡುವ ವ್ಯಕ್ತಿಯಿಂದ ಜ್ಞಾನವನ್ನು ಹೇಳಿಸಿದರೂ, ಅದು ಆ ಪದ್ಧತಿಯಿಂದ ದೇವರಿಂದ ಹೇಳಲಾಗಿದೆಯೆಂದು ಯಾರೂ ಅಂದುಕೊಳ್ಳುವುದಿಲ್ಲ. ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಮನುಷ್ಯರಿಗೆ ಜ್ಞಾನ ತಿಳಿಯದಂತೆ ಹೋಗಿರುವಾಗ ನಾನೇ ಬಂದು ಜ್ಞಾನವನ್ನು ಹೇಳುತ್ತೇನೆಂಬ ದೇವರ ಮಾತು ತಿಳಿದಿದೆ. ಅಂತಿಮ ದೈವಗ್ರಂಥವೆನ್ನುವ ಖುರ್‌ಆನ್ ಗ್ರಂಥದಲ್ಲಿ ದೇವರು

ದೇವರಾಗಿ ಪ್ರತ್ಯಕ್ಷವಾಗಿ ಯಾರೊಂದಿಗೂ ಮಾತನಾಡದೆ, ಪರೋಕ್ಷವಾದ ಮೂರು ಪದ್ಧತಿಗಳಿಂದ ತನ್ನ ಜ್ಞಾನವನ್ನು ಮನುಷ್ಯರಿಗೆ ತಿಳಿಸುವನೆಂದು ಹೇಳಲಾಗಿದೆ. ನಮಗೆ ತಿಳಿದ ಚರಿತ್ರೆಯಲ್ಲಿ ಆಕಾಶವಾಣಿಯಿಂದ ಒಂದು ಬಾರಿ, ಕಾಣಿಸದೆ ತೆರೆಹಿಂಬದಿಯಿಂದ ಒಂದುಬಾರಿ ಹೇಳುವುದು ನಡೆದಿದೆ. ಕಾಣಿಸುವ ಮನುಷ್ಯನಾಗಿದ್ದು ತಾನು ಶರೀರವಿಲ್ಲದ ದೇವರಾಗಿ ಅಲ್ಲದೇ, ಕಾಣಿಸುವ ಶರೀರವಿರುವ ಭಗವಂತನಾಗಿ ಮಾತನಾಡಿ ಜ್ಞಾನವನ್ನು ಹೇಳಿದ ಸಂದರ್ಭಗಳು ಎಷ್ಟೋ ಇದ್ದರೂ, ಅವುಗಳನ್ನು ದೇವರೇ ಹೇಳಿದ್ದಾನೆಂದು ಯಾರೂ ಗ್ರಹಿಸಲಾರದೆ ಹೋಗಿದ್ದಾರೆ. ಈ ರೀತಿ ದೇವರು ಮೂರು ವಿಧಗಳಲ್ಲಿ ತನ್ನ ಜ್ಞಾನವನ್ನು ಭೂಮಿ ಮೇಲೆ ತಿಳಿಸುತ್ತಿದ್ದಾನೆ. ನಡೆದ ಚರಿತ್ರೆಯಲ್ಲಿ ದೇವರು ಯಾವಾಗ ಎಲ್ಲಿ ಹೇಗೆ ತನ್ನ ಜ್ಞಾನವನ್ನು ತಿಳಿಸಿದ್ದಾನೋ ಯಾರಿಗೂ ತಿಳಿಯದಂತೆ ಹೋಗಿದೆಯೆಂದೇ ಹೇಳಬಹುದು. ಆದ್ದರಿಂದ ಯಾರಾದರೂ ತಿಳಿದವನು "ದೇವರು ಇಂತಹ ಸಮಯದಲ್ಲಿ, ಇಂತಹ ಸ್ಥಳದಲ್ಲಿ, ಇಂತಹ ಆಕಾರದಿಂದ ತನ್ನ ಜ್ಞಾನವನ್ನು ಹೇಳಿದ್ದಾನೆ" ಎಂದು ಹೇಳಿದರೂ ಆ ಮಾತನ್ನು ಮನುಷ್ಯ ವಿಶ್ವಾಸಿಸಲಾರದೆ ಹೋಗುತ್ತಿದ್ದಾನೆ.

ಯಾರು ವಿಶ್ವಾಸಿಸಿದರೂ, ಯಾರು ವಿಶ್ವಾಸಿಸದೇ ಹೋದರೂ ದೇವರು ಈಗಾಗಲೇ ತನ್ನ ಮೂರು ವಿಧಾನಗಳಿಂದ ಜ್ಞಾನವನ್ನು ಹೇಳುವುದು ನಡೆದಿದೆ. ದೇವರು ತನ್ನ ಅಂತಿಮ ದೈವಗ್ರಂಥದಲ್ಲಿ ಪ್ರಕಟಿಸಿದಂತೆ ಆಕಾಶವಾಣಿಯಿಂದ ಒಂದು ಬಾರಿ, ಕಾಣಿಸದ ವ್ಯಕ್ತಿಯಾಗಿ ಮಾತನಾಡುತ್ತಾ ಒಂದುಬಾರಿ, ಕಾಣಿಸುವ ವ್ಯಕ್ತಿಯಾಗಿ ಅನೇಕಬಾರಿ ಭೂಮಿಮೇಲೆ ಜ್ಞಾನವನ್ನು ಹೇಳುವುದು ನಡೆದಿದೆ. ಆದರೇ ಕಾಣಿಸುವ ವ್ಯಕ್ತಿಯಾಗಿ ಬಂದರೂ ಆತನು ಸಾಧಾರಣ ಮನುಷ್ಯನಲ್ಲ, ಪ್ರತ್ಯೇಕವಾದ ಮನುಷ್ಯನೆಂದೂ, ಆತನು ಮನುಷ್ಯನಾಗಿರುವ ಭಗವಂತನೆಂದೂ ಹೇಳಬಹುದು. ಆದ್ದರಿಂದ **"ಯಾವ ಮನುಷ್ಯ ದೇವರಾಗಿ ಮಾತನಾಡುವುದಿಲ್ಲ ಆದರೇ, ದೇವರು ಮನುಷ್ಯನಾಗಿ ಕಾಣಿಸಿ ಮಾತನಾಡುವನು"** ಎಂದು ಹೇಳಬಹುದು. ಹಾಗೆ ದೇವರು ಮನುಷ್ಯನಾಗಿ ಮಾತನಾಡಿ ಜ್ಞಾನವನ್ನು ಹೇಳುವಾಗ, ಆ ಮನುಷ್ಯನನ್ನು ಸಾಧಾರಣ ಮನುಷ್ಯ ಎಂದು ಅನ್ನಬಾರದು.

ಅಸಾಧಾರಣ ಮನುಷ್ಯನಾದ ಆತನನ್ನು ಭಗವಂತನೆಂದು ಹೇಳಬಹುದು. ಆದರೇ **"ದೇವರು ಮನುಷ್ಯನಾಗಿ ಬರುತ್ತಾನೆ"** ಎಂಬ ಮಾತನ್ನು ಒಂದು ಹಿಂದೂ ಮತದಲ್ಲಿ ಹೊರತು ಇಸ್ಲಾಮ್ ಮತದಲ್ಲಿಯೂ, ಕ್ರೈಸ್ತ ಮತದಲ್ಲಿಯೂ ಯಾರೂ ನಂಬುತ್ತಿಲ್ಲ. ದೈವಜ್ಞಾನ ಒಂದೇ ಆದರೂ ಮೂರು ಮತಗಳವರಿಗೂ ಮೂರು ವಿಧಗಳಾಗಿ ಅರ್ಥವಾಗಿದೆ. ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರಬಹುದು. "ದೇವರು ಹೇಳಿದ ಜ್ಞಾನ ಒಂದೇ ಆಗಿರುವಾಗ, ಒಂದೇ ಜಾತಿ ಮನುಷ್ಯರಿಗೆ ಮೂರು ವಿಧಗಳಾಗಿ ಏಕೆ ಅರ್ಥವಾಗಿದೆ? ಅವರು ಮೂರು ಮತಗಳಾಗಿ ಏಕೆ ಬದಲಾಗಿದ್ದಾರೆ?" ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಈ ವಿಧವಾಗಿ ಇದೆ.

ಮನುಷ್ಯರೆಲ್ಲರನ್ನೂ ಸೃಷ್ಠಿಸಿದ ಸೃಷ್ಠಿಕರ್ತ ದೇವರು ಒಬ್ಬನೇ ಎಂಬ ಮಾತು ಪೂರ್ತಿ ಸತ್ಯ. ಮಾನವಜಾತಿಯೆಲ್ಲವೂ ಒಂದೇ ಅವಯವಗಳಿಂದ ಒಂದೇ ವಿಧವಾದ ಶರೀರದಿಂದ ಜೀವಿಸುತ್ತಿದೆ. ಊಟ, ನಿದ್ರೆ, ಎಚ್ಚರ ಎನ್ನುವ ಒಂದೇ ಜೀವನ ವಿಧಾನವಿರುವ ಮಾನವಜಾತಿಯೆಲ್ಲವೂ ಒಂದೇ ವಿಧವಾದ ಮನಸ್ಸು, ಬುದ್ಧಿ, ಜೀವ ಹೊಂದಿ ಬದುಕುತ್ತಿವೆ. ಜೀವನ ವಿಧಾನದಲ್ಲಿಯೂ, ಒಳಗಿನ ಅವಯವಗಳಲ್ಲಿಯೂ, ಹೊರಗಿನ ಅವಯವಗಳಲ್ಲಿಯೂ ಎಂತಹ ವ್ಯತ್ಯಾಸವಿಲ್ಲದ ಮನುಷ್ಯರು ತಮ್ಮನ್ನು ತಯಾರು ಮಾಡಿದ ಏಕೈಕ ದೇವರ ವಿಷಯದಲ್ಲಿ ಮಾತ್ರ ಪೂರ್ತಿ ವ್ಯತ್ಯಾಸದಿಂದಿದ್ದು, ಮೂರು ಭಾಗಗಳಾಗಿ ಬೇರ್ಪಟ್ಟು, ಮೂರು ವರ್ಗಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ಆ ಮೂರು ವರ್ಗಗಳ ಹೆಸರುಗಳೇ ಹಿಂದೂ, ಕ್ರೈಸ್ತ, ಇಸ್ಲಾಮ್ ಮತಗಳೆಂದು ಹೇಳಲಾಗುತ್ತಿವೆ. ದೇವರು ಒಬ್ಬನೇ, ಆತನ ಸೃಷ್ಠಿ ಒಂದೇ. ಸಮಸ್ತ ಸೃಷ್ಠಿ ಎಷ್ಟೋ ಭಾಗಗಳಾಗಿ, ಎಷ್ಟೋ ಜೀವರಾಶಿಗಳಾಗಿ ಇರುವಾಗ, ಅದರಲ್ಲಿ ಮನುಷ್ಯರು ಮಾತ್ರ ತಮ್ಮನ್ನು ಸೃಷ್ಠಿಸಿದ ದೇವರ ವಿಷಯದಲ್ಲಿ ವಿಭೇದಿಸಿಕೊಂಡು ದೇವರನ್ನು ಮೂರು ವಿಧಗಳಾಗಿ ಸೀಳಿಸಿ ಬೇರೆಬೇರೆಯಾಗಿ ಹೇಳಿಕೊಳ್ಳುತಾ, ನಮ್ಮ ದೇವರು ದೊಡ್ಡವ ಎಂದು ಕೆಲವರನ್ನುವಾಗ, ಅಲ್ಲ ನಮ್ಮ ದೇವರೇ ದೊಡ್ಡವ ಎಂದು ಮತ್ತೆ ಕೆಲವರನ್ನುತ್ತಿದ್ದಾರೆ. ದೇವರು ತನ್ನನ್ನು ಮನುಷ್ಯ ತಿಳಿಯುವುದಕ್ಕೆ ಅವಶ್ಯವಾದ

ಜ್ಞಾನವನ್ನು ಒಂದು ಬಾರಿ ಹೇಳಿದರೇ ಅರ್ಥವಾಗಲಿಲ್ಲವೆಂದು ಅದೇ ಜ್ಞಾನವನ್ನೇ ಪುನಃ ಮೂರು ಬಾರಿ, ಮೂರು ಪ್ರದೇಶಗಳಲ್ಲಿ ಎರಡು ಪದ್ಧತಿಗಳಲ್ಲಿ ಹೇಳುವುದು ನಡೆದಿದೆ. ಸೃಷ್ಟ್ಯಾದಿಯಲ್ಲಿ ಆಕಾಶವಾಣಿಯಿಂದ ಹೇಳಿದ ಜ್ಞಾನವನ್ನು ಪುನಃ ಹೇಳುವುದಕ್ಕೆ ಒಂದು ಬಾರಿ ದ್ವಾಪರಯುಗದ ಕೊನೆಯಲ್ಲಿ ಅಂದರೆ ಕಲಿಯುಗ ಆರಂಭದಲ್ಲಿ, ನಂತರ ಎರಡನೆ ಬಾರಿ ಕಲಿಯುಗ ಮೂರು ಸಾವಿರ ಸಂವತ್ಸರಗಳು (3000) ಕಳೆದ ನಂತರ, ಮೂರನೆ ಬಾರಿ ಕಲಿಯುಗ ಕಳೆದ 3600 ಸಂವತ್ಸರಗಳ ಕೆಳಗೆ ಹೇಳುವುದು ನಡೆದಿದೆ. ನಮಗೆ ತಿಳಿದ ಈ ಬೋಧನೆಗಳಲ್ಲಿ ಮೊದಲು ಸೃಷ್ಟಿ ಆದಿಯಲ್ಲಿ ಆಕಾಶವಾಣಿಯಿಂದ ಹೇಳಿರುವಾಗ, ನಂತರ ಕಲಿಯುಗ ಆರಂಭದಲ್ಲಿ ಮನುಷ್ಯನ ಅವತಾರದಲ್ಲಿಯೂ, ಕಲಿಯುಗ 3000 ಸಂವತ್ಸರಗಳು ಕಳೆದ ನಂತರವೂ ಸಹ ಮನುಷ್ಯ ಅವತಾರದಲ್ಲಿಯೂ ಜ್ಞಾನವನ್ನು ಹೇಳುವುದು ನಡೆದಿದೆ. ಆ ನಂತರ 3600 ಸಂವತ್ಸರಗಳು ಕಲಿಯುಗ ಕಳೆದ ನಂತರ ಅಂದರೆ ಸುಮಾರು 1400 ಸಂವತ್ಸರಗಳ ಪೂರ್ವ ತೆರೆಮರೆಯಿಂದ ಕಾಣಿಸದ ವ್ಯಕ್ತಿಯಿಂದ ಜ್ಞಾನವನ್ನು ಹೇಳುವುದು ನಡೆದಿದೆ. ಈ ವಿಧವಾಗಿ ಸೃಷ್ಟ್ಯಾದಿಯಲ್ಲಿ ಹೇಳಿದ ಜ್ಞಾನವನ್ನು ದೇವರು ಮೂರು ಬಾರಿ ಹೇಳಿರುವಾಗ, ಅದು ಅರ್ಥವಾಗದ ಪ್ರಜೆಗಳು ಮೂರು ವಿಧಗಳಲ್ಲಿ ಅರ್ಥ ಮಾಡಿಕೊಂಡು ಮೂರು ವರ್ಗಗಳಾಗಿ ಸೀಳಿಹೋಗಿ, ತಮ್ಮನ್ನು ತಾವು ಮೂರು ಮತಗಳಾಗಿ ಹೇಳಿಕೊಳ್ಳುತ್ತಿದ್ದಾರೆ.

ದೇವರು ಮೂರು ಬಾರಿ ಹೇಳಿದ ಜ್ಞಾನ ಮೂರು ಗ್ರಂಥಗಳಾಗಿ ಬರೆಯಲಾಗಿದೆ. ಮೂರು ಬಾರಿ ಹೇಳಿದ ಜ್ಞಾನ ಒಂದೇ ಆಗಿರುವುದರಿಂದ, ದೇವರು ಹೇಳಿದ ಜ್ಞಾನವಿರುವ ಗ್ರಂಥವನ್ನು "ದೈವಗ್ರಂಥ" ಎಂದು ಅನ್ನುತ್ತಿದ್ದೇವೆ. ದೇವರು ಸೃಷ್ಟ್ಯಾದಿಯಲ್ಲಿ ತನ್ನ ಜ್ಞಾನವನ್ನು ಹೇಳಿದಾಗ ಅದು ಗ್ರಂಥರೂಪ ವಾಗಲಿಲ್ಲ. ನಂತರ ಮೂರು ಬಾರಿ ಎರಡು ವಿಧಗಳಲ್ಲಿ ಹೇಳಿದ ಜ್ಞಾನ ಗ್ರಂಥರೂಪದೊಳಗೆ ಬಂದಿದೆ. ಕಲಿಯುಗ ಆದಿಯಲ್ಲಿಯೂ, ಕಲಿಯುಗ ಮೂರು ಸಾವಿರ (3000) ಸಂವತ್ಸರಗಳು ಕಳೆದ ನಂತರ ಹೇಳಿದ ಜ್ಞಾನ ಮಾನವ ಆಕಾರದಿಂದ ಹೇಳಲಾಗಿರುವ ಜ್ಞಾನವಾದಾಗ, ಕಲಿಯುಗ ಮೂರು ಸಾವಿರದ

ಆರು ನೂರು (3600) ಸಂವತ್ಸರಗಳು ಕಳೆದ ನಂತರ ಬಂದಿರುವ ಜ್ಞಾನವನ್ನು ಕಾಣಿಸದ ತನ್ನ ಪಾಲಕನಿಂದ ದೇವರು ಹೇಳಿಸಿದ್ದಾನೆ. ಎರಡು ಬಾರಿ ಮನುಷ್ಯನ ಹಾಗೆ ಇದ್ದು, ಮನುಷ್ಯನಿಗಿಂತ ಬೇರೆಯಾಗಿ ಭಗವಂತನಾಗಿ ಇದ್ದು, ಪ್ರತ್ಯಕ್ಷವಾಗಿ ಕಣಿಸುತ್ತಾ ಪ್ರಜೆಗಳಿಗೆ ತಿಳಿದ ಭಾಷೆಯಲ್ಲಿ ಹೇಳಿದ ಜ್ಞಾನ ಎರಡು ಗ್ರಂಥಗಳ ರೂಪದಲ್ಲಿ ತಯಾರಾಗಿದೆ. ಸೃಷ್ಟ್ಯಾದಿಯಲ್ಲಿ ಆಕಾಶವಾಣಿ ಯಿಂದ ಹೇಳಿದ ಜ್ಞಾನವನ್ನೇ ದ್ವಾಪರಯುಗದಲ್ಲಿ ಹೇಳಿರುವಾಗ, ಆಗ ಕೂಡಲೇ ಕೆಲವು ದಿನಗಳಿಗೇ ಅದು ವೇದವ್ಯಾಸನಿಂದ ಭಗವದ್ಗೀತೆ ಎಂಬ ಗ್ರಂಥರೂಪ ವಾಗಿದೆ. ನಂತರ ಮೂರು ಸಾವಿರ (3000) ಸಂವತ್ಸರಗಳಿಗೆ ದೇವರು ಭಗವಂತನೆನ್ನುವ ರೂಪದಲ್ಲಿ ಮೊದಲು ಹೇಳಿದ ಜ್ಞಾನವನ್ನೇ ಸ್ವಲ್ಪ ಬದಲಾವಣೆ ಯಿಂದ ತಿರುಗಿ ಮನುಷ್ಯನ ರೂಪದಲ್ಲೇ ಹೇಳುವುದು ನಡೆದಿದೆ. ಕಲಿಯುಗ ಆರಂಭದಲ್ಲಿ ಹೇಳಿದ ಜ್ಞಾನ ಒಂದು ದಿನ, ಒಂದು ಬಾರಿ, ಒಂದು ಸಮಯದಲ್ಲಿ, ಒಂದು ಸಂದರ್ಭದಲ್ಲಿ ಹೇಳಿರುವಾಗ, ಮೂರು ಸಾವಿರ (3000) ಸಂವತ್ಸರಗಳ ನಂತರ ಮನುಷ್ಯನ ರೂಪದಲ್ಲಿಯೇ ಹೇಳಿದ ಜ್ಞಾನ ಅನೇಕ ಸಂದರ್ಭಗಳಲ್ಲಿ, ಅನೇಕ ಸಮಯಗಳಲ್ಲಿ, ಮೂರು ಸಂವತ್ಸರಗಳ ಕಾಲ ಹೇಳುವುದು ನಡೆದಿದೆ. ಆಗ ಹೇಳಿದ ವ್ಯಕ್ತಿ ಸತ್ತುಹೋದ ನಂತರ (ಪೂರ್ತಿ ಸತ್ತುಹೋಗದೇ ತಾತ್ಕಾಲಿಕ ಮರಣವನ್ನು ಹೊಂದಿದ ನಂತರ) ಆತನು ಹೇಳಿರುವ ಜ್ಞಾನವನ್ನು ನಾಲ್ವರು ವ್ಯಕ್ತಿಗಳು ಗ್ರಂಥರೂಪವಾಗಿ ಬರೆಯುವುದು ನಡೆದಿದೆ. ನಾಲ್ವರು ವ್ಯಕ್ತಿಗಳು ನಾಲ್ಕು ಸುವಾರ್ತೆಗಳ ರೂಪದಲ್ಲಿ ಅವರವರ ಹೆಸರುಗಳ ಮೇಲೆ ಬರೆಯುವುದು ನಡೆದಿದೆ. ಅವುಗಳೇ ಕ್ರಮವಾಗಿ ಮತ್ತಯಿ ಸುವಾರ್ತೆ, ಮಾರ್ಕು ಸುವಾರ್ತೆ, ಲೂಕಾ ಸುವಾರ್ತೆ, ಯೋಹಾನು ಸುವಾರ್ತೆಯಾಗಿ ಇವೆ. ಕಲಿಯುಗ ಪ್ರಾರಂಭದ ನಂತರ ಮೂರು ಸಾವಿರದ ಆರು ನೂರು (3600) ಸಂವತ್ಸರಗಳಿಗೆ ದೇವರು ಕಾಣಿಸದ ತನ್ನ ಪಾಲಕನಿಂದ, ತನ್ನ ಜ್ಞಾನವನ್ನು ಹೇಳಿಸಿದ್ದಾನೆ. ಅಗ ಹೇಳಿದ ಜ್ಞಾನ ಕ್ರಮವಾಗಿ 23 ಸಂವತ್ಸರಗಳು ಅನೇಕ ಬಾರಿ ಮಕ್ಕಾದಲ್ಲಿಯೂ, ಮದೀನಾದಲ್ಲಿಯೂ ಹೇಳಲಾಗಿದೆ. ಹಾಗೆ ಹೇಳಲಾಗಿರುವ ಜ್ಞಾನ **"ಖುರ್‌ಆನ್"** ಎಂಬ ಹೆಸರು ಇರುವ ಗ್ರಂಥವಾಗಿ ತಯಾರಾಗಿದೆ.

ದೇವರು ಮೂರು ಸಮಯಗಳಲ್ಲಿ ಮೂರು ಬಾರಿ ಹೇಳಿದ ಒಂದೇ ಜ್ಞಾನ ಮೂರು ಗ್ರಂಥಗಳಾಗಿ ತಯಾರಾಗುವುದರಿಂದ ಮನುಷ್ಯ ತನ್ನ ಬುದ್ಧಿ ಕಡಿಮೆಯಿಂದ ಮೂರು ಗ್ರಂಥಗಳನ್ನು ಬೇರೆಬೇರೆ ಜ್ಞಾನಗಳಾಗಿ ಅರ್ಥ ಮಾಡಿಕೊಂಡು, ಆ ಮೂರು ಗ್ರಂಥಗಳ ಆಧಾರದಿಂದ ಮೂರು ಮತಗಳನ್ನು ಏರ್ಪಡಿಸಿಕೊಳ್ಳುವುದು ನಡೆದಿದೆ. ಇಂದಿಗೆ 1400 ವರ್ಷಗಳ ಸಮಯದಲ್ಲಿ ಅಂದರೆ ಕಲಿಯುಗ ಆರಂಭವಾಗಿ 3600 ಸಂವತ್ಸರಗಳು ಕಳೆದುಹೋದಾಗ ತಯಾರಾದ ಖುರ್‌ಆನ್ ಗ್ರಂಥವನ್ನು “ಅಂತಿಮ ದೈವಗ್ರಂಥ” ಎಂದು ಹೇಳಲಾಗಿದೆ. ಇದನ್ನು ಅನುಸರಿಸಿ ಅದಕ್ಕು ಮೊದಲು ಎರಡು ಬಾರಿ ಹೇಳಿದ ಜ್ಞಾನವೊಂದರ ಗ್ರಂಥಗಳನ್ನು ಒಂದು ಪ್ರಥಮ ದೈವಗ್ರಂಥವೆಂದು, ಎರಡನೆಯದು ಮಧ್ಯ ದೈವಗ್ರಂಥವೆಂದು ಹೇಳುವುದು ನಡೆದಿದೆ. ಇದರ ಪ್ರಕಾರ ಕಲಿಯುಗ ಆದಿಯಲ್ಲಿ ದ್ವಾಪರಯುಗದ ಕೊನೆಯಲ್ಲಿ ಹೇಳಿದ ಭಗವದ್ಗೀತಾ ಗ್ರಂಥವನ್ನು ಪ್ರಥಮ ದೈವಗ್ರಂಥವೆಂದು, ನಂತರ ಹೇಳಿದ ಸುವಾರ್ತೆಗಳ ಜ್ಞಾನವನ್ನು (ಬೈಬಿಲ್ ಗ್ರಂಥವನ್ನು) ಮಧ್ಯ ದೈವ ಗ್ರಂಥವೆಂದು ಹೇಳುವುದು ನಡೆಯುತ್ತಿದೆ. ಬೇರೆಬೇರೆಯಾಗಿ ಹೇಳಲಾಗುತ್ತಿರುವ ಮೂರು ದೈವ ಗ್ರಂಥಗಳಲ್ಲಿಯೂ ಒಂದೇ ದೈವ ಜ್ಞಾನವಿರುವುದರಿಂದ ಮೂರನ್ನೂ ಸೇರಿಸಿ “ದೈವಗ್ರಂಥ” ಎಂದು ಹೇಳಬಹುದು. ಒಂದೇ ದೈವ ಗ್ರಂಥ ಮೂರು ಭಾಗಗಳಾಗಿ ಸಿಗುತ್ತಿದೆ. ದೇವರನ್ನು, ದೇವರ ಜ್ಞಾನವನ್ನು ಅರ್ಥ ಮಾಡಿಕೊಂಡ ಯಾವ ಮನುಷ್ಯನಿಗಾದರೂ ಮೂರು ಗ್ರಂಥಗಳಲ್ಲಿ ಒಂದೇ ದೈವ ಜ್ಞಾನ ಕಾಣಿಸುತ್ತದೆ. ಹಾಗಲ್ಲದೆ ಮೂರು ಗ್ರಂಥಗಳು ಬೇರೆ ಬೇರೆ ಮತಗಳನ್ನು, ಬೇರೆ ಬೇರೆ ದೇವತೆಗಳನ್ನು ಬೋಧಿಸಿವೆ ಯೆನ್ನುವವನಿಗೆ ಆ ಗ್ರಂಥಗಳಲ್ಲಿ ಮೂರು ಮತಗಳು, ಮೂವರು ದೇವರುಗಳು ಕಾಣಿಸುವುದು ನಡೆಯುತ್ತಿದೆ. ಅಂಥವನಿಗೆ ಯಾರು ಏನು ಹೇಳಿದರೂ ರುಚಿಸುವುದಿಲ್ಲ. ತನ್ನ ಮತ ತನ್ನದೇ, ತನ್ನ ದೇವರೇ ದೇವರು ಎನ್ನುವಂತೆ, ಉಳಿದ ಎರಡು ಗ್ರಂಥಗಳು ಅಸತ್ಯಗಳೆಂದೂ, ಆ ಗ್ರಂಥಗಳಲ್ಲಿನ ವಿಷಯಗಳನ್ನು ಹೇಳುವವರನ್ನು ಅಜ್ಞಾನಿಗಳೆಂದು ಹೇಳುತ್ತಿರುತ್ತಾನೆ.

ದೇವರು ಸರ್ವಪ್ರಪಂಚಕ್ಕೂ ಸೃಷ್ಟಿಕರ್ತನೇ ಅಲ್ಲದೆ ಎಲ್ಲ ಸಮಯಗಳಲ್ಲಿ ಎಲ್ಲರಿಗೂ ಆತನೇ ಯಜಮಾನನಾಗಿಯೂ ಇದ್ದಾನೆ. ಆತನಿಗೆ ತಿಳಿಯದಂತೆ ಸರ್ವ ಪ್ರಪಂಚದಲ್ಲಿ ಏನು ನಡೆಯುವುದಕ್ಕೂ ಅವಕಾಶವಿಲ್ಲ. ಎಲ್ಲಾ ದೇವರಿಗೆ ತಿಳಿದೇ ನಡೆಯುತ್ತವೆ. ತನಗೆ ಇಷ್ಟವಿರುವವರನ್ನು ತನ್ನ ಹತ್ತಿರಕ್ಕೆ ಸೇರಿಸಿಕೊಳ್ಳುವುದಕ್ಕೂ, ತನಗೆ ಇಷ್ಟವಿಲ್ಲದವರನ್ನು ತನ್ನಿಂದ ದೂರ ಮಾಡುವುದಕ್ಕೂ ದೇವರು ತನ್ನ ಗ್ರಂಥಗಳಲ್ಲಿ ಜ್ಞಾನವನ್ನು ಹೇಳುವುದೇ ಅಲ್ಲದೆ, ನಂತರ ಅದು ಗ್ರಂಥರೂಪವಾದಾಗ ಸ್ವಲ್ಪ ಅಜ್ಞಾನವನ್ನೂ ಸಹ ಸೇರಿಸಿದ್ದಾನೆ. ಆ ನೇತೃತ್ವದಲ್ಲಿ ಪ್ರಥಮ ದೈವಗ್ರಂಥದಲ್ಲಿ ಮೊದಲು ವ್ಯಾಸನಿಂದಲ್ಲದಿದ್ದರೂ, ನಂತರ ಕಾಲದಲ್ಲಿ ಇತರರಿಂದ ದೇವರು ಹೇಳದ ಜ್ಞಾನವನ್ನು ಸೇರಿಸುವುದು ನಡೆದಿದೆ. ಅದೇ ರೀತಿ ಮಧ್ಯ ದೈವ ಗ್ರಂಥದಲ್ಲಿಯೂ, ಅಂತಿಮ ದೈವಗ್ರಂಥದಲ್ಲಿಯೂ ನಡೆದಿದೆ. ಹಾಗೆ ನಡೆಯುವುದು ಸಹಜವೇ ಎನ್ನುವುದಕ್ಕೆ ಇಲ್ಲಿ ಒಂದು ಉದಾಹರಣೆಯನ್ನು ಹೇಳಿಕೊಳ್ಳೋಣ. ಒಂದು ಹೊಲದಲ್ಲಿ ಒಂದು ವಿಧವಾದ ಬೆಳೆಯನ್ನು ಇಟ್ಟಿದ್ದೇವೆಂದುಕೊಳ್ಳಿ. ಬಹುಶಾ ಜೋಳದ ಬೆಳೆಯನ್ನು ಇಟ್ಟಿದ್ದೇವೆಂದುಕೊಳ್ಳೋಣ. ಬೆಳೆ ಚೆನ್ನಾಗಿ ಬೆಳೆದಾಗ ಹೊಲದಲ್ಲಿ ಜೋಳದಪೈರಿಗೆ ಜೋಳದ ತೆನೆಗಳು ಕಾದಿರುತ್ತವಲ್ಲವೆ! ಹಾಗೆ ಬೆಳೆಗೆ ಬಂದಿರುವ ಜೋಳದ ತೆನೆಗಳಲ್ಲಿ ಕೇವಲ ಜೋಳ ಮಾತ್ರ ಇರುತ್ತವೆ. ತೆನೆಗಳಲ್ಲಿ ಕಲ್ಲಾಗಲೀ, ಮಣ್ಣಾಗಲೀ ಇರುವುದಿಲ್ಲ. ಸ್ವಚ್ಛವಾದ ಪೈರಿನ ಮೇಲೆ ತಯಾರಾದ ತೆನೆಗಳಲ್ಲಿ ಯಾವ ಕಲ್ಮಷವೂ ಇಲ್ಲದ ಕಾಳುಗಳು ಮಾತ್ರ ಇರುತ್ತವೆ. ಸ್ವಚ್ಛವಾದ ಕಾಳುಗಳು ಮಾತ್ರ ಇರುವ ತೆನೆಗಳನ್ನು ಪೈರಿನಿಂದ ಬೇರೆಮಾಡಿ, ತೆನೆಗಳಿಂದ ಕಾಳನ್ನು ತೆಗೆದುಕೊಳ್ಳುವುದಕ್ಕೆ ಕಣದಲ್ಲಿ ಹಾಕಿ, ಕಲ್ಲಿನ ಗುಂಡನ್ನು ತಿರುಗಿಸಿ ತೆನೆಗಳು ನಲುಗಿ ಅವುಗಳಿಂದ ಜೋಳ ಉದುರುವಂತೆ ಮಾಡುವರು. ಆದರೇ ಆ ಸಂದರ್ಭದಲ್ಲಿ ಕಣದಲ್ಲಿನ ಮಣ್ಣು, ಚಿಕ್ಕಚಿಕ್ಕ ಕಲ್ಲು ಜೋಳದೊಳಗೆ ಸೇರಿಹೋಗುತ್ತವೆ. ಮೊದಲು ಪೈರಿನ ಮೇಲೆ ಬೆಳೆದಿರುವ ಜೋಳದಲ್ಲಿ ಮಣ್ಣು, ಕಲ್ಲು ಕಾಲುಷ್ಯ ಇಲ್ಲದಿರುವುದಾಗಿ ಇದ್ದರೂ, ತೆನೆಯಿಂದ ಕಾಳನ್ನು ತೆಗೆದುಕೊಂಡಾಗ ತಪ್ಪದೆ ಅದರಲ್ಲಿ ಮಣ್ಣು, ಕಲ್ಲು ಸೇರಿಹೋಗುವ ಅವಕಾಶವಿದೆ.

ಚೆನ್ನಾಗಿ ಬೆಳೆದ ತೆನೆಗಳಿಂದ ಕಾಳನ್ನು ತೆಗೆದುಕೊಳ್ಳುವ ಸಮಯದಲ್ಲಿ ಯಾವ ವಿಧವಾಗಿ ಮಣ್ಣು, ಕಲ್ಲು ಕಾಲುಷ್ಯ ಸೇರುತ್ತದೋ, ಅದೇ ರೀತಿ ಒಂದು ಗ್ರಂಥದಲ್ಲಿ ಚೆನ್ನಾಗಿ ಹೇಳಲಾಗಿರುವ ಜ್ಞಾನವನ್ನು ಮನುಷ್ಯರು ಗ್ರಹಿಸುವ ಸಮಯದಲ್ಲಿ, ಅಜ್ಞಾನವೆಂಬ ಕಾಲುಷ್ಯ ಜ್ಞಾನದಲ್ಲಿ ಸೇರಿಹೋಗುವ ಅವಕಾಶವಿದೆ. ಈ ಸಮಾಚಾರದಲ್ಲಿ ಪೈರು ದೇವರಾದಾಗ, ತೆನೆ ಗ್ರಂಥವಾದಾಗ, ಕಣವನ್ನು ಮಾಡಿ ತೆನೆಯಿಂದ ಕಾಳನ್ನು ತೆಗೆದುಕೊಳ್ಳುವುದು ಮನುಷ್ಯ ಗ್ರಂಥದಿಂದ ಜ್ಞಾನವನ್ನು ಗ್ರಹಿಸಿಕೊಳ್ಳುವುದಾದಾಗ, ಕಾಳಿನಲ್ಲಿ ಕಲ್ಲು ಸೇರುವುದು ಜ್ಞಾನದಲ್ಲಿ ಅಜ್ಞಾನ ಸೇರುವುದೆಂದು ತಿಳಿಯುತ್ತಿದೆ. ಇದೇ ರೀತಿ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ದೇವರು ಸ್ವಚ್ಛವಾದ ಜ್ಞಾನವನ್ನು ಹೇಳಿರುವಾಗ, ಅದನ್ನು ಗ್ರಂಥದಲ್ಲಿ ನೋಡಿ ಅರ್ಥ ಮಾಡಿಕೊಳ್ಳುವ ಸಮಯದಲ್ಲಿ ಒಂದು ಭಾವಕ್ಕೆ ಬದಲು ಮತ್ತೊಂದು ಭಾವವನ್ನು ಅರ್ಥ ಮಾಡಿಕೊಳ್ಳುತ್ತಾ, ದೇವರು ಕೊಟ್ಟಿರುವ ಜ್ಞಾನವನ್ನು ಅಜ್ಞಾನದೊಂದಿಗೆ ಸೇರಿಸಿಕೊಂಡು ನಿಜವಾದ ದೇವರ ಜ್ಞಾನವನ್ನು ಮನುಷ್ಯ ಹೊಂದಲಾರದೆ ಹೋಗುತ್ತಿದ್ದಾನೆ. ಭಗವದ್ಗೀತೆಯನ್ನು ಬರೆದ ರಚಯಿತರೇ ಭಗವದ್ಗೀತೆಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೇ ಅಜ್ಞಾನ ದಿಂದ ಕೂಡಿಕೊಂಡ ವಿವರಗಳನ್ನು ಬರೆದಿದ್ದಾರೆ. ಕಲಿಯುಗದ ಪ್ರಾರಂಭದಲ್ಲಿ ಕೃಷ್ಣನು ಅರ್ಜುನನಿಗೆ ಸ್ವಚ್ಛವಾದ ಜ್ಞಾನವನ್ನು ತಿಳಿಸಿದ್ದಾನೆ. ಅರ್ಜುನನಿಂದ ಕೃಷ್ಣನು ಹೇಳಿದ ಜ್ಞಾನವನ್ನು ತಿಳಿದ ವ್ಯಾಸನು ಅದೇ ಜ್ಞಾನವನ್ನು ವಿವರಿಸುತ್ತಾ, ಸುಮಾರು ಐದು ನೂರು (500) ಶ್ಲೋಕಗಳ ರೂಪದಿಂದ ಬರೆದಾಗ, ನಂತರ ಕಾಲದಲ್ಲಿ ಭಗವದ್ಗೀತೆಯಲ್ಲಿ ಅಜ್ಞಾನ ಸೇರುವುದರಿಂದ ಎರಡು ನೂರು (200) ಶ್ಲೋಕಗಳು ಹೆಚ್ಚಾಗಿ ಬರೆಯಲಾಗಿದ್ದು, ಕೊನೆಗೆ ಒಟ್ಟು ಏಳು ನೂರು (700) ಶ್ಲೋಕಗಳಾಗಿ ಭಗವದ್ಗೀತೆ ತಯಾರಾಗಿದೆ.

ಮೊದಲು ಕೃಷ್ಣನು ಸ್ವಚ್ಛವಾದ ಜ್ಞಾನವನ್ನು ಪ್ರಥಮ ದೈವಗ್ರಂಥವಾಗಿ ಭಗವದ್ಗೀತೆಯನ್ನು ತಿಳಿಸಿದರೇ, ಅದು ಈ ದಿನ ಮನುಷ್ಯರ ಹತ್ತಿರಕ್ಕೆ ಸೇರುವುದರೊಳಗೆ ಸ್ವಲ್ಪ ಅಜ್ಞಾನ ಕಾಲಷ್ಯದಿಂದ ಕೂಡಿಕೊಂಡಿದೆಯೆಂದು ಹೇಳಬಹುದು. ಪ್ರಥಮ ದೈವಗ್ರಂಥದಲ್ಲಿ ಸ್ವಲ್ಪ ಅಜ್ಞಾನ ಕಾಲುಷ್ಯ ಸೇರಿಹೋಗಿ

ಕೃಷ್ಣನು ಹೇಳಿರುವ ಜ್ಞಾನ ಯಾವುದೋ ಬಹಳ ಜನರಿಗೆ ತಿಳಿಯದಂತೆ ಹೋಗಿದೆ. ಭಗವದ್ಗೀತೆ ನಂತರ ಬಂದಿರುವ ಜ್ಞಾನ ಗ್ರಂಥ ಬೈಬಲ್. ಮಧ್ಯ ದೈವಗ್ರಂಥವಾದ ಬೈಬಲ್‌ನಲ್ಲಿ ಹೇಳಿದ ಜ್ಞಾನ ಸ್ವಲ್ಪ ನಾಲ್ಕು ಸುವಾರ್ತೆಗಳ ರೂಪದಲ್ಲಿ ಇರುವಾಗ, ಉಳಿದ 62 ಪಾಠಗಳಾಗಿ ಇರುವುದೆಲ್ಲಾ ಏಸು ಹೇಳಿದ ನಾಲ್ಕು ಸುವಾರ್ತೆಗಳಿಗಿಂತ ಬೇರೆಯಾಗಿರುವುದೆಂದು, ಏಸು ಹೇಳಿರುವುದು ಅಲ್ಲವೆಂದು ತಿಳಿದುಹೋಗುತ್ತಿದೆ. ದೇವರ ಅಂಶದಿಂದ ಬಂದಿರುವವನು ಏಸು ಆದಾಗ, ಆತನು ತನ್ನ ಜೀವನದಲ್ಲಿ ಕೊನೆಯ ಮೂರು ಸಂವತ್ಸರಗಳಲ್ಲಿ ಹೇಳಿರುವುದೇ ನಿಜವಾದ ಜ್ಞಾನವೆಂದು ಹೇಳಬಹುದು. ನಂತರ ಬೈಬಲ್‌ನ್ನು ತಯಾರು ಮಾಡಿದವರು ನಾಲ್ಕು ಸುವಾರ್ತೆಗಳಿಗೆ ಮುಂದೆ 39, ಹಿಂದೆ 23 ಪಾಠಗಳನ್ನು ಸೇರಿಸಿ (39+4+23=66) ಒಟ್ಟು 66 ಪಾಠಗಳಾಗಿ ಬರೆದಿದ್ದಾರೆ. ನಾಲ್ಕು ಸುವಾರ್ತೆಗಳು ಹೊರತು ಪಡಿಸಿ ಇರುವ 62 ಪಾಠಗಳಲ್ಲಿ ಜ್ಞಾನವಿದೆಯೋ, ಅಜ್ಞಾನವಿದೆಯೋ ನಾವು ಹೇಳಲಾರೆವು ಆದರೆ, ಅವೆಲ್ಲವೂ ಏಸು ಹೇಳಿದ ಜ್ಞಾನವಲ್ಲವೆಂದು, ಮನುಷ್ಯರು ಹೇಳಿದ ಜ್ಞಾನವೆಂದೂ ಹೇಳುತ್ತಿದ್ದೇವೆ. ಏಸು ಮನುಷ್ಯನೇ ಆದರೂ ಆತನು ಸಾಧಾರಣ ಮನುಷ್ಯನಲ್ಲ, ಪ್ರತ್ಯೇಕವಾದ ಮನುಷ್ಯ. ಆದ್ದರಿಂದ ಆತನು ಹೇಳಿರುವುದೇ ನಿಜವಾದ ಜ್ಞಾನವೆಂದು ನಾವು ಹೇಳಬಲ್ಲೆವು. ಅರವತ್ತಾರು (66) ಪಾಠಗಳಲ್ಲಿ ಸುವಾರ್ತೆಗಳೆನ್ನುವ ಹೆಸರಿಂದ ನಾಲ್ಕು ಪಾಠಗಳು ಮಾತ್ರವೇ ಇವೆ. ಉಳಿದ ಅರವತ್ತೆರಡು (62) ಪಾಠಗಳು ಸುವಾರ್ತೆಗಳೆನ್ನುವ ಹೆಸರಿನಿಂದ ಇಲ್ಲದಿರುವುದನ್ನು ಗಮನಿಸಬಹುದು. ಕೇವಲ ನಾಲ್ಕು ಸುವಾರ್ತೆಗಳಾಗಿರುವ ಸ್ವಲ್ಪ ಜ್ಞಾನಕ್ಕೆ, ಅರವತ್ತೆರಡು (62) ಪಾಠಗಳಲ್ಲಿ ಮನುಷ್ಯರ ಜ್ಞಾನ ಸೇರಿಹೋಗುವುದರಿಂದ ಬೈಬಲ್‌ನಲ್ಲಿ ಯಾವುದು ದೇವರ ಜ್ಞಾನವೋ, ಯಾವುದು ಮನುಷ್ಯರ ಜ್ಞಾನವೋ ಗುರುತಿಸಲಾರದ ಪರಿಸ್ಥಿತಿ ಏರ್ಪಟ್ಟಿದೆ.

ಇನ್ನು ಅಂತಿಮ ದೈವಗ್ರಂಥದಲ್ಲಿ ದೇವರು ತಿಳಿಸಿದ ಸ್ವಚ್ಛವಾದ ದೈವಜ್ಞಾನವಿದೆ. ದೇವರು ತನ್ನ ಪಾಲನೆಯಲ್ಲಿರುವ ಜಿಬ್ರಯೇಲ್ ಎಂಬ ಕಾಣಿಸದ ಒಂದು ಗ್ರಹಶಕ್ತಿಯಿಂದ ತನ್ನ ಜ್ಞಾನವನ್ನು ಮುಹಮ್ಮದ್ ಪ್ರವಕ್ತರವರಿಗೆ ಹೇಳುವುದು

ನಡೆದಿದೆ. ಮುಹಮ್ಮದ್ ಪ್ರವಕ್ತರವರು ಓದುಬಾರದವನಾದ್ದರಿಂದ, ತಾನು ಒಬ್ಬನು ಮಾತ್ರ ಕೇಳಿದ ದೈವವಾಕ್ಯಗಳನ್ನು ತನ್ನ ಹತ್ತಿರಕ್ಕೆ ಬಂದಿರುವ ತನ್ನ ಅನುಚರರಿಗೆ ಹೇಳುತ್ತಿದ್ದನು. ಖಗೋಳದಿಂದ ಇಳಿದು ಬಂದ ಜಿಬ್ರಯೇಲ್ 23 ಸಂವತ್ಸರಗಳು ತನಗೆ ತಿಳಿದ ಜ್ಞಾನವನ್ನು ಹೇಳಿದ್ದಾನೆ. ಹಾಗೆ ಹೇಳಲಾಗಿರುವ ಜ್ಞಾನವನ್ನು ಮುಹಮ್ಮದ್ ಪ್ರವಕ್ತ ಗ್ರಂಥರೂಪದಲ್ಲಿ ಮಾಡದೇ ಆತನು ಅಕಸ್ಮಾತ್ತಾಗಿ ಆರೋಗ್ಯ ಕ್ಷೀಣಿಸಿ ಮರಣಿಸುವುದು ನಡೆದಿದೆ. ಮುಹಮ್ಮದ್ ಪ್ರವಕ್ತರವರು ಮರಣಿಸಿದ ನಂತರ ಆತನು ಹೇಳಿದ ಜ್ಞಾನವನ್ನು ಕೇಳಿದವರು ಪ್ರಯತ್ನಿಸಿ ಅವರಿಗೆ ಜ್ಞಾಪಕವಿರುವ ವಾಕ್ಯಗಳನ್ನು ಆಯತ್‌ಗಳ ರೂಪದಲ್ಲಿ ಬರೆಯುವುದು ನಡೆದಿದೆ. ಹಾಗೆ ಬರೆಯುವುದರಲ್ಲಿ ಕೆಲವು ಪ್ರವಕ್ತರವರು ಹೇಳದ ವಾಕ್ಯಗಳು ಸಹ ಬಂದು ಸೇರಿಹೋಗಿವೆ. 23 ಸಂವತ್ಸರಗಳ ಕೆಳಗಿನಿಂದ ಕೇಳುವುದರಿಂದ ಅವರಿಗೆ ತಿಳಿಯದೇ ಕೆಲವು ವಾಕ್ಯಗಳನ್ನು ಬರೆದಾಗ, ತಿಳಿದೂ ಸಹ ಕೆಲವು ವಾಕ್ಯಗಳನ್ನು ಬರೆಯುವುದು ನಡೆದಿದೆ. ಮಹಾಜ್ಞಾನಿ ಜಿಬ್ರಯೇಲ್ ಕೆಲವು ನೂರು ವಾಕ್ಯಗಳು ಮಾತ್ರವೇ ಹೇಳಿರುವಾಗ, ಕೊನೆಗೆ ಖುರ್‌ಆನ್ ಗ್ರಂಥ ಸಾವಿರ ವಾಕ್ಯಗಳ ರೂಪದಲ್ಲಿ ತಯಾರಾಗಿದೆ. ಪ್ರಥಮ ದೈವಗ್ರಂಥದಲ್ಲಿ, ದ್ವಿತೀಯ ದೈವಗ್ರಂಥದಲ್ಲಿ ಅಜ್ಞಾನ ಕಾಲುಷ್ಯ ಸೇರಿದಂತೇ ಅಂತಿಮ ದೈವಗ್ರಂಥದಲ್ಲಿಯೂ ಕೂಡ ಸ್ವಲ್ಪ ಕಾಲುಷ್ಯ ಏರ್ಪಟ್ಟಿದೆ. ಇದು ಎಲ್ಲವೂ ದೇವರಿಗೆ ತಿಳಿಯದಂತೆ ನಡೆಯಲಿಲ್ಲ. ಬೆಳೆದ ಕಾಳಿನಲ್ಲಿ ಕಲ್ಲು, ಮಣ್ಣು ಸೇರಿದಂತೆ, ದೈವ ಜ್ಞಾನದಲ್ಲಿ ಸ್ವಲ್ಪ ಅಸಂಬದ್ಧಜ್ಞಾನ ಸೇರಿಹೋಗಿದೆ. ಹಾಗೆ ಸೇರಿರುವುದನ್ನು ಮನುಷ್ಯ ಸ್ವಲ್ಪವಾದರೂ ಗ್ರಹಿಸಲಾರದೆ ಎಲ್ಲಾ ಜ್ಞಾನವೇ ಎಂದುಕೊಳ್ಳುವುದರಿಂದ ಭಗವದ್ಗೀತೆಯಲ್ಲಿನ ಜ್ಞಾನ ಹಿಂದೂಗಳಿಗೆ ಪೂರ್ತಿ ಅರ್ಥವಾಗಲಿಲ್ಲ. ಬೈಬಲ್‌ನಲ್ಲಿನ ವಾಕ್ಯಗಳ ಪರಿಸ್ಥಿತಿ ಹಾಗೆಯೇ ತಯಾರಾಗಿದೆ. ಆದ್ದರಿಂದ ಬೈಬಲ್‌ನಲ್ಲಿ ಏಸು ಹೇಳಿದ ವಾಕ್ಯಗಳನ್ನು ಮನುಷ್ಯ ಪೂರ್ತಿಯಾಗಿ ಗ್ರಹಿಸಲಾರದೆ ಹೋಗಿದ್ದಾನೆ. ಆದ್ದರಿಂದ ಬೈಬಲ್‌ನಲ್ಲಿರುವ ನಾಲ್ಕು ಸುವಾರ್ತೆಗಳ ರುಚಿ ಯಾರಿಗೂ ತಿಳಿಯದಂತೆ ಹೋಗಿದೆ. ಈ ರೀತಿ ಹೇಳುತ್ತಾ ಹೋದರೇ ಯಾವ ಬೆಳೆ ಬೆಳೆದರೂ ನಂತರ ಶುಭ್ರವಾಗಿ ಬೆಳೆದಿರುವುದು ಬೆಳೆದಂತೆಯೇ ಮನೆಗೆ

ಹೇಗೆ ಬರುವುದಿಲ್ಲವೋ, ಹಾಗೇ ದೇವರು ಹೇಳಿದ ಯಾವ ಜ್ಞಾನವೂ ಹೇಳಿರುವುದು ಹೇಳಿದಂತೆ ಮನುಷ್ಯರಿಗೆ ಸೇರಲಿಲ್ಲ. ಕೊನೆಗೆ ಪ್ರತಿ ದೈವ ಗ್ರಂಥ ಸ್ವಲ್ಪ ಅಜ್ಞಾನವನ್ನು ಸೇರಿಸಿಕೊಂಡು ಮನುಷ್ಯರ ಹತ್ತಿರಕ್ಕೆ ಬಂದಿದೆ.

ದೈವ ಗ್ರಂಥದಲ್ಲಿ ಸ್ವಲ್ಪ ಅಜ್ಞಾನವಿದ್ದರೂ ಎಷ್ಟೋ ಸ್ವಲ್ಪ ದೇವರು ಹೇಳಿರುವ ಜ್ಞಾನವೂ ಸಹ ಇದೆ. ತನ್ನ ಗ್ರಂಥದಲ್ಲಿ ಸ್ವಲ್ಪ ಜ್ಞಾನವೂ, ಸ್ವಲ್ಪ ಅಜ್ಞಾನವನ್ನೂ ಇಟ್ಟಿರುವ ದೇವರು ತನಗೆ ಇಷ್ಟ ಇಲ್ಲದವರಿಗೆ ಅದರಲ್ಲಿನ ಅಜ್ಞಾನವೇ ಜ್ಞಾನವಾಗಿ ಕಾಣಿಸುವಂತೆ ಮಾಡಿ, ಅಸಲಾದ ಜ್ಞಾನವನ್ನು ಅಜ್ಞಾನವಾಗಿ ಕಾಣಿಸುವಂತೆ ಮಾಡುತ್ತದೆ. ಈ ವಿಧಾನದ ಪ್ರಕಾರ ಭಗವದ್ಗೀತೆಯಲ್ಲಿನ ಜ್ಞಾನವೂ ಸಹ ಅಜ್ಞಾನವಾಗಿ ಬಹಳ ಜನರಿಗೆ ಅರ್ಥವಾಗುವುದರಿಂದ ಭಗವದ್ಗೀತೆ ತೆಗೆದುಕೊಂಡರೂ ಅದರಲ್ಲಿನ ಜ್ಞಾನವನ್ನು ಮನುಷ್ಯರು ಗ್ರಹಿಸಲಾರದೆ ಹೋಗುತ್ತಿದ್ದಾರೆ. ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿನ ಕೆಲವು ಶ್ಲೋಕಗಳಿಗೆ ಇಂದಿನ ವರೆಗು ಅಸಲಾದ ಅರ್ಥವೂ, ನಿಜವಾದ ಜ್ಞಾನವೂ ತಿಳಿದಿಲ್ಲ. ಒಂದು ದಿನ ಕೆಲವು ನಿಮಿಷಗಳು ಮಾತ್ರ ಹೇಳಿರುವ ಭಗವದ್ಗೀತಾ ಜ್ಞಾನದಲ್ಲಿಯೇ ಎಷ್ಟೋ ಅಜ್ಞಾನ ಸೇರಿರುವಾಗ, ಮೂರು ಸಂವತ್ಸರಗಳು ಹೇಳಿರುವ ಬೈಬಲ್‌ನಲ್ಲಿ, 23 ಸಂವತ್ಸರಗಳು ಹೇಳಿರುವ ಖುರ್‌ಆನ್ ಜ್ಞಾನದಲ್ಲಿ ಎಷ್ಟು ಅಜ್ಞಾನ ಸೇರಿರುತ್ತದೋ ಊಹಿಸಿಕೊಳ್ಳಬಹುದು. ಈ ರೀತಿ ಪ್ರತಿ ಮತದಲ್ಲಿಯೂ ಜ್ಞಾನದೊಂದಿಗೆ ಅಜ್ಞಾನವೂ ಸಹ ಇದೆ. ಆದರೇ ಜ್ಞಾನಯಾವುದೋ, ಅಜ್ಞಾನ ಯಾವುದೋ ಗುರುತಿಸಲಾರದ ಮನುಷ್ಯ ಮೂರು ದೈವ ಗ್ರಂಥಗಳಲ್ಲಿನ ದೈವ ಜ್ಞಾನವನ್ನು ಗುರುತಿಸಲಾಗದೆ ಹೋಗುತ್ತಿದ್ದಾನೆ.

ಸಮಸ್ತ ಮನುಷ್ಯ ಜಾತಿಗೂ, ಸಮಸ್ತಕ್ಕೂ ದೊಡ್ಡವನಾದ ದೇವರು ಹೇಳಿದ ಜ್ಞಾನ ಒಂದೇ ಎಂದು, ದೇವರು ಹೇಳಿದ ಜ್ಞಾನವನ್ನು ಮೂರು ಮತಗಳಾಗಿ ವಿಭಜಿಸಿಕೊಂಡು ಭಗವದ್ಗೀತಾ ಗ್ರಂಥ ಹಿಂದೂಗಳದೆಂದು, ಬೈಬಲ್ ಗ್ರಂಥ ಕ್ರೈಸ್ತವರದೆಂದು, ಖುರ್‌ಆನ್ ಮುಸ್ಲಿಮ್‌ರದೆಂದು ಹೇಳಿಕೊಳ್ಳುತ್ತಿದ್ದಾರೆ.

ಆದರೇ ಮೂರು ಗ್ರಂಥಗಳಲ್ಲಿ **“ಸಮಸ್ತ ಜನಗಳೇ!”** ಎಂದು ದೇವರು ಸಂಬೋಧಿಸಿ ಹೇಳಿದ್ದಾನಾಗಲೀ, ಮತದ ಹೆಸರು ಇಟ್ಟು ಯಾವ ಗ್ರಂಥದಲ್ಲಿಯೂ ಸಹ ಹೇಳಲಿಲ್ಲ. ದೇವರು ಇಡದ ಮತದ ಹೆಸರನ್ನು, ದೇವರು ಹೇಳದ ಮತದ ಹೆಸರನ್ನು ಮನುಷ್ಯ ಹೇಳಿಕೊಳ್ಳುತ್ತಾ, ನಾನು ಹಿಂದೂ, ನಾನು ಕ್ರೈಸ್ತವನು, ನಾನು ಮುಸ್ಲೀಮ್ ಎಂದು ಅಂದುಕೊಳ್ಳುತ್ತಿದ್ದಾನೆ. ವಾಸ್ತವಕ್ಕೆ ಈ ಮೂರು ಮತಗಳ ಹೆಸರುಗಳು, ಮನುಷ್ಯ ಸೃಷ್ಠಿಸಿಕೊಂಡಿರುವವೇ ಆಗಲೀ ದೇವರು ಹೇಳಿರುವವು ಅಲ್ಲ. ದೇವರು ಹೇಳಿದ ಯಾವುದೋ ಒಂದು ದೈವ ಗ್ರಂಥವನ್ನು ಆಶ್ರಯಿಸಿದ ಮನುಷ್ಯರು ಆ ಗ್ರಂಥ ತಮ್ಮ ಮತ ಗ್ರಂಥವೆಂದು ಹೇಳಿಕೊಳ್ಳುತ್ತಿದ್ದಾರೆ. ಹಿಂದೂಗಳು ಭಗವದ್ಗೀತೆಯನ್ನು ತಮ್ಮ ಮತ ಗ್ರಂಥವಾಗಿ ಹೇಳಿಕೊಳ್ಳುವುದೇ ಅಲ್ಲದೆ ಇತರ ಎರಡು ಗ್ರಂಥಗಳನ್ನು ದ್ವೇಷಿಸುತ್ತಿದ್ದಾರೆ. ಅಲ್ಲೇ ಮತ ದ್ವೇಷಗಳು ಹುಟ್ಟುತ್ತಿವೆ. ಹಾಗೇ ಕ್ರೈಸ್ತವನು ಬೈಬಲ್‌ನ್ನು ತಮ್ಮ ಮತ ಗ್ರಂಥವಾಗಿ ಹೇಳಿಕೊಳ್ಳುತ್ತಾ ಉಳಿದ ಎರಡು ಗ್ರಂಥಗಳನ್ನು ದ್ವೇಷಿಸುತ್ತಿದ್ದಾನೆ. ಅದರಿಂದ ಉಳಿದ ಎರಡು ಗ್ರಂಥಗಳ ಮೇಲೆ ಅಸೂಯೆ ಭಾವ ಏರ್ಪಡುತ್ತಿದೆ. ಇನ್ನು ಅಂತಿಮ ದೈವ ಗ್ರಂಥ ತಮ್ಮದೇ ಎಂದು ಹೇಳಿಕೊಳ್ಳುವವರು ಸಹ ಉಳಿದ ಎರಡು ಗ್ರಂಥಗಳು ತಮ್ಮವಲ್ಲ ಎಂದುಕೊಳ್ಳುತ್ತಿದ್ದಾರೆ. ಆಗ ತಮ್ಮ ಗ್ರಂಥದ ಮೇಲೆಯೇ ದೃಷ್ಠಿಯನ್ನಿರಿಸಿ ಉಳಿದ ದೈವ ಗ್ರಂಥಗಳಲ್ಲಿ ಹೇಳಿದ ವಿಷಯಗಳ ಮೇಲೆ ಅವಗಾಹನೆ ಇಲ್ಲದೆ ಅವೆಲ್ಲವೂ ತಪ್ಪೆಂದು ತಮಗೆ ತಿಳಿದಿರುವುದೇ ಸತ್ಯವೆಂದು ಎನ್ನುತ್ತಿದ್ದಾರೆ. ದೈವಗ್ರಂಥ ಎಂದರೆ ಒಂದೇ ಅರ್ಥದಿಂದ ಕೂಡಿಕೊಂಡಿರುವುದೆಂದು, ದೈವಗ್ರಂಥ ಎಷ್ಟು ಭಾಗಗಳಾಗಿ ಹೇಳಿಕೊಂಡರೂ ಅದು ಒಂದೇ ಸಾರಾಂಶವಿದೆಯೆಂದು ತಿಳಿಯದೇ ಹೋಗುವುದರಿಂದ ಅದನ್ನು ಬೇರೆಬೇರೆ ಗ್ರಂಥಗಳಾಗಿ ಅಂದುಕೊಳ್ಳುವುದು ನಡೆಯುತ್ತಿದೆ. ಈ ವಿಷಯವನ್ನು ಧೃಢೀಕರಿಸುವುದಕ್ಕೆ ಅಂತಿಮ ದೈವ ಗ್ರಂಥ ಖುರ್‌ಆನ್‌ನಲ್ಲಿ ಸೂರಾ 6, ಆಯತ್ 91 ರಲ್ಲಿ **(6–91) “ದೈವ ಗ್ರಂಥವನ್ನು ಬೇರೆಬೇರೆ ಕಾಗದಗಳಾಗಿ (ಗ್ರಂಥಗಳಾಗಿ) ವಿಭಜಿಸಿ ತೋರಿಸುತ್ತಿದ್ದಾರೆ”** ಎಂದು ಸಹ ಹೇಳಲಾಗಿದೆ.

ಸೃಷ್ಠ್ಯಾದಿಯಲ್ಲಿ ಹೇಳಿದ ಜ್ಞಾನವನ್ನೇ ದೇವರು ಮನುಷ್ಯನಹಾಗೆ ಇರುವ ಶ್ರೀಕೃಷ್ಣನಿಂದ ಅರ್ಜುನನಿಗೆ ಹೇಳುವುದು ನಡೆದಿದೆ. ಈ ಮಾತನ್ನು ಧೃಢೀಕರಿಸುವುದಕ್ಕೆ ಭಗವದ್ಗೀತೆಯಲ್ಲಿ ಜ್ಞಾನ ಯೋಗವೆಂಬ ಅಧ್ಯಾಯದಲ್ಲಿ ಒಂದು, ಎರಡು, ಮೂರು ಶ್ಲೋಕಗಳಲ್ಲಿ ಈ ವಿಷಯ ಇದೆ ನೋಡಿರಿ....

**1) ಶ್ಲೋ॥ ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹ ಮವ್ಯಯಮ್।**
**ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇ ಬ್ರವೀತ್ ॥**

**2) ಶ್ಲೋ॥ ಏವಂ ಪರಂಪರಾ ಪ್ರಾಪ್ತಮಿಮಂ ರಾಜರ್ಷ ಯೋ ವಿದುಃ ।**
**ಸಕಾಲೇ ನೇಹ ಮಹತಾ ಯೋಗೋ ನಷ್ಟಃ ಪರನ್ತಪ! ॥**

**3) ಶ್ಲೋ॥ ಸ ಏವಾಯಂ ಮಯಾತೇದ್ಯ ಯೋಗಃ ಪ್ರೋಕ್ತಃ ಪುರಾತನಃ ।**
**ಭಕ್ತೋಸಿ ಮೇ ಸಖಾ ಚೇತ ರಹಸ್ಯಂ ಹ್ಯೇತ ದುತ್ತಮಮ್ ॥**

**ಭಾವಾರ್ತ :–** ಅರ್ಜುನಾ! ನಾಶವಿಲ್ಲದ ಈ ಯೋಗವಿದ್ಯೆಯನ್ನು ಸೂರ್ಯನಿಗೆ ಆದಿಯಲ್ಲೇ ಹೇಳಿದ್ದೇನೆ. ನಾನು ಹೇಳಿರುವುದನ್ನು ಸೂರ್ಯನು ಮನುವಿಗೆ ಹೇಳಿದ್ದಾನೆ. ಮನುವು ಇಕ್ಷ್ವಾಕನೆಂಬ ರಾಜನಿಗೆ ಹೇಳಿದ್ದಾನೆ. ಈ ರೀತಿ ಈ ಜ್ಞಾನ ರಾಜರಿಗೂ, ಋಷಿಗಳಿಗೂ ಪರಂಪರೆಯಾಗಿ ತಿಳಿದುಹೋಗಿದೆ. ಆದರೇ ಈದಿನ ಆ ಯೋಗ ವೊಂದರ ಜ್ಞಾನ ತಿಳಿಯದಂತೆ ಹೋಗಿದೆ. ಮೊದಲು ಹೇಳಿದ ಜ್ಞಾನ ಅತಿ ರಹಸ್ಯವಾದುದು, ಉತ್ತಮವಾದುದು, ಪುರಾತನವಾದುದು, ಎಲ್ಲರಿಗೂ ಹೇಳಲಾರದ್ದು. ಅಂತಹ ದೊಡ್ಡ ಜ್ಞಾನವನ್ನು ಈಗ ನಿನಗೆ ತಿಳಿಸುತ್ತೇನೆ ಕೇಳು.

ಈ ಮೂರು ಶ್ಲೋಕಗಳನ್ನು ನೋಡಿದ ನಂತರ ಸೃಷ್ಟಿ ಆದಿಯಲ್ಲಿ ಆಕಾಶವಾಣಿ ಯಿಂದ ಹೇಳಿದ ಜ್ಞಾನವನ್ನು ಮೊದಲ ದೈವ ಗ್ರಂಥವಾಗಿ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ್ದಾನೆಂದು ತಿಳಿಯುತ್ತಿದೆ. ರಹಸ್ಯವಾಗಿರುವುದು, ಪುರಾತನವಾದುದು, ಉತ್ತಮವಾದುದು, ಎಲ್ಲರಿಗೂ ತಿಳಿಸಲಾರದ್ದು ಎಂದು ಮೊದಲು ಜ್ಞಾನವೊಂದರ ಶ್ರೇಷ್ಠತೆಯನ್ನು ಮೂರನೆಯ ಶ್ಲೋಕದಲ್ಲಿ ಹೇಳುವುದು

ನಡೆದಿದೆ. ಅಂತಹ ದೊಡ್ಡ ಜ್ಞಾನವನ್ನು ಪ್ರಥಮ ದೈವ ಗ್ರಂಥವಾಗಿ ಹೇಳಿದ ನಂತರ ಅದೇ ಜ್ಞಾನವನ್ನೇ ಉಳಿದ ಎರಡು ದೇಶಗಳಲ್ಲಿ, ಎರಡು ಬೇರೆಬೇರೆ ಕಾಲಗಳಲ್ಲಿ ಮಧ್ಯ, ಅಂತಿಮ ದೈವ ಗ್ರಂಥಗಳಾಗಿ ಹೇಳುವುದು ನಡೆದಿದೆ. ಅದರೇ ಗ್ರಂಥಗಳು ಬೇರೆಬೇರೆಯಾಗಿದ್ದರೂ, ಅದರಲ್ಲಿ ಹೇಳಲಾಗಿರುವ ಜ್ಞಾನ ಸಾರಾಂಶ ಎಲ್ಲವೂ ಒಂದೇಯೆಂದು ತಿಳಿಯಬೇಕು. ಆದರೇ ಬಹಳ ಜನರಿಗೆ ಮುಖ್ಯವಾಗಿ ಮುಸ್ಲೀಮ್‌ರಿಗೆ ಒಂದು ಪ್ರಶ್ನೆ ಇದೆ. ಅದು ಏನೆಂದರೇ! ಭಗವದ್ಗೀತೆಯನ್ನು ಹೇಳಿದವನು ಕೃಷ್ಣನು ಅಲ್ಲವೆ! ಕೃಷ್ಣನು ಒಬ್ಬ ಮನುಷ್ಯ ಅಲ್ಲವೆ! ದೇವರು ತಿಳಿಸಿದ ಜ್ಞಾನವನ್ನು ನಾನು ಸೃಷ್ಟಿ ಆದಿಯಲ್ಲಿಯೇ ಸೂರ್ಯನಿಗೆ ಹೇಳಿದ್ದೇನೆಂದು, ಮನುಷ್ಯನಾದ ಕೃಷ್ಣನು ಹೇಳುವುದು ತಪ್ಪಲ್ಲವೆ! ಎಂದು ಕೇಳಬಹುದು. ಇನ್ನೂ **"ಯಾವ ಮನುಷ್ಯನ ಮೇಲೆ ದೈವ ಸಂದೇಶವನ್ನು ನಾನು ಅವತರಿಸುವಂತೆ ಮಾಡಲಿಲ್ಲವೆಂದು"** ಅಂತಿಮ ದೈವ ಗ್ರಂಥದಲ್ಲಿ ಸೂರಾ 6-91 ಆಯತ್‌ನಲ್ಲಿಯೂ ಸಹ ಹೇಳಿದ್ದಾನೆ. ಹಾಗಿರುವಾಗ ಒಬ್ಬ ಮನುಷ್ಯ ಹೇಳಿರುವುದು ದೈವಜ್ಞಾನವಾಗುತ್ತದಾ? ಹಾಗೆ ದೈವಜ್ಞಾನವಾದರೇ ಅಂತಿಮ ದೈವಗ್ರಂಥದಲ್ಲಿ ದೇವರು ನೇರವಾಗಿ ಯಾರೊಂದಿಗೂ ಮಾತನಾಡುವುದಿಲ್ಲ ಎಂದು (42-51) ರಲ್ಲಿ ಹೇಳಿದ ದೇವರ ಮಾತು ಅಸತ್ಯವಾಗುತ್ತದಲ್ಲವೆ! ಎಂದು ಅನುಮಾನವನ್ನು ವ್ಯಕ್ತ ಪಡಿಸಬಹುದು. ನಾವು ಜ್ಞಾನಿಗಳು, ಜ್ಞಾನವನ್ನು ಬೋಧಿಸುವ ಸಾಮರ್ಥ್ಯ ಹೊಂದಿದವರು ಎನ್ನುವ ಕೆಲವರು ಮುಸ್ಲೀಮ್‌ರು ಖುರ್‌ಆನ್ ಒಂದೇ ಏಕೈಕ ದೈವಗ್ರಂಥ ಎನ್ನುತ್ತಿದ್ದಾರೆ. ಬೈಬಲ್, ಭಗವದ್ಗೀತೆ ಎರಡೂ ಮನುಷ್ಯರು ಹೇಳಿರುವವೆಂದು ಖಂಡಿಸುತ್ತಿದ್ದಾರೆ.

ನಾವು ಜ್ಞಾನಿಗಳು ಎನ್ನುವವರು ಪ್ರಶ್ನಿಸುವುದರಲ್ಲಿ ತಪ್ಪಿಲ್ಲ ಆದರೆ, ಪ್ರಶ್ನಿಸುವುದಕ್ಕಿಂತ ಮೊದಲು ಮುಂದೆ ಹಿಂದೆ ನೋಡಿ ಈ ಪ್ರಶ್ನೆಯನ್ನು ಪ್ರಶ್ನಿಸಬಹುದಾ ಇಲ್ಲವಾ? ಎಂದು ಯೋಚಿಸಿ ಪ್ರಶ್ನಿಸುವುದು ಒಳ್ಳೆಯದು. ಏನೋ ಬಾಯಿ ಇದೆ ಮಾತನಾಡಿದ್ದೇವೆ! ಕಾಲು ಇವೆ ನಡೆದಿದ್ದೇವೆ! ಎಂದರೇ ನೀನು ನಡೆದ ದಾರಿ ಒಳ್ಳೆಯದಾ, ಅಲ್ಲವಾ! ಎಂದು ಮೊದಲೇ ನೋಡಿ

ಕೊಳ್ಳಬೇಕಾದ ಅಗತ್ಯವಿದೆ. ಹಾಗೆಯೇ ಮಾತನಾಡುವ ಮಾತು ಸಕ್ರಮವಾದದ್ದೋ, ಅಲ್ಲವೋ! ಮೊದಲೇ ನೋಡಿಕೊಂಡು ಮಾತನಾಡಬೇಕು. ಈ ಪ್ರಶ್ನೆಗೆ ಉತ್ತರವನ್ನು ಪರಿಶೀಲಿಸಿ ನೋಡಿದರೆ, ಅಂತಿಮ ದೈವಗ್ರಂಥ "ಅಲೀ ಇಮ್ರಾನ್" ಎಂಬ ಮೂರನೆಯ ಸೂರಾದಲ್ಲಿ ಏಳನೇ ಆಯತ್‌ನಲ್ಲಿ **(3-7) "ದೇವರ ಸೂಕ್ಷ್ಮ ಜ್ಞಾನ ದೇವರಿಗೆ ಹೊರತು ಯಾವ ಮನುಷ್ಯನಿಗೂ ತಿಳಿಯದೆಂದು ಹೇಳಲಾಗಿದೆ."** ಅಷ್ಟೇ ಅಲ್ಲದೆ ಸೂರಾ 6, ಆಯತ್ 91ರಲ್ಲಿ **(6-91) "ಯಾವ ಮನುಷ್ಯನ ಮೇಲೆ ದೈವಜ್ಞಾನವನ್ನು ಅವತರಿಸುವಂತೆ ಮಾಡಲಿಲ್ಲ"** ಎಂದು ಇದೆ. ಇದನ್ನನುಸರಿಸಿ ದೈವ ವಾಕ್ಕು ಪ್ರಕಾರ ಒಬ್ಬ ಮನುಷ್ಯ ದೈವ ಜ್ಞಾನವನ್ನು ದೈವ ಗ್ರಂಥವಾಗಿ ಬೋಧಿಸಿದ್ದಾನೆ ಎಂದರೇ ಅದು ನಂಬುವಂತಹ ಮಾತಲ್ಲ, ಪೂರ್ತಿ ಅಸತ್ಯವೆಂದು ಹೇಳಬಹುದು. ಅಂತಿಮ ದೈವ ಗ್ರಂಥದಲ್ಲಿಯೇ ಸೂರಾ 42,51ನೇ ಆಯತ್‌ನಲ್ಲಿ **(42-51) "ದೇವರು ನೇರವಾಗಿ ಯಾರೊಂದಿಗೂ ಮಾತನಾಡುವುದಿಲ್ಲ"** ಎಂದು ಸಹ ಇದೆ. ದೇವರು ಮನುಷ್ಯನಿಗೆ ಜ್ಞಾನವನ್ನು ಹೇಳಿದರೇ ಅಥವಾ ತಿಳಿಸಿದರೇ ಹೇಳುವವನು ದೇವರಲ್ಲದ ದೇವರೆಂದು, ಮನುಷ್ಯನಲ್ಲದ ಮನುಷ್ಯನೆಂದು ತಿಳಿಯುತ್ತಿದೆ. ಮನುಷ್ಯರಿಗೆ ಜ್ಞಾನ ಹೇಳಬೇಕೆಂದರೇ ದೇವರು ಮನುಷ್ಯನಾಗೇ ಇದ್ದು, ಮನುಷ್ಯ ಭಾಷೆಯಲ್ಲೇ ಹೇಳಬೇಕಾಗಿದೆ. ಆದ್ದರಿಂದ ಹೇಳುವ ಮನುಷ್ಯ ಮನುಷ್ಯನೇ ಅಲ್ಲ. ಹಾಗೆಂದು ದೇವರೂ ಅಲ್ಲ. ದೇವರಿಗೂ ಮನುಷ್ಯನಿಗೂ ಮಧ್ಯದಲ್ಲಿ, ಇತ್ತ ಮನುಷ್ಯನೂ ಅಲ್ಲದವನು ಅತ್ತ ದೇವರಾಗದವನೂ ಹೇಳಬಲ್ಲನೆಂದು ತಿಳಿಯುತ್ತಿದೆ. ವಿವರವಾಗಿ ಹೇಲಿಕೊಂಡರೇ ದೇವರು ಮನುಷ್ಯ ಶರೀರವನ್ನು ಧರಿಸಿ ತನ್ನ ಜ್ಞಾನವನ್ನು ಹೇಳಬೇಕಾಗಿದೆ. ಮತ್ತೊಂದು ವಿಧವಾಗಿ ಹೇಳಿದರೇ ಮನುಷ್ಯ ದೇವರ ಅಂಶ ಹೊಂದಿ ಜ್ಞಾನವನ್ನು ಹೇಳಬೇಕಾಗಿದೆ. ಆದ್ದರಿಂದ ದೈವ ಗ್ರಂಥವನ್ನು ಮನುಷ್ಯರಿಗೆ ಬೋಧಿಸಿದವನು ಮನುಷ್ಯನಾಗಿರುವುದರಿಂದ ಆತನನ್ನು ನೇರವಾಗಿ ದೇವರು ಅನ್ನಲಾರೆವು. ಹಾಗೇ ಮನುಷ್ಯ ದೈವ ಗ್ರಂಥವನ್ನು ಬೋಧಿಸಿದರೇ ಯಾವ ಮನುಷ್ಯ ಹೇಳಲಾರನು ಆದ್ದರಿಂದ ಅವನನ್ನು ಮನುಷ್ಯ ಎಂದು ಅನ್ನಲಾರೆವು.

ಪ್ರಥಮ ದೈವಗ್ರಂಥವನ್ನು ಬೊಧಿಸಿದ ಕೃಷ್ಣನು ಕಾಣಿಸುವ ಮನುಷ್ಯನೇ, ಹಾಗೇ ದ್ವಿತೀಯ (ಮಧ್ಯ) ದೈವ ಗ್ರಂಥವನ್ನು ಬೋಧಿಸಿದವನು ಕಾಣಿಸುವ ಮನುಷ್ಯನೇ ಆಗಿದ್ದಾನೆ. ಆದರೇ ಎರಡು ಬಾರಿ ದೈವ ಗ್ರಂಥವನ್ನು ಬೋಧಿಸಿದ ಇಬ್ಬರು ಮನುಷ್ಯರು ಎಲ್ಲರ ಹಾಗೆ ಮನುಷ್ಯರಲ್ಲ. ಮನುಷ್ಯ ಅನ್ನುವವನಿಗೆ ಕೆಲವು ನಿಯಮಗಳಿವೆ. ಇಲ್ಲಿ ದೈವ ಗ್ರಂಥ ಭಗವದ್ಗೀತೆಯನ್ನು, ಬೈಬಲ್‌ನ್ನು ಬೋಧಿಸಿದ ಇಬ್ಬರೂ ಮನುಷ್ಯರೇ ಆದರೂ, ಅವರು ಮನುಷ್ಯನಿಗಿರುವ ಧರ್ಮಗಳಲ್ಲಿ ಇಲ್ಲ. ಒಬ್ಬ ಮನುಷ್ಯನನ್ನು ಮೇಲ್ನೋಟಕ್ಕೆ ನೋಡಿದರೇ ಆತನು ಸಾಧಾರಣವಾಗಿ ಕಾಣಿಸುವನು. ಆತನಿಗೆ ಒಳಗಿರುವ ನಿಯಮಗಳು ಅಥವಾ ಧರ್ಮಗಳು ಯಾವೂ ಕಾಣಿಸುವುದಿಲ್ಲ. ಹಾಗೇ ಭಗವದ್ಗೀತೆಯನ್ನು ಬೋಧಿಸಿದವನು ಮೇಲ್ನೋಟಕ್ಕೆ ಕಾಣಿಸುವ ಸಾಧಾರಣ ಮನುಷ್ಯನೇ. ಹೇಗೇ ಭಗವದ್ಗೀತೆಯನ್ನು ಕೇಳಿದ ಅರ್ಜುನನು ಸರ್ವಸಾಧಾರಣ ಮನುಷ್ಯನೇ. ಮೇಲ್ನೋಟಕ್ಕೆ ನೋಡಿದರೆ ದೈವ ಗ್ರಂಥವನ್ನು ಬೋಧಿಸಿದವನು, ದೈವ ಗ್ರಂಥವನ್ನು ಕೇಳಿದವನು ಇಬ್ಬರೂ ಒಂದೇ ವಿಧವಾದ ಮನುಷ್ಯರಾಗಿ, ಒಂದೇ ವಿಧವಾದ ಇಂದ್ರಿಯಗಳಿರುವವರಾಗಿ, ಒಂದೇ ವಿಧವಾದ ಹಸಿವು ಬಾಯಾರಿಕೆ ಇರುವವರಾಗಿ ಕಾಣಿಸುವರು. ಹಾಗಿರುವಾಗ ಎಲ್ಲರೂ ಅವರಿಬ್ಬರನ್ನು ಸಾಧಾರಣ ಮನುಷ್ಯರ ಹಾಗೆ ಲೆಕ್ಕಿಸುತ್ತಾರೆ. ಅದರೇ ದೈವ ಗ್ರಂಥವನ್ನು ಬೋಧಿಸಿದವನು ಮನುಷ್ಯನಾದರೂ, ಆತನ ಶರೀರದೊಳಗೆ ಇರುವ ವಿಧಾನ ಬೇರೆಯೆಂದು ತಿಳಿಯುತ್ತಿದೆ. ಶರೀರದೊಳಗಿನ ವಿಧಾನವನ್ನು ಕುರಿತು ಅಂತಿಮ ದೈವ ಗ್ರಂಥದಲ್ಲಿ ಇಲ್ಲ. ಪ್ರಥಮ ದೈವ ಗ್ರಂಥದಲ್ಲಿ ಶರೀರವೊಂದರ ಒಳಗಿನ ವಿಧಾನವನ್ನು ಕುರಿತ ಜ್ಞಾನ ಸಂಪೂರ್ಣವಾಗಿ ಇದೆ. ಆದ್ದರಿಂದ ಖುರ್‌ಆನ್ ಗ್ರಂಥದಲ್ಲಿ ಸೂರಾ5, ಆಯತ್ 68 ರಲ್ಲಿ (5–68) **"ತೌರಾತು, ಇಂಜೀಲು (ಭಗವದ್ಗೀತೆ, ಬೈಬಲ್) ಮತ್ತು ನಿಮ್ಮ ಪ್ರಭುವಿನಿಂದ ಬಂದಿರುವ ಖುರ್‌ಆನ್ ಗ್ರಂಥವೊಂದರ ಜ್ಞಾನವನ್ನು ನಿಮ್ಮ ಜೀವನಗಳಲ್ಲಿ ನೆಲಗೊಳಿಸುವವರೆಗು ನೀವು ಯಾವ ಧರ್ಮದ ಮೇಲೂ ಇಲ್ಲದಂತೇ"** ಎಂದು ಇದೆ.

ಖುರ್‌ಆನ್‌ನಲ್ಲಿನ ಈ ಮಾತಿನ ಪ್ರಕಾರ ಯಾವ ಮತಸ್ಥನಾದರೂ ಮೂರು ಮತ ಗ್ರಂಥಗಳಾಗಿ ಹೇಳಲಾಗುವ ಪ್ರಥಮ, ಮಧ್ಯಮ, ಅಂತಿಮ ದೈವ ಗ್ರಂಥಗಳಲ್ಲಿನ ಜ್ಞಾನವನ್ನು ತಪ್ಪದೆ ತಿಳಿದಿರಬೇಕು. ಹಾಗಲ್ಲದೆ ನಮ್ಮ ಮತಗ್ರಂಥವನ್ನು ಮಾತ್ರ ನಾವು ಓದಿದ್ದೇವೆಂದು ಎನ್ನುವವರು ಎಷ್ಟು ದೊಡ್ಡ ಜ್ಞಾನಿಗಳಾಗಿ ಚಲಾವಣೆ ಆದರೂ ಅವರು ಸಂಪೂರ್ಣ ಜ್ಞಾನಿಗಳು ಆಗುವುದಿಲ್ಲ. ಅಂಥವರು ಯಾವ ಧರ್ಮದಲ್ಲಿಯೂ ಇಲ್ಲದಹಾಗೇ ಎಂದು ಖುರ್‌ಆನ್‌ನಲ್ಲಿ (5–68) ವಾಕ್ಯವಾಗಿರುವುದನ್ನನುಸರಿಸಿ ಭಗವದ್ಗೀತೆಯನ್ನು ಮಾತ್ರ ಓದಿ ಉಳಿದ ಎರಡು ಗ್ರಂಥಗಳು ಓದದವರು ಹಿಂದೂಧರ್ಮದಲ್ಲಿ ಇಲ್ಲದಹಾಗೇ, ಹಾಗೇ ಬೈಬಿಲ್ ಮಾತ್ರ ಓದಿದ ಕ್ರೈಸ್ತವನು ಕ್ರೈಸ್ತವನು ಅಲ್ಲದಂತೇ, ಖುರ್‌ಆನ್ ಗ್ರಂಥವನ್ನು ಮಾತ್ರ ಓದಿ ಉಳಿದ ಎರಡು ದೈವ ಗ್ರಂಥಗಳನ್ನು ಓದದವರು ಮುಸ್ಲೀಮ್ ಆಲ್ಲದಂತೇ, ಇದು ನಾನು ಸ್ವತಃವಾಗಿ ಹೇಳುವಮಾತು ಅಲ್ಲ. ಅಂತಿಮ ದೈವ ಗ್ರಂಥವಾದ ಖುರ್‌ಆನ್‌ನಲ್ಲಿ (ಸೂರಾ5, ಆಯತ್ 68ರಲ್ಲಿ) ಇರುವ ಕಾನೂನಿನ ಪ್ರಕಾರ ಹೇಳುವುದು. ಭೌತಿಕ ಶರೀರದಲ್ಲಿ ಇರುವವನು ಸಾಧಾರಣ ಜೀವಾತ್ಮನಾ ಅಥವಾ ಅಸಾಧಾರಣ ಪರಮಾತ್ಮನಾ ಎಂದು ತಿಳಿಯುವುದಕ್ಕೆ ಶರೀರ ಅಂತರ್ಭಾಗ ಯಂತ್ರಾಂಗವನ್ನು ತಿಳಿಸಿದ ಪ್ರಥಮ ದೈವಗ್ರಂಥವನ್ನು ಓದಲೇಬೇಕು. ನಾನು ಮುಸ್ಲೀಮ್ ನಮ್ಮ ಖುರ್‌ಆನ್ ಹೊರತು ಇತರರ ಗ್ರಂಥವಾದ ಭಗವದ್ಗೀತೆಯನ್ನು ಓದುವುದಿಲ್ಲ ಎನ್ನುವವನು 5ನೇ ಸೂರಾದಲ್ಲಿ 68ನೇ ಆಯತ್‌ರಲ್ಲಿ ಹೇಳಿದಂತೆ ಅವನು ಯಾವ ಮತ ಧರ್ಮದಲ್ಲಿಯೂ ಸಹ ಇಲ್ಲದಂತೆ ಲೆಕ್ಕಿಸಲ್ಪಡುವನು. ಅಂತಹವನು ಶರೀರ ಜ್ಞಾನ ತಿಳಿಯದವನು ನಿಜವಾದ ಜ್ಞಾನಿ ಅಲ್ಲವೆಂದು ಒಬ್ಬ ತತ್ತ್ವಜ್ಞ ತನ್ನ ಪದ್ಯದಲ್ಲಿ ಹೀಗೆ ಹೇಳಿದ್ದಾನೆ.

*ಪಂಚ ತತ್ವಗಳನ್ನು ಪಂಚೀಕರಿಸದೇ*
*ಒಳ್ಳೆ ಯತಿಗಳೆನ್ನುವ ಮಾತು ಹೇಳಿದರೂ*
*ಕುಂಚದಲ್ಲಿ ಗಜ ಮೊಟ್ಟೆ ಇಟ್ಟ ವಿಧದಲ್ಲಿ*
*ಅಖಿಲ ಜೀವಸಂಗ ಆತ್ಮಲಿಂಗಾ!*

ಈ ಪದ್ಯದ ಪ್ರಕಾರ ಶರೀರವನ್ನು ಕುರಿತು, ಅದರ ನಿರ್ಮಾಣವನ್ನು ಕುರಿತು ತಿಳಿಯದವನು ನಾನು ಜ್ಞಾನಿ ಎಂದರೇ, ಆನೆ ಪುಟ್ಟಿ ಕೆಳಗೆ ಮೊಟ್ಟೆ ಇಟ್ಟಿದೆಯೆನ್ನುವುದು ಎಷ್ಟು ಸತ್ಯವೊ, ಅವನು ಜ್ಞಾನಿ ಎಂಬ ಮಾತೂ ಕೂಡಾ ಅಷ್ಟೇ ಸತ್ಯವಾಗುತ್ತದೆ. ಆನೆ ಪುಟ್ಟಿ ಕೆಳಗೆ ಮೊಟ್ಟೆ ಇಡುವುದು ಅಸತ್ಯವೇ, ಶರೀರ ಅಂತರ್ಭಾಗವನ್ನು ಕುರಿತು, ಅದರ ನಿರ್ಮಾಣವನ್ನು ಕುರಿತು ತಿಳಿಯದವನನ್ನು ಜ್ಞಾನಿ ಎನ್ನುವುದು ಸಹ ಅಸತ್ಯವೇ. ಇದನ್ನನುಸರಿಸಿ ಪಂಚತತ್ತ್ವಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಯಿಂದ ತಯಾರಾದ ಶರೀರವನ್ನು ಕುರಿತು ಅದರ ಅಂತರ್ಭಾಗಗಳ ಕೆಲಸವನ್ನು ಕುರಿತು ತಿಳಿಯದವನು ಎಂದಿಗೂ ಜ್ಞಾನಿ ಆಗಲಾರನು. ಶರೀರ ನಿರ್ಮಾಣ ಜ್ಞಾನ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಮಾತ್ರ ಇದೆ. ಉಳಿದ ಎರಡು ಗ್ರಂಥಗಳಲ್ಲಿ ಆ ವಿಷಯ ಇಲ್ಲ. ಅಂತಿಮ ದೈವಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ಸೂಕ್ಷ್ಮ (ಮುತಷಾಬಿಹಾತ್) ಎಂಬ ಹೆಸರು ಇದೆಯಾಗಲೀ, ಶರೀರದಲ್ಲಿನ ಸೂಕ್ಷ್ಮವನ್ನು ಕುರಿತು ಹೇಳಲಿಲ್ಲ. ಆದ್ದರಿಂದ ಮುಸ್ಲೀಮ್‌ರಿಗೆ ಮುತಷಾಬಿಹಾತ್ ವಾಕ್ಯಗಳ ಕುರಿತು, ಶರೀರದಲ್ಲಿನ ಸೂಕ್ಷ್ಮಜ್ಞಾನವನ್ನು ಕುರಿತು ಅವರಿಗೆ ಎಷ್ಟು ಮಾತ್ರ ತಿಳಿದಿಲ್ಲ. ಮನುಷ್ಯನಿಗೆ ಅವಶ್ಯವಾದ ಸೂಕ್ಷ್ಮ ಜ್ಞಾನವನ್ನು ದೇವರು ಸೂಕ್ಷ್ಮವಾಕ್ಯಗಳಲ್ಲಿ ಅಂತಿಮ ದೈವಗ್ರಂಥದಲ್ಲಿ ತಿಳಿಸಿದರೂ, ಅವುಗಳ ಭಾವವನ್ನು ಮುಸ್ಲೀಮ್‌ರು ತಿಳಿಯಲಾರದೆ ಹೋಗಿದ್ದಾರೆ. ಮುಸ್ಲೀಮ್‌ರಿಗೇ ತಿಳಿಯದಿರುವಾಗ ಅದನ್ನು ಓದದ ಉಳಿದ ಮತಸ್ಥರಿಗೂ ಅಲ್ಲಿ ಹೇಳಿದ ಸೂಕ್ಷ್ಮಜ್ಞಾನ ತಿಳಿದಿಲ್ಲ.

ಮಧ್ಯಮ, ಅಂತಿಮ ದೈವಗ್ರಂಥಗಳಲ್ಲಿ ಇಲ್ಲದ ಕೆಲವು ಜ್ಞಾನ ವಿಷಯಗಳು ಪ್ರಥಮ ದೈವಗ್ರಂಥದಲ್ಲಿ ಇರುವುರಿಂದ ಎಲ್ಲ ಮತಗಳವರಿಗೂ, ಎಲ್ಲರಿಗೂ ಆಮೋದಯೋಗ್ಯವಾದದ್ದು ಭಗವದ್ಗೀತೆಯೆಂದು ಖುರ್‌ಆನ್ ಗ್ರಂಥದಲ್ಲಿ ಸೂರಾ 5, ಆಯತ್ 44ರಲ್ಲಿ ಹೇಳಲಾಗಿದೆ. **(5–44) "ನಾವು ತೌರಾತು ಗ್ರಂಥವನ್ನು ಅವತರಿಸುವಂತೆ ಮಾಡಿದ್ದೇವೆ. ಅದರಲ್ಲಿ ಮಾರ್ಗದರ್ಶಕವೂ, ಜ್ಯೋತಿ ಇವೆ. ಈ ತೌರಾತ್ ಗ್ರಂಥ ಆಧಾರದಿಂದಲೇ ಮುಸ್ಲೀಮ್‌ರಾದ ಪ್ರವಕ್ತರು, ರಬ್ಬಾನೀಗಳು,**

**ಧರ್ಮವೇತ್ತರು ಯೂದರ ಸಮಸ್ಯೆಗಳನ್ನು ಪರಿಷ್ಕರಿಸುತ್ತಿದ್ದರು"** ಎಂದು ಇದೆ. ಆದ್ದರಿಂದ ಯಾವ ಮತಸ್ಥನಾದರೂ ಉಳಿದ ಎರಡು ಗ್ರಂಥಗಳು ಓದಿದ್ದರೂ ತಪ್ಪದೆ ತೌರಾತು ಗ್ರಂಥವನ್ನು ಓದಬೇಕಾಗಿದೆ. ತೌರಾತ್ ಗ್ರಂಥದಲ್ಲಿ ಸೂಕ್ಷ್ಮ ಜ್ಞಾನ ಸಂಪೂರ್ಣವಾಗಿರುವುದರಿಂದ ಎಲ್ಲರೂ ಓದಬೇಕೆಂದು ಖುರ್‌ಆನ್ ಗ್ರಂಥದಲ್ಲಿ ಸೂರಾ 62, ಆಯತ್ 5ರಲ್ಲಿ ಹೀಗೆ ಹೇಳಿದ್ದಾರೆ. **(62–5) "ತೌರಾತು ಗ್ರಂಥದ ಪ್ರಕಾರ ಆಚರಿಸಬೇಕೆಂದು ಆದೇಶಿಸಿದರೂ ಅದಕ್ಕೆ ಅನುಗುಣವಾಗಿ ಆಚರಿಸದವರು, ಎಷ್ಟು ಗ್ರಂಥಗಳನ್ನು ಅನುಸರಿಸಿದರೂ, ಅಂತಹವರನ್ನು ಎಷ್ಟೋ ಗ್ರಂಥಗಳು ಬೆನ್ನಿನ ಮೇಲೆ ಹೊರುವ ಕತ್ತೆಗಳಂತವರೆಂದು ಉಪಮಾನವಾಗಿ ಹೇಳಬಹುದು. ದೇವರ ವಾಕ್ಯಗಳನ್ನು ಧಿಕ್ಕರಿಸಿದವರ ದೃಷ್ಟಾಂತ ಬಹಳ ಕೆಟ್ಟದು. ದುರ್ಮಾರ್ಗದ ಜನರಿಗೆ ಅಲ್ಲಾ ಸನ್ಮಾರ್ಗವನ್ನು ತೋರಿಸುವುದಿಲ್ಲ."** ಇದೆಲ್ಲಾ ಹೇಳುವುದಕ್ಕೆ ಕಾರಣವೇನೆಂದರೇ ಮನುಷ್ಯನಿಗೆ ಬೇಕಾದ ಸೂಕ್ಷ್ಮ ಜ್ಞಾನವೆಲ್ಲವೂ 'ತೌರಾತು' ಎನ್ನುವ "ಭಗವದ್ಗೀತೆ" ಗ್ರಂಥದಲ್ಲಿ ಇದೆ. ಆದ್ದರಿಂದ ಭಗವದ್ಗೀತೆಯನ್ನು ಪ್ರತಿ ಮತಸ್ಥನು ಓದಬೇಕೆಂದು ಖುರ್‌ಆನ್ ಗ್ರಂಥ ಹೇಳುತ್ತಿದೆ, ನಾವೂ ಸಹ ಹೇಳುತ್ತಿದ್ದೇವೆ.

ಭಗವದ್ಗೀತೆಯಲ್ಲಿ ಭೌತಿಕ, ಅಭೌತಿಕ ವಿಷಯ ಜ್ಞಾನವೆಲ್ಲವೂ ಇರುವುದರಿಂದ ಭಗವದ್ಗೀತೆ ಪ್ರಕಾರ ದೇವರು ಮನುಷ್ಯನಾಗಿ ಬರಬಹುದಾಗಲೀ, ಮನುಷ್ಯ ದೇವರಾಗಿ ಹೇಳಲಾಗುವುದಿಲ್ಲ. ಇದನ್ನನುಸರಿಸಿ ಯಾವ ಮನುಷ್ಯನ ಮೇಲೆಯೂ ದೈವಜ್ಞಾನವನ್ನು ದೇವರು ಅವತರಿಸುವಂತೆ ಮಾಡಲಿಲ್ಲ. ದೇವರ ಜ್ಞಾನವನ್ನು ದೇವರೇ ಮನುಷ್ಯನಾಗಿ ಬಂದು ಹೇಳಬೇಕಾಗಿದೆ ಎಂದು ತಿಳಿಯುತ್ತಿದೆ. ದೇವರು ಮನುಷ್ಯನಾಗಿ ಬಂದಾಗ ಮನುಷ್ಯನಾಗೇ ಕಾಣಿಸುವನು ಆದ್ದರಿಂದ ಆತನನ್ನು ದೇವರೆಂದು ಯಾರೂ ಗುರುತಿಸಲಾರರು. ಒಂದು ವೇಳೆ ಒಬ್ಬ ಮನುಷ್ಯ ಯಾರಾದರೂ ನಾನೇ ದೇವರೆಂದು ಹೇಳಿಕೊಂಡರೂ, ಆತನ ಒಳಗಿನ ವಿಷಯ ತಿಳಿದಿಲ್ಲ ಆದ್ದರಿಂದ, ಆತನನ್ನು ದೇವರಲ್ಲ ಎಂದು ಹೇಳುವುದಕ್ಕೂ ಸಹ ಆಧಾರವಿರುವುದಿಲ್ಲ. ಅಂತಹ ಪರಿಸ್ಥಿತಿಯಲ್ಲಿ ಮನುಷ್ಯನಾಗಿ ಬಂದಿರುವ ದೇವರನ್ನು ಗುರುತಿಸಲಾರದೆ ನಂಬದೇ ಹೋಗುವುದು, ದೇವರಲ್ಲದ

ಮನುಷ್ಯನನ್ನು ದೇವರೆಂದು ನಂಬುವುದು ಎಂಬ ತಪ್ಪು ನಡೆಯಬಹುದು. ಅಷ್ಟೇ ಅಲ್ಲದೆ ಭಗವದ್ಗೀತೆಯನ್ನು, ಬೈಬಲ್‌ನ್ನು ಹೇಳಿದ ಮನುಷ್ಯರು ದೇವರ ಅಂಶ ಇರುವವರಾಗಿ, ಅವರನ್ನು ದೈವಾಂಶವರರಾಗಿ ಗುರುತಿಸದೆ ಸಾಮಾನ್ಯ ಮನುಷ್ಯರ ಕೆಳಗೆ ಜಮಕಟ್ಟುವ ಅವಕಾಶ ಇದೆ. ಸೂಕ್ಷ್ಮಜ್ಞಾನ ತಿಳಿಯದವರು ದೇವರು ಮನುಷ್ಯನಾಗಿ ಬರುವುದಿಲ್ಲ ಎಂದು ವಾದಿಸುವ ಅವಕಾಶವೂ ಸಹ ಇದೆ. ಆದ್ದರಿಂದ ಈ ಸಂಶಯಗಳೆಲ್ಲವೂ ಈಡೇರುವುದಕ್ಕೆ ದೈವ ಗ್ರಂಥಗಳನ್ನು ಬೋಧಿಸಿದ ಮನುಷ್ಯ ದೇವರಾ! ಅಲ್ಲವಾ! ಎಂದು ತಿಳಿಯುವುದಕ್ಕೆ, ಮನುಷ್ಯ ಶರೀರದಲ್ಲಿನ ಮರ್ಮವನ್ನು ಪ್ರಥಮ ದೈವಗ್ರಂಥ ಆಧಾರದಿಂದ ತಿಳಿಯಬೇಕಾಗಿದೆ.

**ಶರೀರ ಹೇಗೆ ತಯಾರಾಗುತ್ತಿದೆ, ಶರೀರ ಎಷ್ಟು ಭಾಗಗಳಾಗಿದೆ, ಶರೀರದಲ್ಲಿ ಎಷ್ಟು ಸ್ಥೂಲ ಭಾಗಗಳಿರುವುದು, ಎಷ್ಟು ಸೂಕ್ಷ್ಮ ಭಾಗಗಳಿರುವುದು, ಶರೀರವನ್ನು ನಡೆಸುವ ಯಜಮಾನ ಯಾರು? ಶರೀರದಲ್ಲಿ ಜೀವಿಯು ಏನು ಮಾಡುತ್ತಿದ್ದಾನೆ? ಶರೀರದಲ್ಲಿ ದೇವರು ಇದ್ದಾನಾ? ಇದ್ದರೇ ಎಲ್ಲಿದ್ದಾನೆ? ಹೇಗಿದ್ದಾನೆ?** ಎಂಬ ಸಮಸ್ತ ವಿಷಯಗಳನ್ನು ಶರೀರವನ್ನು ಕ್ಷೇತ್ರವಾಗಿ ಹೇಳಿದ ಭಗವದ್ಗೀತಾ ಗ್ರಂಥದಲ್ಲಿಯೇ ನೋಡಿ ತಿಳಿಯಬೇಕು. **ಭಗವದ್ಗೀತೆಯಲ್ಲಿ ಸಾಂಖ್ಯ ಯೋಗ, ಕ್ಷೇತ್ರಕ್ಷೇತ್ರಜ್ಞ ವಿಭಾಗ ಯೋಗ, ಪುರುಷೋತ್ತಮಪ್ರಾಪ್ತಿ ಯೋಗ** ಎಂಬ ಮೊದಲಾದ ಅಧ್ಯಾಯಗಳನ್ನು ನೋಡಿದರೆ ಶರೀರಾಂತರ್ಗತ ಜ್ಞಾನ ತಿಳಿಯುತ್ತದೆ. ತೌರಾತು (ಭಗವದ್ಗೀತ) ಗ್ರಂಥದ ಪ್ರಕಾರ ಸಾಧಾರಣ ಮನುಷ್ಯ ಶರೀರ ಪಂಚಭೂತ ಗಳೆನ್ನುವ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎಂಬ ಐದು ಭಾಗಗಳಿಂದ ತಯಾರು ಮಾಡಲಾಗಿದೆ. ಈ ಐದು ಭಾಗಗಳು ಶರೀರದಲ್ಲಿ ಸ್ಥೂಲವಾಗಿ ಕಾಣಿಸುತ್ತಿವೆ. ಈ ಐದು ಭಾಗಗಳನ್ನೇ ಪದ್ಯದಲ್ಲಿ ಪಂಚತತ್ತ್ವಗಳು ಎಂದಿದ್ದಾರೆ. ಪಂಚಭೂತಗಳಾದ ಐದು ಪ್ರಕೃತಿ ಭಾಗಗಳನ್ನು ಒಂದೊಂದನ್ನು ಐದು ಭಾಗಗಳಾಗಿ ದೇವರು ವಿಭಜಿಸಿ ಒಟ್ಟು 25 ಭಾಗಗಳನ್ನು ಮಾಡಿದ್ದಾನೆ. ಈ 25 ಭಾಗಗಳನ್ನು ಒಂದೊಂದಿಗೆ ಮತ್ತೊಂದನ್ನು ಸೇರಿಸಿದಾಗ 25 ಶರೀರ ಭಾಗಗಳು ಏರ್ಪಟ್ಟಿವೆ. ಒಂದು ಶರೀರವು ಒಟ್ಟು 25 ಭಾಗಗಳಾಗಿ, 25

# ಪಂಚಭೂತಗಳ ಪಂಚೀಕರಣ



ಹೆಸರುಗಳಿರುವ ಪ್ರಕೃತಿ ಸಂಬಂಧ ಭಾಗಗಳಾಗಿ ಇವೆಯೆಂದು ತಿಳಿಯುತ್ತಿದೆ. ದೇವರು ಪ್ರತಿ ಶರೀರವನ್ನು ಪ್ರಕೃತಿಯೊಂದಿಗೆ ತಯಾರು ಮಾಡಿದ್ದಾನೆ. ಆದರೇ ಆ 25 ಭಾಗಗಳಲ್ಲಿ ಹತ್ತು (10) ಭಾಗಗಳು ಮಾತ್ರ ಕಣ್ಣಿಗೆ ಕಾಣಿಸುವ ಸ್ಥೂಲಶರೀರವಾಗಿ ಇವೆ. ಉಳಿದ ಹದಿನೈದು (15) ಭಾಗಗಳು ಕಣ್ಣಿಗೆ ಕಾಣಿಸದ ಸೂಕ್ಷ್ಮಶರೀರವಾಗಿ ಇವೆ. ಜೀವಾತ್ಮ ಪ್ರಕೃತಿಯೊಂದಿಗೆ ಸೇರಿರುವ ಆತ್ಮವಾಗಿ ಶರೀರದಲ್ಲಿ ಬಂಧಿಸಲ್ಪಟ್ಟಿದೆ, ಆದ್ದರಿಂದ ಜೀವಿಯು ಕಾಣಿಸದ ಹದಿನೈದು ಶರೀರ ಸೂಕ್ಷ್ಮ ಭಾಗಗಳಲ್ಲಿ ಒಂದು ಭಾಗವಾಗಿ ಇದ್ದಾನೆ.

ಶರೀರದಲ್ಲಿನ ಸ್ಥೂಲಭಾಗಗಳು ವರುಸೆ ಕ್ರಮವಾಗಿ ಹೀಗೆ ಇವೆ. 1) ಕಾಲುಗಳು 2) ಕೈಗಳು 3) ಬಾಯಿ 4) ಗುದ 5) ಗುಹ್ಯ (ಲಿಂಗ) ಎನ್ನುವವು ಕರ್ಮೇಂದ್ರಿಯಗಳೆನ್ನಲಾಗುತ್ತವೆ. 1) ಕಣ್ಣು 2) ಕಿವಿ 3) ಮೂಗು 4) ನಾಲಿಗೆ 5) ಚರ್ಮ ಎನ್ನುವವು ಐದು ಜ್ಞಾನೇಂದ್ರಿಯಗಳೆನ್ನಲಾಗುತ್ತಿವೆ. ಕರ್ಮೇಂದ್ರಿಯಗಳು ಐದು, ಜ್ಞಾನೇಂದ್ರಿಯಗಳು ಐದು ಒಟ್ಟು ಹತ್ತು ಭಾಗಗಳು ಕಾಣಿಸುವ ಸ್ಥೂಲ ಶರೀರವಾಗಿ ಹೇಳಲಾಗುತ್ತಿದೆ. ಕಾಣಿಸುವ ಸ್ಥೂಲಶರೀರ ಒಳಗೆ ಕಾಣಿಸದ ಸೂಕ್ಷ್ಮಶರೀರ ಒಳಗೊಂಡಿವೆ. ಸೂಕ್ಷ್ಮ ಶರೀರ ಐದು ವಾಯುಗಳಾಗಿ, ಐದು ತನ್ಮಾತ್ರಗಳಾಗಿ (ಜ್ಞಾನೇಂದ್ರಿಯ ಶಕ್ತಿಗಳಾಗಿ) ಐದು ಅಂತಃಕರಣಗಳಾಗಿ ಇದೆ. ಸೂಕ್ಷ್ಮ ಶರೀರವನ್ನು ಬೇರ್ಪಡಿಸಿ ವಿವರವಾಗಿ ಹೇಳಿದರೆ ಕಾಣಿಸದ ಐದು ವಾಯುಗಳು ಕ್ರಮವಾಗಿ ವ್ಯಾನವಾಯು, ಉದಾನವಾಯು, ಸಮಾನ ವಾಯು, ಪ್ರಾಣವಾಯು, ಅಪಾನವಾಯುವಾಗಿ ಇವೆ. ಐದು ಇಂದ್ರಿಯ ಶಕ್ತಿಗಳನ್ನು ಹೇಳಿದರೇ ಕ್ರಮವಾಗಿ ನೋಟ, ಆಲಿಸುವುದು, ವಾಸನೆ (ಘ್ರಾಣಶಕ್ತಿ), ರುಚಿ , ಸ್ಪರ್ಷಯಾಗಿ ಇವೆ. ಐದು ಅಂತಃಕರಣಗಳನ್ನು ಕುರಿತು ಹೇಳಿದರೆ ಕ್ರಮವಾಗಿ ಮನಸ್ಸು, ಬುದ್ಧಿ, ಚಿತ್ತ, ಅಹಂ, ಜೀವಿಯು ಎನ್ನುವವಾಗಿ ಇವೆ. ಇದರಲ್ಲಿ ಜೀವಿಯು ಆತ್ಮ ಸಂಬಂಧವಾದವನಾದರೂ ಪ್ರಕೃತಿಯೊಂದಿಗೆ ಸೇರಿ ಜೀವಾತ್ಮನಾಗಿ ಬಂಧಿಸಲ್ಪಟ್ಟ ಆತ್ಮವಾಗಿ ಶರೀರದಲ್ಲಿ ಇದ್ದಾನೆ. ಈ ರೀತಿ ತಯಾರಾದ ಮನುಷ್ಯ ಶರೀರ ಹೇಗೆ ಬದುಕಬೇಕು,

ಹೇಗೆ ಸಾಯಬೇಕು, ಹೇಗೆ ಕಷ್ಟ ಸುಖಗಳು ಅನುಭವಿಸಬೇಕು, ಯಾವಾಗ ಏನನ್ನು ತಿನ್ನಬೇಕು, ಯಾವಾಗ ಏನನ್ನು ಮಾಡಬೇಕು ಎನ್ನುವುದಕ್ಕೆ ಕಾರಣವಾಗಿ ಕರ್ಮವಿರುತ್ತದೆ. ಕರ್ಮವನ್ನು ಪಾಲಿಸುತ್ತಾ ಜೀವಿಯನ್ನು ಆಡಿಸುವುದಕ್ಕೆ ಶರೀರದಲ್ಲಿ ಶರೀರಕ್ಕೆ ಅಧಿಪತಿಯಾಗಿ ಆತ್ಮ ಇದೆ. ಶರೀರದಲ್ಲಿ ಆಡಬೇಕಾದವನು ಜೀವಾತ್ಮ, ಆಡಿಸುವವನು ಆತ್ಮ ಇರುವಾಗ, ಶರೀರದಲ್ಲಿ ಎರಡು ಆತ್ಮಗಳನ್ನು ಗಮನಿಸುವ ಸಾಕ್ಷಿಯಾಗಿ ದೇವರೂ ಸಹ ಇದ್ದಾನೆ, ಇದೇ ವಿಷಯವನ್ನೇ ಅಂತಿಮ ದೈವ ಗ್ರಂಥವಾದ ಖುರ್‌ಆನ್‌ನಲ್ಲಿ ಸೂರಾ 50, ಆಯತ್ 21ರಲ್ಲಿ ಹೀಗೆ ಹೇಳಿದ್ದಾರೆ.

**(50–21) "ಪ್ರತಿ ಪ್ರಾಣಿ ಒಬ್ಬ ಓಡಿಸುವವನೊಂದಿಗೆ, ಮತ್ತು ಸಾಕ್ಷಿಯನ್ನು ಕೊಡುವವನೊಂದಿಗೆ ಸಹ ಬರುತ್ತದೆ".**

**(50–21) "ಪ್ರತಿ ವ್ಯಕ್ತಿ ತನ್ನ ಹಿಂದೆ ತನ್ನನ್ನು ತೆಗೆದುಕೊಂಡು ಬರುವವನೊಬ್ಬನು, ಸಾಕ್ಷಿ ಕೊಡುವವನೊಬ್ಬನು ಇರುವ ಸ್ಥಿತಿಯಲ್ಲಿ ಹಾಜರಾಗುತ್ತಾನೆ."**

ಖುರ್‌ಆನ್‌ನಲ್ಲಿನ ಈ ವಾಕ್ಯದಲ್ಲಿ ಮೂರು ಆತ್ಮಗಳ ವಿಷಯ ತಿಳಿದು ಬಂದಿದೆ. ಪ್ರತಿ ಪ್ರಾಣಿ ಒಂದು ಜೀವಾತ್ಮವಾದಾಗ, ಪ್ರತಿ ಜೀವಿಯನ್ನು ನಡೆಸುವ ಆತ್ಮನನ್ನು ನಡೆಸುವವನು ಎಂದು ಹೇಳಿದ್ದಾರೆ. ಜೀವಾತ್ಮನನ್ನು, ಆತ್ಮನನ್ನು ಗಮನಿಸುತ್ತಾ ಶರೀರದಲ್ಲಿಯೇ ಇರುವ ಪರಮಾತ್ಮನನ್ನು ಅಥವಾ ದೇವರನ್ನು ಸಾಕ್ಷಿಯಾಗಿ ಇರುವವನು ಎಂದು ಹೇಳಿದ್ದಾರೆ. ಈ ಮೂರು ಆತ್ಮಗಳು ಪ್ರತಿ ಸಜೀವ ಶರೀರದಲ್ಲಿಯೂ ಇವೆ. ಒಬ್ಬ ಸಾಧಾರಣ ವ್ಯಕ್ತಿಯಲ್ಲಿ ಅವನೊಂದಿಗೆ ಉಳಿದ ನಡೆಸುವ ಆತ್ಮ, ನೋಡುವ ಆತ್ಮ ಎರಡೂ ಇವೆ. ಈ ರೀತಿ ಒಂದು ಶರೀರದಲ್ಲಿ ಮೂರು ಆತ್ಮಗಳಿದ್ದು ಶರೀರದ ಜೀವನವನ್ನು ನಡೆಸುತ್ತಾ ಇದ್ದಾರೆ. ಒಬ್ಬ ಮನುಷ್ಯ ತನ್ನ ಜೀವನದಲ್ಲಿ ಜ್ಞಾನಿಯಾಗಿದ್ದರೂ, ಅಜ್ಞಾನಿಯಾಗಿದ್ದರೂ, ಪಂಡಿತನಾಗಿದ್ದರೂ, ಪಾಮರನಾಗಿದ್ದರೂ, ಮುಸ್ಲೀಮ್‌ನಾಗಿದ್ದರೂ, ಹಿಂದೂವಾಗಿದ್ದರೂ ಆತನ ಶರೀರದಲ್ಲಿ ಇರುವ ವಿಧಾನ ಅಷ್ಟೇ ಎಂದು, ಆ ಶರೀರ ಮೂರು ಆತ್ಮಗಳಿಂದ ನಡೆಸಲ್ಪಡುತ್ತಿದೆ ಯೆಂದು, ಆ ಮೂರು ಆತ್ಮಗಳೇ

ನಡೆಯಬೇಕಾದವನು, ನಡೆಸುವವನು, ನೋಡುವವನು ಎಂದು ಮೂವರಾಗಿ ಹೇಳಲಾಗುತ್ತಿವೆಯೆಂದು ತಿಳಿಯಬೇಕು. ಶರೀರದೊಳಗೆ ಈ ವಿಧಾನವಿರುವವನು ಸರ್ವಸಾಧಾರಣ ಮನುಷ್ಯನೆಂದು ತಿಳಿಯಬೇಕು. ಇದೇ ವಿಷಯವನ್ನೇ ಪ್ರಥಮ ದೈವ ಗ್ರಂಥದಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗ ಎಂಬ ಅಧ್ಯಾಯದಲ್ಲಿ 16,17 ಶ್ಲೋಕಗಳಲ್ಲಿ ಮೂರು ಆತ್ಮಗಳನ್ನು ಮೂವರು ಪುರುಷರಾಗಿ ಹೇಳುತ್ತಾ ಕ್ಷರನು, ಅಕ್ಷರನು, ಪುರುಷೋತ್ತಮನು ಎಂದು ಹೇಳಿದ್ದಾರೆ. ಖುರ್‌ಆನ್‌ನಲ್ಲಿ ಹೇಳಿದ ಹಾಗೆ ನಡೆಯಬೇಕಾದ ಜೀವಿಯು ಕ್ಷರ ಪುರುಷನೆಂದೂ, ನಡೆಸುವ ಆತ್ಮ ಅಕ್ಷರ ಪುರುಷನೆಂದೂ, ಸಾಕ್ಷಿಯಾಗಿ ನೋಡುವವನು ಪುರುಷೋತ್ತಮ ನೆಂದೂ ಭಗವದ್ಗೀತೆಯಲ್ಲಿ ಐದು ಸಾವಿರ ಸಂವತ್ಸರಗಳ ಪೂರ್ವವೇ ಹೇಳಲಾಗಿದೆ. ನಂತರ 3600 ಸಂವತ್ಸರಗಳಿಗೆ ಬಂದಿರುವ ಅಂತಿಮ ದೈವ ಗ್ರಂಥದಲ್ಲಿಯೂ, 3000 ಸಂವತ್ಸರಗಳಿಗೆ ಬಂದಿರುವ ಮಧ್ಯಮ ದೈವ ಗ್ರಂಥದಲ್ಲಿಯೂ ಮೂರು ಆತ್ಮಗಳ ವಿಷಯ ಬರೆಯಲಾಗಿರುವಂತೆ ಆಯಾ ಗ್ರಂಥ ವಾಕ್ಯಗಳಲ್ಲಿ ತಿಳಿಯುತ್ತಿದೆ.

ಯಾವಾಗ ದೇವರು ಭೂಮಿಮೇಲೆ ಮನುಷ್ಯರಿಗೆ ತನ್ನ ಜ್ಞಾನವನ್ನು ಹೇಳಬೇಕಾದ ಅಗತ್ಯವಿದೆಯೋ, ಆಗ ದೇವರು ಭೂಮಿಮೇಲೆ ಅವತರಿಸುತ್ತಾನೆ. ದೇವರು ಪ್ರತ್ಯಕ್ಷವಾಗಿ ಅಥವಾ ನೇರವಾಗಿ ಯಾರೊಂದಿಗೂ ಮಾತನಾಡುವುದಿಲ್ಲ. ಆದ್ದರಿಂದ ದೇವರು ದೇವರಾಗಿ ಅಲ್ಲದೆ ಮನುಷ್ಯನ ಹಾಗೆ ಅವತರಿಸಿ, ಮನುಷ್ಯರ ಮಧ್ಯದಲ್ಲಿದ್ದು ತನ್ನ ಜ್ಞಾನವನ್ನು ತಾನೇ ಹೇಳಬೇಕಾಗಿದೆ. ದೇವರು ಮನುಷ್ಯನಾಗಿ ಬಂದಾಗ ಆ ಶರೀರದಲ್ಲಿನ ಯಂತ್ರಾಂಗವೆಲ್ಲವೂ ಸಾಧಾರಣ ಮನುಷ್ಯನಲ್ಲಿ ಇದ್ದಂತೆ ಇರುವುದಿಲ್ಲ. ಆದ್ದರಿಂದ ಹಾಗೆ ಬಂದಿರುವವನನ್ನು ಸಾಧಾರಣ ಮನುಷ್ಯ ಎನ್ನುವದಕ್ಕೆ ಅವಕಾಶವಿಲ್ಲ. ದೇವರು ಅಸಾಧಾರಣ ಮನುಷ್ಯನಾಗಿ ಭೂಮಿ ಮೇಲೆಗೆ ಬರುತ್ತಿದ್ದಾನೆ. ಸಾಧಾರಣ ಮನುಷ್ಯನಲ್ಲಿ 24 ಶರೀರ ಭಾಗಗಳು ಇದ್ದೂ ಅದರಲ್ಲಿ ಕ್ಷರ, ಅಕ್ಷರ, ಪುರುಷೋತ್ತಮ ಮೂರು ಆತ್ಮಗಳು ಇವೆ. ದೇವರು ಜ್ಞಾನವನ್ನು ಹೇಳುವುದರ ಸಲುವಾಗಿ ಮನುಷ್ಯನಾಗಿ ಬಂದು ಹುಟ್ಟಿದರೆ,

ಆ ಶರೀರ ಪಂಚಭೂತಗಳಿಂದ ತಯಾರಾದ 24 ಶರೀರ ಭಾಗಗಳೊಂದಿಗೆ ಇದ್ದರೂ, ಎಲ್ಲರ ಶರೀರಗಳಲ್ಲಿ ಇರುವಂತೆ ಮೂರು ಆತ್ಮಗಳು ಇರುವುದಿಲ್ಲ. ದೇವರು ಮನುಷ್ಯನಾಗಿ ಬಂದರೆ ಖುರ್‌ಆನ್‌ನಲ್ಲಿ ಹೇಳಿದಂತೆ **"ಓಡಿಸುವವನು, ಓಡುವವನು, ನೋಡುವವನು"** ಎಂಬ ಮೂವರು ಇಲ್ಲ. ದೇವರು ಮನುಷ್ಯನಾಗಿ ಬಂದರೇ ಆ ಶರೀರವನ್ನು **'ಭಗವಂತನು'** ಎಂಬ ಪ್ರತ್ಯೇಕವಾದ ಹೆಸರೊಂದಿಗೆ ಕರೆಯುತ್ತೇವೆ. ಭಗವಂತನು ಎಂದರೆ ಭಗದಿಂದ (ಸ್ತ್ರೀ ಗರ್ಭದಿಂದ) ಹುಟ್ಟಿದವನು ಎಂದು ಅರ್ಥ. ಸ್ತ್ರೀ ಗರ್ಭದಿಂದ ದೇವರು ಹೊರತು ಪ್ರಪಂಚದಲ್ಲಿ ಯಾರೂ ಹುಟ್ಟುವುದಿಲ್ಲ. ಈ ಮಾತು ಸ್ವಲ್ಪ ಹೊಸ ವಿಷಯವಾದರೂ ನೂರಕ್ಕೆ ನೂರು ಪಾಲು ಸತ್ಯ. ಈ ವಿಷಯವನ್ನು ಸಂಪೂರ್ಣವಾಗಿ ತಿಳಿಯಬೇಕೆಂದರೇ ನಮ್ಮ ರಚನೆಗಳಲ್ಲಿನ **"ಜನನ ಮರಣ ಸಿದ್ಧಾಂತ"** ಎಂಬ ಗ್ರಂಥದಲ್ಲಿ ನೋಡಿರಿ. ದೇವರು ಮನುಷ್ಯನಾಗಿ ಬಂದ ಶರೀರದಲ್ಲಿ ಮೊದಲಿಗೆ ಓಡಿಸಲ್ಪಡುವವನು ಎಂಬ ಜೀವಿಯು ಇರುವುದಿಲ್ಲ. ನಂತರ ಎರಡನೆಯವನಾದ ಓಡಿಸುವ ಆತ್ಮ ಇರುವುದಿಲ್ಲ. ಅನುಭವಿಸುವ ಜೀವಿಯಾಗಲೀ, ಅನುಭವಿಸುವಂತೆ ಮಾಡುವ ಆತ್ಮವಾಗಲೀ ಭಗವಂತನ ಶರೀರದಲ್ಲಿ ಇರುವುದಿಲ್ಲ. ಆ ಶರೀರದಲ್ಲಿ ದೇವರು ಒಬ್ಬನೇ ಇರುತ್ತಾನೆ. ಭಗವಂತನ ಶರೀರದಲ್ಲಿ ಜೀವಾತ್ಮ, ಆತ್ಮ ಇಲ್ಲವೆನ್ನುವ ವಿಷಯ ನೋಡುವವರಿಗೆ ಯಾರಿಗೂ ತಿಳಿದಿಲ್ಲ. ಶರೀರದಲ್ಲಿ ಮೂರು ಆತ್ಮಗಳು ಇಲ್ಲವೆಂದು, ಇರುವುದು ಒಂದೇ ಪರಮಾತ್ಮಯೆಂದು ಹರಿ, ಹರ, ಬ್ರಹ್ಮಾದಿಗಳು ಸಹ ಗುರುತಿಸುವುದಕ್ಕೆ ಸಾಧ್ಯವಿಲ್ಲ.

ದೇವರು ಮನುಷ್ಯನಾಗಿ ಬಂದರೇ, ಆತನು ಧರಿಸಿದ ಶರೀರದಲ್ಲಿ ಒಂದೇ ಒಂದು ಪರಮಾತ್ಮ (ದೇವರು) ಮಾತ್ರವೇ ಇರುತ್ತದೆ. ಇಲ್ಲೊಂದು ಪ್ರಶ್ನೆ ಬರಬಹುದು. ಅದೇನೆಂದರೇ! ದೇವರು ಕ್ರಿಯಾರಹಿತನು ಅಲ್ಲವೆ! ಯಾವ ಕೆಲಸವನ್ನು, ಯಾವ ಕಾರ್ಯವನ್ನು ಮಾಡದವನು ದೇವರು ಅದರೇ, ದೇವರು ಜನ್ಮಿಸಿ ಜ್ಞಾನವನ್ನು ಹೇಗೆ ಹೇಳುವನು? ಸರ್ವಸಾಧಾರಣ ಮನುಷ್ಯನ ಹಾಗೆ ಎಲ್ಲ ಕಾರ್ಯಗಳನ್ನು ಹೇಗೆ ಮಾಡುವನು? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಈ ರೀತಿ ಇದೆ. ದೇವರು ಮನುಷ್ಯನಾಗಿ ಬಂದರೇ ಆತನನ್ನು

ಯಾರೂ ಗುರುತಿಸದ ಹಾಗೆ ಎಲ್ಲರಹಾಗೆ ಇರುತ್ತಾ, ಎಲ್ಲ ಕಾರ್ಯಗಳು ಮಾಡುತ್ತಾ, ಎಲ್ಲ ಅನುಭವಗಳನ್ನು ಅನುಭವಿಸುತ್ತಾ, ಅವಶ್ಯ ಬಂದಾಗ ಜ್ಞಾನವನ್ನು ಸಹ ಹೇಳುವನು. ಹಾಗೆ ಎಲ್ಲ ಕಾರ್ಯಗಳು ಮಾಡುವುದರಿಂದ ಆತನನ್ನು ಯಾರೂ ಗುರುತಿಸಲಾರದೆ ಹೋಗುತ್ತಿದ್ದಾರೆ. ಇಲ್ಲಿ ಮತ್ತೊಂದು ಪ್ರಶ್ನೆ ಕೆಲವರಿಗೆ ಬಂದು ಹೀಗೆ ಕೇಳಬಹುದು. "ಸಾಧಾರಣ ಮನುಷ್ಯನ ಶರೀರದಲ್ಲಿ ಜೀವಾತ್ಮನನ್ನು ಆಡಿಸುವ ಆತ್ಮ ಇರುವುದರಿಂದ ಆತ್ಮನಿಂದ ಕೆಲಸಗಳು ನಡೆಯುತ್ತಿವೆ. ದೇವರು ಧರಿಸಿದ ಶರೀರದಲ್ಲಿ ದೇವರು ಹೊರತು ಆತ್ಮ ಇಲ್ಲದಿರುವುದರಿಂದ ಕಾರ್ಯಗಳೆಲ್ಲವೂ ಹೇಗೆ ನಡೆಯುತ್ತಿವೆ? ದೇವರು ಕೆಲಸ ಮಾಡದವನು ಆದರೇ ನಡೆಯುವ ಕೆಲಸಗಳನ್ನು ದೇವರು ಅವತರಿಸಿದ ಶರೀರದಲ್ಲಿ ಯಾರು ಮಾಡುತ್ತಿದ್ದಾರೆ?" ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿ ಇದೆ ನೋಡಿರಿ. ಪರಮಾತ್ಮ ಮನುಷ್ಯನಾಗಿ ಅವತರಿಸಿದ ಶರೀರದಲ್ಲಿ ದೇವರು ಹೊರತು ಉಳಿದ ಎರಡು ಆತ್ಮಗಳು ಇಲ್ಲವೆನ್ನುವುದು ಸತ್ಯವೇ. ಅದರೇ ದೇವರು ಧರಿಸಿದ ಶರೀರದಲ್ಲಿಯೂ ಸಾಧಾರಣ ಮನುಷ್ಯನ ಶರೀರದಲ್ಲಿ ನಡೆದಂತೇ ಕೆಲಸಗಳೆಲ್ಲವೂ ನಡೆಯುತ್ತಿವೆ ಎನ್ನುವುದೂ ಸತ್ಯವೇ. ಅಸಲು ವಿಷಯ ಏನೆಂದರೇ ದೇವರು ಮನುಷ್ಯನಾಗಿ ಬಂದಿರುವ ಶರೀರದಲ್ಲಿ ದೇವರು ದೇವರಾಗಿಯೇ ಇರದೇ ದೇವರು ಆತ್ಮನಾಗಿ ಬದಲಾಗಿ, ಅವಶ್ಯವಿದ್ದಾಗ ಜೀವಾತ್ಮನಾಗಿ ಕಷ್ಟಸುಖಗಳನ್ನು ಅನುಭವಿಸುತ್ತಿದ್ದಾನೆ. ಅವಶ್ಯವಿದ್ದಾಗ ಆತ್ಮನಾಗಿ ಎಲ್ಲ ಕೆಲಸಗಳು ಶರೀರದೊಂದಿಗೆ ಮಾಡಿಸುತ್ತಿದ್ದಾನೆ. ಅವಶ್ಯಬಂದಾಗ ಎರಡನೆಯ ಆತ್ಮನಾಗಿ ರಹಸ್ಯ ಜ್ಞಾನವನ್ನು ಹೇಳುತ್ತಿದ್ದಾನೆ. ಇನ್ನೂ ಅಪುರೂಪವಾಗಿ ಪರಮಾತ್ಮನಾಗಿಯೂ ಪ್ರಕೃತಿಯನ್ನೇ ಶಾಸಿಸುತ್ತಿದ್ದಾನೆ.

ಉದಾಹರಣೆಗೆ ಪ್ರಥಮ ದೈವಗ್ರಂಥವನ್ನು ಹೇಳಿದಾಗ ಸುಮಾರು 5000 ಸಂವತ್ಸರಗಳ ಪೂರ್ವದಲ್ಲಿ ದೇವರು ಮಾನವ ಶರೀರವನ್ನು ಧರಿಸಿ ಬರುವುದು ನಡೆದಿದೆ. ಭಗವಂತನಾಗಿ ಬಂದಿರುವ ಆ ಶರೀರಕ್ಕೆ 'ಶ್ರೀಕೃಷ್ಣ' ಎಂದು ಹೆಸರು ಇಡುವುದು ನಡೆದಿದೆ. ಕೃಷ್ಣನ ಶರೀರದಲ್ಲಿ ಪರಮಾತ್ಮ ಹೊರತು

ಜೀವಾತ್ಮ, ಆತ್ಮಗಳು ಎರಡೂ ಇಲ್ಲ. ಆದರೇ ಜೀವಾತ್ಮ, ಆತ್ಮ ಮಾಡಬೇಕಾದ ಕೆಲಸಗಳೆಲ್ಲವೂ ಭಗವಂತನು ತನ್ನ ಶರೀರದಿಂದ ಮಾಡಬೇಕಾಗಿದೆ. ಹಾಗೆ ಮಾಡಿದಾಗಲೇ ದೇವರ ಅವತಾರವನ್ನು ಯಾರೂ ಗುರುತಿಸಲಾರರು. ಆದ್ದರಿಂದ ಸರ್ವಸಾಧಾರಣ ಮನುಷ್ಯನಲ್ಲಿ ನಡೆದಂತೆ ಎಲ್ಲ ಕೆಲಸಗಳು ಭಗವಂತನ ಶರೀರದಲ್ಲಿ ನಡೆಯುವುದಕ್ಕೆ, ಆ ಶರೀರದಲ್ಲಿನ ದೇವರು ದೇವರಾಗಿ ಇರದೇ ಆತ್ಮನಾಗಿ ಬದಲಾಗಿ, ಈಕಡೆ ಜೀವಾತ್ಮನಾಗಿ ಕೆಲಸಗಳು ಮಾಡುತ್ತಾ, ಆಕಡೆ ಆತ್ಮನಾಗಿ ಕೆಲಸಗಳು ಮಾಡಿಸುತ್ತಾ ಇದ್ದಾನೆ. ಅಂತಹ ಗುರುತುಹಿಡಿಯದ ಜೀವನವನ್ನು ದೇವರು ಭೂಮಿ ಮೇಲೆ ಕಳೆಯುತ್ತಿದ್ದಾನೆ. ಹಾಗೆ ಯಾರೂ ಗುರುತಿಸದಂತೆ ಇದ್ದು ಸಮಯ ಬಂದಾಗ ತಾನು ಹೇಳಬೇಕಾದ ಜ್ಞಾನವನ್ನು ಹೇಳುವನು. ಆದರೇ ದೇವರು ಆತ್ಮನಾಗಿ ಇರುವುದು ಅಸತ್ಯವೆಂದು ಯಾರಾದರೂ ಅನ್ನುವುದಕ್ಕೆ ಅವಕಾಶವಿದೆ. ಅಷ್ಟೇ ಅಲ್ಲದೆ ದೇವರು ಈ ರೀತಿ ಶರೀರದಲ್ಲಿ ಇರುತ್ತಾನೆ ಎನ್ನುವುದಕ್ಕೆ ಆಧಾರವಿದೆಯಾ? ಶಾಸ್ತ್ರ ಬದ್ಧತೆ ಇದೆಯಾ? ಎಲ್ಲಾದರೂ ದೇವರು ಹೇಳಿದ್ದಾನಾ? ಎಂದು ಕೆಲವರು ಕೇಳಬಹುದು. ಈ ವಿಷಯ ಈಗ ನಾವು ಹೊರತು ಯಾರೂ ಹೇಳಿರಲಿಲ್ಲ. ದೇವರು ಕೂಡಾ ಇದನ್ನು ಎಲ್ಲಿಯೂ ಪ್ರಸ್ತಾಪಿಸಲಿಲ್ಲ. ಆದ್ದರಿಂದ ಈ ವಿಷಯಕ್ಕೆ ಮೊದಲಿರುವ ಆಧಾರವನ್ನು ತೋರಿಸಲಾರೆವು ಆದರೇ ನಾವು ಹೇಳುವ ಮಾತು ಸತ್ಯವೆನ್ನುವುದಕ್ಕೆ ಒಂದು ಆಧಾರವಿದೆ. ಪುನರ್ಜನ್ಮಗಳ ವಿಷಯಗಳು ಕೂಡಾ ಇತರರು ಹೇಳಿದರೇ ಕೇಳಬೇಕಾಗಿರುವುದೇ ಹೊರತು ಅದು ಸತ್ಯವೋ! ಅಸತ್ಯವೋ ಎಂಬ ಅನುಮಾನ ಮನುಷ್ಯರಿಗಿತ್ತು. ಅಂತಹ ಅನುಮಾನ ಇಲ್ಲದಂತೆ ಪುನರ್ಜನ್ಮಗಳ ವಿಷಯ ಸತ್ಯ ಎನ್ನುವಂತೆ ಸತ್ತುಹೋಗಿ ಹುಟ್ಟಿದ ಕೆಲವರಿಗೆ ಚಿಕ್ಕ ವಯಸ್ಸಿನಲ್ಲಿಯೇ ಹಿಂದಿನ ಜನ್ಮಗಳ ವಿಷಯಗಳು ಜ್ಞಾಪಕ ಬರುವುದರಿಂದ, ಬಂದಿರುವ ಜ್ಞಾಪಕಗಳನ್ನು ವಿಚಾರಿಸಿದರೆ ಸತ್ಯವೆಂದು ತಿಳಿಯುವುದರಿಂದ, ಪುನರ್ಜನ್ಮಗಳು ನಿಜವೆಂದು ತಿಳಿದಿದೆ. ಹಾಗೇ ಇಲ್ಲಿಯವರೆಗೂ ಪ್ರಸ್ತಾವನೆಗೆ ಬಾರದ ದೇವರ ಜನ್ಮ ವಿಷಯಗಳು ಈಗ ಹೊಸದಾಗಿ ಕೇಳುವುದರಿಂದ ಬಹಳ ಜನರಿಗೆ ಈ ವಿಷಯಗಳ ಮೇಲೆ ಅನುಮಾನವಿರಬಹುದು. “ದೇವರು ಅವತರಿಸುತ್ತಾನೆ”

ಎಂದು ಭಗವದ್ಗೀತೆಯಲ್ಲೂ, ಖುರ್‌ಆನ್ ಗ್ರಂಥದಲ್ಲಿಯೂ ಪ್ರತ್ಯಕ್ಷ ವಾಕ್ಯಗಳಿದ್ದರೂ ಹಿಂದೂಗಳು ನಂಬೀ ನಂಬದಂತಿರುವಾಗ, ಮುಸ್ಲೀಮ್‌ರು ಪೂರ್ತಿ ನಂಬದಂತಿದ್ದಾರೆ. **ಅಂತಿಮ ದೈವ ಗ್ರಂಥದಲ್ಲಿ 89ನೇ ಸೂರಾ, 21, 22 ಆಯತ್‌ಗಳಲ್ಲಿ, 15ನೇ ಸೂರಾ 29,30 ವಾಕ್ಯಗಳಲ್ಲಿಯೂ 'ದೇವರು ಅವತರಿಸುತ್ತಾನೆ'** ಎಂದು ಪ್ರತ್ಯಕ್ಷವಾಗಿ ಹೇಳಿದ್ದರೂ ಮುಸ್ಲೀಮ್‌ರು ಮೊಂಡುತನದಿಂದ ನಾವು ನಂಬುವುದಿಲ್ಲ ಎಂದೂ, ದೇವರು ಅವತರಿಸುವುದಿಲ್ಲ ಎಂದು ಅನ್ನುತ್ತಿದ್ದಾರೆ. ಅಂತಹ ಸಮಯದಲ್ಲಿ ದೇವರು ಅವತರಿಸಿದಾಗ ಆತನು ಧರಿಸಿದ ಶರೀರದಲ್ಲಿ ಹೀಗೇ ಇರುತ್ತಾನೆಂದು ಹೇಳುವುದರಲ್ಲಿ ನಾವೇ ಮೊದಲು ಹೇಳಿದ್ದೇವೆ. ಹಾಗೆ ಹೇಳುವುದೂ ಸಹ ದೊಡ್ಡ ಸಾಹಸವೇ ಆದರೂ ನಮ್ಮ ಮಾತು ಎಂದಿಗೂ ಸತ್ಯವೇ ಆದ್ದರಿಂದ ನಾವು ಹಿಂತಿರುಗಿ ನೋಡದಂತೆ ಹೇಳಿದ್ದೇವೆ. ನಮ್ಮ ಮಾತು ಸತ್ಯ ಎನ್ನುವುದಕ್ಕೆ ಒಂದೇ ಒಂದು ಆಧಾರವಿದೆ.

ನನಗೆ ತಿಳಿದು ಪ್ರಥಮ ದೈವಗ್ರಂಥದಲ್ಲಿನ ಜ್ಞಾನವನ್ನು ಹೇಳಿದಾಗ, ಮಧ್ಯಮ ದೈವ ಗ್ರಂಥದಲ್ಲಿನ ಜ್ಞಾನವನ್ನು ಹೇಳಿದಾಗ, ದೇವರು ಮನುಷ್ಯನ ಹಾಗೆ ಇದ್ದು ಜ್ಞಾನವನ್ನು ಅಂದಿನ ಪ್ರಜೆಗಳಿಗೆ ಹೇಳುವುದು ನಡೆದಿದೆ. ಆಗ ಮೇಲ್ನೋಕ್ಕೆ ಹೇಳಿದವರು ಮನುಷ್ಯನ ಹಾಗೆ ಕಾಣಿಸಿದ್ದಾರಾಗಲೀ, ಅವರ ಶರೀರದ ಒಳಗೆ ಏನು ನಡೆಯುತ್ತಿರುವುದು, ಹೇಗಿರುವುದು ಹೊರಗಿನ ಪ್ರಜೆಗಳಿಗೆ ತಿಳಿದಿಲ್ಲ. ಆದರೇ ಆಗ ಅವರ ಶರೀರದಲ್ಲಿ ಹೇಗಿರುವುದೂ, ಏನು ನಡೆದಿರುವುದೂ ಪ್ರತ್ಯಕ್ಷವಾಗಿ ನಮಗೆ ತಿಳಿದಿದೆ. ಆದ್ದರಿಂದ ಪರಮಾತ್ಮ ಎರಡನೆಯ ಆತ್ಮವಾಗಿ ಬದಲಾಗಿ ಶರೀರವನ್ನು ನಡೆಸುವುದೇ ಅಲ್ಲದೆ, ಜೀವಿಯಾಗಿ ಇದ್ದೂ ಆ ಶರೀರದಲ್ಲಿನ ಕಷ್ಟಸುಖಗಳನ್ನು ಅನುಭವಿಸಿದ್ದಾನೆಂದು ಹೇಳುತ್ತಿದ್ದೇವೆ. ದೇವರು ಧರಿಸಿದ ಶರೀರದಲ್ಲಿ ದೇವರಾದ ಪರಮಾತ್ಮ ಹೊರತು ಉಳಿದ ಎರಡು ಆತ್ಮಗಳು ಇಲ್ಲವೆಂದೂ, ಒಬ್ಬ ಪರಮಾತ್ಮ ಮಾತ್ರವೇ ಆತ್ಮವಾಗಿದ್ದೂ, ಜೀವಾತ್ಮನಾಗಿ ನಟಿಸುತ್ತಾ ಕಾಲ ಕಳೆದಿದೆಯೆಂದು ಗಟ್ಟಿಯಾಗಿ ಹೇಳುತ್ತಿದ್ದೇವೆ. ಆ ಶರೀರದಲ್ಲಿ ಇರುವುದು ಪರಮಾತ್ಮನೇ ಎಂದು ಹೇಳುವ ನಮ್ಮ ಮಾತು

ಸತ್ಯವೆಂದು ಹೇಳುವುದಕ್ಕೆ, ನಮ್ಮ ಮಾತು ಭವಿಷ್ಯತ್ತಿನಲ್ಲಾಗಲೀ ವರ್ತ ಮಾನದಲ್ಲಾಗಲೀ ಅಸತ್ಯವಾಗದಂತಿರುವುದಕ್ಕೆ, ಭೂತಕಾಲದಲ್ಲಿ (ಕಳೆದುಹೋದ ಕಾಲದಲ್ಲಿ) ಸರಿಯಾದ ಸಾಕ್ಷಿಯನ್ನು ಆಧಾರವಾಗಿ ಇಟ್ಟಿದ್ದಾನೆ. ಅಂತಹ ಆಧಾರ ಏನೆಂದರೇ! ಪ್ರಥಮ ದೈವಗ್ರಂಥವಾದ ತೌರಾತು ಗ್ರಂಥವನ್ನು (ಭಗವದ್ಗೀತೆ ಗ್ರಂಥವನ್ನು) ಹೇಳಿದ ಕೃಷ್ಣನು ಸರ್ವ ಸಾಧಾರಣ ಮನುಷ್ಯನಾಗಿ, ತುಂಟಾಟ ಪೋಲಿಪುಂಡನಾಗಿ ತಿರುಗುವ ಮನುಷ್ಯನಂತೆ ಕಾಣಿಸಿದರೂ, ಆತನ ಶರೀರದಲ್ಲಿರುವುದು ಒಂದೇ ಒಂದು ಪರಮಾತ್ಮನೆಂದು ನಾವು ಗ್ರಹಿಸಿದ್ದೇವೆ. ಕೃಷ್ಣನ ಶರೀರದಲ್ಲಿರುವ ಪರಮಾತ್ಮ ಆತ್ಮನಾಗಿದ್ದೂ, ಆ ಶರೀರದಲ್ಲಿ ಎಲ್ಲ ಕಾರ್ಯಗಳಿಗೂ ಕರ್ತ ಆಗಿದೆ. ಕೆಲವು ಕೆಲಸಗಳಲ್ಲಿ ಕರ್ಮವನ್ನು ಅನುಭವಿಸುವ ಜೀವಾತ್ಮನಾಗಿಯೂ ಇದೆ. ಈ ಎರಡು ಕಾರ್ಯಗಳನ್ನು ದೇವರು ಸ್ವತಃವಾಗಿ ಮಾಡದಿದ್ದರೂ, ದೇವರು ದೇವರಾಗಿಯೇ ಇರುತ್ತಲೇ ಆತ್ಮವಾಗಿ ಬದಲಾಗಿ ಆತ್ಮ ಕಾರ್ಯಗಳನ್ನು, ಜೀವಿಯಾಗಿ ಬದಲಾಗಿ ಜೀವಿಯ ಕಾರ್ಯಗಳನ್ನು ಮಾಡಿದೆ. ಉಳಿದ ಎಲ್ಲಾ ಶರೀರಗಳಲ್ಲಿ ನಡೆಯುವಂತೇ ಜೀವಾತ್ಮ ಅಳುತ್ತಿರುವಾಗ, ಆತ್ಮ ಅಳಿಸುತ್ತಿದೆ. ಜೀವಾತ್ಮ ಕಾರ್ಯಗಳನ್ನು ಆಚರಿಸಿದಾಗ, ಆತ್ಮ ಆಚರಿಸುವಂತೆ ಮಾಡುತ್ತಿದೆ. ಇದು ಎಲ್ಲ ಶರೀರಗಳಲ್ಲಿ ಸರ್ವಸಾಧಾರಣವಾಗಿ ನಡೆಯುವುದೇ ಆದ್ದರಿಂದ ಈ ಕಾರ್ಯಗಳಿಂದ ಶರೀರವನ್ನು ಧರಿಸಿದ ಕೃಷ್ಣನು ದೇವರೆಂದು ಯಾರೂ ಗುರುತಿಸಲಾರರು. ಕೃಷ್ಣನು ಆತ್ಮವಾಗಿ ದೇವರ ಜ್ಞಾನವನ್ನು 90 ಸಂವತ್ಸರಗಳ ವಯಸ್ಸಿನಲ್ಲಿ ಯುದ್ಧರಂಗದಲ್ಲಿ ಹೇಳಿದರೂ, ಅದರಿಂದ ಕೃಷ್ಣನು ಇಂತಹ ದೇವರೆಂದು ಗುರುತು ಹಿಡಿಯುವುದಕ್ಕೆ ಆಗುವುದಿಲ್ಲ. ಕೃಷ್ಣನು ಮನುಷ್ಯನೇ, ಮನುಷ್ಯನ ಶರೀರ ಧರಿಸಿದವನೇಯಾಗುವುದರಿಂದ ಪ್ರಪಂಚ ಕೆಲಸಗಳು ಮಾಡಿದರೂ, ದೇವರ ಜ್ಞಾನವನ್ನು ಹೇಳಿದರೂ, ಆತನನ್ನು ದೇವರೆಂದು ಯಾರೂ ಗುರುತಿಸಲಾರದೆ ಹೋಗಿದ್ದಾರೆ.

ಸರ್ವಸೃಷ್ಟಿಯಲ್ಲಿ ದೇವರ ನಂತರ ದೇವರಂತಾದ್ದು ಪ್ರಕೃತಿಯೇ. ಪ್ರಕೃತಿ ದೇವರ ಅಧೀನದಲ್ಲಿದ್ದು ದೇವರನ್ನು ಅನುಸರಿಸಿ ನಡೆಯುತ್ತಿರುತ್ತದೆ.

ಪ್ರಕೃತಿ ದೇವರ ಮಾತನ್ನು ಹೊರತು ಯಾರ ಮಾತನ್ನು ಕೇಳುವುದಿಲ್ಲ. ಯಾರ ಮಾತನ್ನೂ ಲೆಕ್ಕ ಮಾಡುವುದಿಲ್ಲ. ದೇವರು ದೇವರಾಗಿಯೇ ಇದ್ದರೂ, ದೇವರು ಮನುಷ್ಯ ಶರೀರದಲ್ಲಿ ಆತ್ಮನಾಗಿ ನಟಿಸುತ್ತಿದ್ದರೂ ಪ್ರಕೃತಿ ದೇವರನ್ನು ಗುರುತಿಸಬಲ್ಲದು. **ದೇವರು ಮನುಷ್ಯನ ಶರೀರದಲ್ಲಿ ಇರುವಾಗ ನಾನು ಇಂತಹ ಸಮಯದಲ್ಲಿ, ಇಂತಹ ಶರೀರವನ್ನು ಧರಿಸಿ ಇದ್ದೇನೆಂದು ತಿಳಿಸುವ ಸಲುವಾಗಿ, ಎಲ್ಲರೂ ತಿಳಿಯುವ ಸಲುವಾಗಿ ದೇವರು ಮನುಷ್ಯ ಶರೀರದಲ್ಲಿಯೇ ಇದ್ದು ಪ್ರಕೃತಿಯನ್ನು ಶಾಸಿಸುವನು.** ಆಗ ಆ ಮಾತನ್ನು ಪ್ರಕೃತಿ ಕೇಳಿ, ಆ ಮಾತಿನ ಪ್ರಕಾರ ನಡೆದುಕೊಳ್ಳುತ್ತದೆ. ಹಾಗೆ ಯಾವಾಗ ನಡೆಯುತ್ತಿದೆಯೋ, ಯಾವ ಶರೀರದಿಂದ ನಡೆಯುತ್ತಿದೆಯೋ, ಆ ಶರೀರದಲ್ಲಿ ಪ್ರಕೃತಿಗೆ ಗಂಡನಾದ ದೇವರಿದ್ದಾನೆಂದು ಬುದ್ಧಿ ಇರುವವರು ಗ್ರಹಿಸಬಹುದು. ಹೆಂಡತಿ ಗಂಡನ ಮಾತು ಕೇಳುವುದು ಸಹಜವೇ ಆದ್ದರಿಂದ ತನ್ನ ಗಂಡ ಎಲ್ಲಿ, ಹೇಗಿದ್ದರೂ, ಯಾವ ಶರೀರದಲ್ಲಿದ್ದರೂ ಪ್ರಕೃತಿ ಗುರುತಿಸಿ ಆತನ ಮಾತು ಕೇಳುತ್ತದೆ. ದೇವರು ಮನುಷ್ಯ ಶರೀರದಲ್ಲಿ ಇದ್ದು ಜ್ಞಾನ ಹೇಳುತ್ತದೆನ್ನುವುದಕ್ಕೆ ತಾರ್ಕಾಣವಾಗಿ ಇಂತಹ ಸಂಘಟನೆಗಳು ಭೂಮಿ ಮೇಲೆ ನಡೆಯುತ್ತವೆ. ಆದ್ದರಿಂದ **ಕೃಷ್ಣನು ಧರಿಸಿದ ಶರೀರದಲ್ಲಿರುವ ಪರಮಾತ್ಮ (ದೇವರು) ಕುರುಕ್ಷೇತ್ರ ಯುದ್ಧರಂಗದಲ್ಲಿ ಮಧ್ಯಾಹ್ನ ಸಮಯವನ್ನು ಸಾಯಂಕಾಲದ ಸಮಯವನ್ನಾಗಿ ಬದಲಾಯಿಸಿದ್ದಾನೆ. ಸ್ವಲ್ಪ ಸಮಯ ಸಾಯಂಕಾಲವಾಗಿದ್ದನಂತರ ಪುನಃ ಮಧ್ಯಾಹ್ನವಾಗಿ ಬದಲಾಗುವಂತೆ ಪ್ರಕೃತಿಯನ್ನು ಶಾಸಿಸಿದಾಗ ಪ್ರಕೃತಿ ಹಾಗೇ ನಡೆದುಕೊಂಡಿದೆ. ಕುರುಕ್ಷೇತ್ರ ಯುದ್ಧರಂಗದಲ್ಲಿ ಸೈಂಧವ ಎಂಬಾತನನ್ನು ಸಾಯಿಸುವುದಕ್ಕೆ ಹಾಗೆಯೇ ಮಾಡಬೇಕಾಗಿ ಬಂದಿತು. 'ಸೈಂಧವ ವಧ' ಎಂಬ ಘಟ್ಟದಲ್ಲಿ ಕೃಷ್ಣನು ಪ್ರಕೃತಿಯನ್ನು ಶಾಸಿಸಿದ ವಿಷಯವಿದೆ.**

ಪ್ರಕೃತಿ ಒಬ್ಬ ಪರಮಾತ್ಮನ ಮಾತನ್ನು ಹೊರತು ಯಾರ ಮಾತನ್ನು ಕೇಳುವುದಿಲ್ಲ. **ಯಾವಾಗ ಎಲ್ಲಿ ಪ್ರಕೃತಿ ಮನುಷ್ಯನ ಮಾತನ್ನು ಕೇಳುತ್ತಿದೆಯೋ, ಆಗ ಅಲ್ಲಿ ಮನುಷ್ಯನ ಆಕಾರದಲ್ಲಿ ದೇವರಿದ್ದಾನೆಂದು ಗುರುತುಹಿಡಿಯಬಹುದು.**

**ಈ ಒಂದು ಆಧಾರ ಹೊರತು ದೇವರನ್ನು ಮನುಷ್ಯರು ಗುರುತುಹಿಡಿಯುವುದಕ್ಕೆ ಅವಕಾಶವೇ ಇಲ್ಲ.** ಕೃಷ್ಣನು ಮನುಷ್ಯನಾಗಿದ್ದ ಭಗವಂತನಾದರೂ, ಆತನು ತನ್ನ ಶರೀರದಿಂದ 90 ಸಂವತ್ಸರಗಳ ವಯಸ್ಸಿನಲ್ಲಿ ಪ್ರಕೃತಿಯನ್ನು ಶಾಸಿಸಿದ್ದಾನೆ. ಅಂದರೇ ಕೃಷ್ಣನು ಯಾರಾಗಿರುವುದೂ ಕೃಷ್ಣನ ವಯಸ್ಸು 90 ಸಂವತ್ಸರಗಳು ಕಳೆಯುವವರೆಗು ಯಾರೂ ಗುರುತಿಸುವುದಕ್ಕೆ ಅವಕಾಶವಿಲ್ಲ. 90 ಸಂವತ್ಸರಗಳ ವಯಸ್ಸಿನಲ್ಲಿ ಕೃಷ್ಣನು ಧರಿಸಿದ ಶರೀರದಿಂದ ದೇವರು ಪ್ರಕೃತಿಯನ್ನು ಶಾಶಿಸಿದಾಗ, ಪ್ರಕೃತಿ ಮನುಷ್ಯನಾಗಿದ್ದ ದೇವರ ಮಾತು ಕೇಳಿದೆ. ಪ್ರಕೃತಿ ಒಬ್ಬ ದೇವರ ಮಾತು ಮಾತ್ರವೇ ಕೇಳುತ್ತದೆ. ಪ್ರಕೃತಿಯನ್ನು ದೇವರು ಹೊರತು ಯಾರೂ ಶಾಶಿಸಲಾರರು. ಆದ್ದರಿಂದ **ಯಾವ ಮನುಷ್ಯ ಪ್ರಕೃತಿಯನ್ನು ಶಾಶಿಸಿದ್ದಾನೋ ಆ ಮನುಷ್ಯನನ್ನು ದೇವರಾಗಿ ಗುರುತಿಸಬಹುದು.** ಆ ಮನುಷ್ಯನಿಂದಲೇ ದೇವರ ಜ್ಞಾನ ಹೇಳಲಾಗುತ್ತದೆ. ಆ ಮನುಷ್ಯನನ್ನೇ ದೇವರ ಅವತಾರವೆಂದು ಹೇಳಬಹುದು. ದೇವರು ಆ ಮನುಷ್ಯನಾಗಿ ಅವತರಿಸಿದ್ದಾನೆಂದು ಹೇಳಬಹುದು. ಕೃಷ್ಣನಾಗಿ ಬಂದಿರುವ ಮನುಷ್ಯನಲ್ಲಿರುವ ದೇವರು ತನ್ನ ಜ್ಞಾನವನ್ನು ಭಗವದ್ಗೀತೆ ರೂಪದಲ್ಲಿ ಹೇಳಿದ್ದಾನೆ. ಸೃಷ್ಟಿ ಆದಿಯಲ್ಲಿ ಈ ಜ್ಞಾನವನ್ನೇ ಸೂರ್ಯನಿಗೆ ಹೇಳಿದ್ದೇನೆಂದು ಹೇಳಿದ್ದಾನೆ. ಇಷ್ಟು ಆಧಾರಗಳನ್ನು ನೋಡಿದ ನಂತರ ಮನುಷ್ಯ ಶರೀರದಲ್ಲಿ ದೇವರು ಬರುತ್ತಾನೆನ್ನುವ ಸತ್ಯ ತಿಳಿದಿದೆ. ಅಷ್ಟೇ ಅಲ್ಲದೆ ಮನುಷ್ಯ ಶರೀರದಲ್ಲಿ ಪರಮಾತ್ಮ ಪರಮಾತ್ಮನಾಗಿ ಅಲ್ಲದೆ, ಆತ್ಮನಾಗಿದ್ದೂ ಶರೀರ ಯಂತ್ರಾಂಗವನ್ನು ಯಾರೂ ಗುರುತಿಸದಂತೆ ನಡೆಸುತ್ತಿದ್ದರೂ, ಯಾವುದೋ ಒಂದು ವಯಸ್ಸಿನಲ್ಲಿ ತಾನು ಶರೀರವನ್ನು ಧರಿಸಿ ಮನುಷ್ಯನಾಗಿ ಬಂದಿದ್ದೇನೆಂದು ತಿಳಿಸುವ ಸೂಚನೆಯನ್ನು ತೋರಿಸಿ ಹೋಗುವನು. ಹೀಗೆ ಪ್ರಕೃತಿಯನ್ನು ಶಾಶಿಸಿದ ವಿಷಯವನ್ನು ಆಗ ನೋಡಿಯಾಗಲೀ, ನಂತರ ತಿಳಿದಾಗಲೀ ಈತನು ಸಾಧಾರಣ ಮನುಷ್ಯನಲ್ಲವೆಂದು, ಭಗವಂತನಾಗಿ ಬಂದಿರುವ ದೇವರೆಂದು ಗ್ರಹಿಸಲಾರದವನು ಬುದ್ಧಿಹೀನನೆಂದು ಹೇಳಬಹುದು.

ಅಂತಿಮ ದೈವಗ್ರಂಥವಾದ ಖುರ್‌ಆನ್‌ನಲ್ಲಿ ಸೂರಾ 6, ಆಯತ್ 91 **(6-91)**ರಲ್ಲಿ **"ಯಾವ ಮನುಷ್ಯನ ಮೇಲೆ ದೈವ ಸಂದೇಶವನ್ನು ಅವತರಿಸುವಂತೆ**

**ಮಾಡಲಿಲ್ಲ"** ಎಂದು ಹೇಳಲಾಗಿದೆ. ಒಂದು ವೇಳೆ ಎಲ್ಲಾದರೂ ದೈವ ಸಂದೇಶ ಮನುಷ್ಯನಿಂದ ತಿಳಿದರೇ ಆ ಮನುಷ್ಯನು ಸಾಧಾರಣ ಮನುಷ್ಯನಲ್ಲವೆಂದು, ಸಾಧಾರಣ ಮನುಷ್ಯನಾದರೇ ಆತನಿಂದ ದೈವಜ್ಞಾನ ಬರುತ್ತಿರಲಿಲ್ಲವೆಂದು ತಿಳಿಯಬಹುದು. ಆದ್ದರಿಂದ ಪ್ರಥಮ ದೈವ (ತೌರಾತು) ಗ್ರಂಥವನ್ನು ಹೇಳಿದ ಮನುಷ್ಯ ಸಾಧಾರಣ ಮನುಷ್ಯನಲ್ಲ. ಅಸಾಧಾರಣ ಮನುಷ್ಯನಾದ ಭಗವಂತನೆಂದು ಹೇಳಬಹುದು. ಇದರ ಪ್ರಕಾರ ಮಧ್ಯ ದೈವ ಗ್ರಂಥವಾದ ಇಂಜೀಲು (ಬೈಬಿಲ್) ಗ್ರಂಥವನ್ನು ಹೇಳಿದ ಮನುಷ್ಯನೂ ಕೂಡಾ ಸಾಧಾರಣ ಮನುಷ್ಯನಲ್ಲ, ಆತನೂ ಸಹ ದೇವರ ಅಂಶದಿಂದ ಬಂದಿರುವವನೆಂದು ಹೇಳಬಹುದು. ಕೃಷ್ಣನ ಜೀವನದಲ್ಲಿ 90 ಸಂವತ್ಸರಗಳಿಗೆ ಪ್ರಕೃತಿಯನ್ನು ಶಾಶಿಸುವುದು ನಡೆದಿದೆ. ಆದ್ದರಿಂದ ಹೊರಗೆ ಕಾಣಿಸುವ ಆಧಾರದಿಂದ ಕೃಷ್ಣನು ದೇವರ ಅವತಾರವೆಂದು ಹೇಳುವುದಕ್ಕೆ ಅವಕಾಶವಿದೆ. ಆದರೇ ಮಧ್ಯ ದೈವಗ್ರಂಥವಾದ ಬೈಬಲ್‌ನ್ನು ಹೇಳಿದವನೂ ಮನುಷ್ಯನೇ. ಆದರೇ ಅತನು ದೇವರೆನ್ನುವುದಕ್ಕೆ ಯಾವುದಾದರೂ ಪ್ರತ್ಯಕ್ಷ ಆಧಾರವಿದೆಯಾ! ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಹತ್ತಿರದಿಂದ ಸಮಾಧಾನ ಈ ರೀತಿಯಾಗಿ ಇದೆ. ಪ್ರತ್ಯಕ್ಷ ಪ್ರಮಾಣವೆಂದರೆ ಪ್ರಕೃತಿಯನ್ನು ಶಾಶಿಸಿದಾಗಲೇ ಅದು ಪ್ರತ್ಯಕ್ಷ ಆಧಾರವಾಗಿ ನಿಲ್ಲುತ್ತದೆ. ಏಸು ಜೀವನದಲ್ಲಿಯೂ ಪ್ರಕೃತಿಯನ್ನು ಶಾಶಿಸಿದ ಸಂಘಟನೆ ಒಂದು ನಡೆದಿದೆ. ಆದ್ದರಿಂದ ಕೃಷ್ಣನು ಹುಟ್ಟಿದ ಮೂರು ಸಾವಿರ (3000) ಸಂವತ್ಸರಗಳಿಗೆ ಪುನಃ ದೇವರು ಮನುಷ್ಯ ಅವತಾರದಲ್ಲಿ ಬಂದಿದ್ದಾನೆಂದು ಹೇಳಬಹುದು. ಏಸುಗೆ ಸುಮಾರು ವಯಸ್ಸು 32 ಸಂವತ್ಸರಗಳಿರುವಾಗ ಒಂದು ದಿನ ಆತನು, ಆತನ ಶಿಷ್ಯರು ಸೇರಿ ಸಮುದ್ರದಲ್ಲಿ ಪ್ರಯಾಣ ಮಾಡುವಾಗ, ಭಯಂಕರವಾದ ತುಫಾನು ಬಂದು ಅವರ ಹಡುಗನ್ನು ಮುಳಗಿಸುವ ಪರಿಸ್ಥಿತಿ ಏರ್ಪಟ್ಟಾಗ, ಹಡಗಿನಲ್ಲಿರುವ ಏಸು ಶಿಷ್ಯರೆಲ್ಲರೂ ತಮಗೆ ಸಾವು ತಪ್ಪುವುದಿಲ್ಲವೆಂದು ಭಯಪಟ್ಟಿದ್ದಾರೆ. ಆ ಸಮಯದಲ್ಲಿ ಏಸು ಹಡುಗಿನಲ್ಲಿನ ಗೂಡಿನಲ್ಲಿ ನಿದ್ರಿಸುತ್ತಿದ್ದನು. ಆತನ ಶಿಷ್ಯರು ಭಯಪಟ್ಟು ಅವರ ಗುರುವಾದ ಏಸನ್ನು ಎಬ್ಬಿಸಿದ್ದಾರೆ.

ಹಡಗಿನಲ್ಲಿ ನಿದ್ರಿಸುತ್ತಿರುವ ಏಸು ಎದ್ದು ನೋಡಿದಾಗ, ಭಯಂಕರವಾದ ತುಫಾನು ತಮ್ಮನ್ನು ಸುತ್ತುವರೆದಿದೆಯೆಂದು ತಿಳಿದಿದೆ. ಈ ವಿಷಯ ಬೈಬಿಲ್ ಗ್ರಂಥದಲ್ಲಿನ **ಮತ್ತಯಿ ಸುವಾರ್ತೆಯಲ್ಲಿ 8ನೇ ಅಧ್ಯಾಯದಲ್ಲಿ 23ನೇ ವಚನದಿಂದ 27ನೇ ವಚನದವರೆಗು ಹೀಗೆ ಇದೆ. 23) ಆತನು ದೋಣಿ ಏರಿದಾಗ ಆತನ ಶಿಷ್ಯರು ಆತನ ಹಿಂದೆ ಹೋದರು. 24) ಅಷ್ಟರಲ್ಲಿ ಸಮುದ್ರದ ಮೇಲೆ ತುಫಾನು ಎದ್ದಿರುವುದರಿಂದ ಆ ದೋಣಿ ಅಲೆಗಳಿಂದ ಮುಚ್ಚಲ್ಪಟ್ಟಿತು. ಆಗ ಆತನು ನಿದ್ರಿಸುತ್ತಿರುವಾಗ! 25) ಅವರು ಆತನ ಹತ್ತಿರಕ್ಕೆ ಬಂದು ಪ್ರಭುವಾ! ನಶಿಸಿಹೋಗುತ್ತಿದ್ದೇವೆ ನಮ್ಮನ್ನು ರಕ್ಷಿಸೆಂದು ಆತನನ್ನು ಎಬ್ಬಿಸಿದರು. (26) ಅದಕ್ಕೆ ಆತನು ಅಲ್ಪವಿಶ್ವಾಸಿಗಳೇ! ಏಕೆ ಭಯಪಡುತ್ತಿದ್ದೀರೆಂದು ಅವರೊಂದಿಗೆ ಹೇಳಿ, ಎದ್ದು ಗಾಳಿಯನ್ನು, ಸಮುದ್ರವನ್ನು ಗದರಿಸಿದಾಗ ಬಹಳ ನಿಮ್ಮಳ ವಾಯಿತು. (27) ಆ ಮನುಷ್ಯರು ಆಶ್ಚರ್ಯಪಟ್ಟು, ಈತನು ಎಂತಹವನೋ! ಈತನಿಗೆ ಗಾಳಿಯು, ಸಮುದ್ರವೂ ಒಳಗಾಗುತ್ತಿವೆಯೆಂದು ಹೇಳಿಕೊಂಡರು. ಇದೇ ವಿಷಯ ಲೂಕಾ ಸುವಾರ್ತೆ 8ನೇ ಅಧ್ಯಾಯದಲ್ಲಿ 22ನೇ ವಚನದಿಂದ 25ನೇ ವಚನದ ವರೆಗು ಹೀಗೆ ಇದೆ ನೋಡಿರಿ. (22) ಮತ್ತೊಂದು ದಿನ ಆತನು ತನ್ನ ಶಿಷ್ಯರೊಂದಿಗೆ ಒಂದು ದೋಣಿಯನ್ನು ಏರಿ ಸರಸ್ಸು ಹತ್ತಿರಕ್ಕೆ ಹೋಗುವೆವೆಂದು ಅವರಿಗೆ ಹೇಳಿದಾಗ, ಅವರು ಆ ದೋಣಿಯನ್ನು ತಳ್ಳಿ ಹೊರಟು ಹೋದರು. (23) ಅವರು ಹೋಗುತ್ತಿರುವಾಗ ಆತನು ನಿದ್ರಿಸಿದನು. ಅಷ್ಟರಲ್ಲಿ ಗಾಳಿ ಮಳೆ ಸರಸ್ಸಿನ ಮೇಲೆಗೆ ಬಂದು ದೋಣಿ ನೀರಿನೊಂದಿಗೆ ತುಂಬಿರುವುದರಿಂದ ಅವರು ಅಪಾಯಕರವಾದ ಸ್ಥಿತಿಯಲ್ಲಿ ಇದ್ದರು. (24) ಆದ್ದರಿಂದ ಆತನ ಹತ್ತಿರಕ್ಕೆ ಬಂದು ಪ್ರಭುವಾ! ಪ್ರಭುವಾ! ನಶಿಸಿಹೋಗುತ್ತಿದ್ದೇವೆಂದು ಹೇಳಿ ಆತನನ್ನು ಎಬ್ಬಿಸಿದರು. ಆತನು ಎದ್ದು ಗಾಳಿಯನ್ನು, ನೀರಿನ ಅಲೆಗಳನ್ನು ಗದರಿಸಿದ ಕೂಡಲೇ ಅವು ಅಣಗಿ ನಿಮ್ಮಳವಾದವು. (25) ಆಗ ಆತನು ನಿಮ್ಮ ವಿಶ್ವಾಸ ಎಲ್ಲಿ? ಎಂದು ಅವರೊಂದಿಗೆ ಹೇಳಿದನು. ಆದರೇ ಅವರು ಭಯಪಟ್ಟು! ಈತನು ಗಾಳಿಯನ್ನು, ನೀರನ್ನು ಆಜ್ಞಾಪಿಸಿದಾಗ ಅವು ಒಳಗಾಗುತ್ತವೆ! ಈತನು ಯಾರೋ ಎಂದು ಒಬ್ಬರೊಂದಿಗೆ ಒಬ್ಬರು ಹೇಳಿಕೊಂಡು ಆಶ್ಚರ್ಯಪಟ್ಟರು.**

ಇಲ್ಲಿ ಪ್ರಕೃತಿಯಲ್ಲಿನ ಭಾಗವಾದ ಗಾಳಿಯನ್ನು, ನೀರನ್ನು ಏಸು ಅಣಗಿಹೋಗೆಂದು ಗದರಿಸಿದಾಗ ಪ್ರಕೃತಿಯಲ್ಲಿನ ಆ ಎರಡು ಒಂದುಬಾರಿ ಅಣಗಿ ಹೋಗುವುದು ನಡೆದಿದೆ. ಆದಿನ ಆತನ ಶಿಷ್ಯರು ಅದನ್ನು ನೋಡಿ ಆಶ್ಚರ್ಯಪಟ್ಟು ಈತನ ಮಾತಿಗೆ ಪ್ರಕೃತಿ ಶರಣಾಗುತ್ತಿದೆ. ಈತನು ಯಾರಾಗಿರಬಹುದೆಂದು ಅಂದುಕೊಂಡಿದ್ದಾರಾಗಲೀ, ಆತನು ದೇವರ ಅವತಾರವೆಂದು ಆಗ ಅವರು ಗುರುತಿಸಲಾರದೆ ಹೋಗಿದ್ದಾರೆ. ಹತ್ತಿರದಲ್ಲಿರುವ ಅವರು ಗುರುತಿಸಲಾರದೆ ಹೋದರೂ, ಪ್ರಕೃತಿಯನ್ನು ಶಾಸಿಸುವ ಶಕ್ತಿ ಒಬ್ಬ ದೇವರಿಗೆ ಹೊರತು ಯಾರಿಗೂ ಇರುವುದಿಲ್ಲವೆಂಬ ಸೂತ್ರದಿಂದ, ಏಸು ದೇವರ ಅವತಾರವೇ ಎಂದು ನಾನು ಹೇಳುತ್ತಿದ್ದೇನೆ. ಮಹಾಭಾರತದಲ್ಲಿ ಸೈಂಧವನ ವಧ ನಡೆದಾಗ ಆಕಾಶದಲ್ಲಿ ಸೂರ್ಯನನ್ನು ಇಲ್ಲದಂತೆ ಮಾಡಿ ಕತ್ತಲಾಗಿ ಬದಲಾಯಿಸಿದ ಕೃಷ್ಣನು ಸಹ ದೇವರ ಅವತಾರವೇಯೆಂದು ಗಟ್ಟಿಯಾಗಿ ಹೇಳುತ್ತಿದ್ದೇವೆ. ಅವರು ಮನುಷ್ಯರೇ ಆದರೂ ಅವರ ಶರೀರದಲ್ಲಿ ಇರುವುದು ದೇವರೇ ಆಗಿರುವುದರಿಂದ, ಎಲ್ಲರಹಾಗೆ ಜೀವಿಯು, ಆತ್ಮ ಇಲ್ಲದಿರುವುದರಿಂದ ಅವರು ಮಾನವ ಮಾತ್ರರಲ್ಲವೆಂದು ಹೇಳಿಕೊಂಡಿದ್ದೇವೆ. ಯಾರು ನಂಬಿದರೂ, ಯಾರು ನಂಬದೇ ಹೋದರೂ ದೇವರ ಜ್ಞಾನ ಮನುಷ್ಯರ ಮೇಲೆ ಪ್ರಭಾವ ಬೀರುವುದಿಲ್ಲ. ದೇವರ ಜ್ಞಾನವನ್ನು ದೇವರೇ ಹೇಳಬೇಕಾಗಿದೆ. ಆದ್ದರಿಂದ ದೇವರು ಮನುಷ್ಯರಿಗೆ ಜ್ಞಾನವನ್ನು ಹೇಳುವುದಕ್ಕೆ ಮನುಷ್ಯನ ಹಾಗೆ ಬರಬೇಕಾಗಿದೆ. ಮನುಷ್ಯನಾಗಿ ಬಂದವನು ಮನುಷ್ಯರು ಮಾತನಾಡುವ ಭಾಷೆಯಲ್ಲೇ ಜ್ಞಾನವನ್ನು ಹೇಳಬೇಕಾಗಿದೆ. ಆದ್ದರಿಂದ ಐದುಸಾವಿರ ಸಂವತ್ಸರಗಳ ಪೂರ್ವ ಭಾರತದೇಶ ದಲ್ಲಿ ಕೃಷ್ಣನ ರೂಪದಲ್ಲಿ ಬಂದಿರುವ ದೇವರು ಅಲ್ಲಿನ ಹಿಂದೀ ಭಾಷೆಯಲ್ಲೇ ಪ್ರಥಮ ದೈವಗ್ರಂಥವನ್ನು ಹೇಳಿದ್ದಾನೆ. ನಂತರ ಕಾಲದಲ್ಲಿ ಮೂರು ಸಾವಿರ ಸಂವತ್ಸರಗಳಿಗೆ ಇಜ್ರಾಯೆಲ್ ದೇಶದಲ್ಲಿ ಮನುಷ್ಯ ರೂಪದಲ್ಲಿ ಬಂದಿರುವ ಏಸು ಅಲ್ಲಿ ಭಾಷೆಯಾದ ಹೆಬ್ರೀ ಭಾಷೆಯಲ್ಲೇ ಜ್ಞಾನವನ್ನು ಹೇಳಿಹೋಗಿದ್ದಾನೆ. ಈ ರೀತಿ ಎರಡು ಬಾರಿ ಮನುಷ್ಯ ಅವತಾರದಲ್ಲಿ ಬಂದಿರುವ ದೇವರನ್ನು ಆಗ ಗುರುತಿಸಲಾರದೆ ಹೋಗುವುದಲ್ಲದೆ ಅಜ್ಞಾನದಿಂದ ಇಂದಿಗೂ ಸಹ ಬಂದಿರುವ ಅವರು ದೇವರ ಅವತಾರವೆಂದು ನಂಬಲಾರದೆ ಹೋಗುತ್ತಿದ್ದೇವೆ.

ಪ್ರಥಮ ದೈವ ಗ್ರಂಥ ಬಂದ ನಂತರ ಮೂರು ಸಾವಿರ ಆರು ನೂರು ಸಂವತ್ಸರಗಳಿಗೆ ಅಂತಿಮ ದೈವಗ್ರಂಥ ಬಂದಿದೆ. ಆದರೇ ಈ ಬಾರಿ ದೈವಜ್ಞಾನವನ್ನು ಒಬ್ಬ ಮನುಷ್ಯ ಹೇಳದೆ, ಖಗೋಳದಿಂದ ಇಳಿದುಬಂದ ಮಹಾಜ್ಞಾನಿಯಾದ ಜಿಬ್ರಯೇಲ್ ಎಂಬ ದೇವರ ಪಾಲಕನು ಹೇಳಿದ್ದಾನೆ. ದೇವರ ಪಾಲನೆಯಲ್ಲಿ ಇದ್ದು ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿದಿರುವ ಜಿಬ್ರಯೇಲ್ ತನಗೆ ತಿಳಿದ ದೈವಜ್ಞಾನವನ್ನು ಭೂಮಿಮೇಲಿರುವ ಮಹಮ್ಮದ್ ಪ್ರವಕ್ತರವರಿಗೆ ಆಗ ಸ್ವಲ್ಪ, ಆಗ ಸ್ವಲ್ಪ ತಿಳಿಸುವುದು ನಡೆದಿದೆ. ಆ ವಿಧವಾಗಿ ಆ ಪ್ರಾಂತ ಭಾಷೆಯಾದ ಅರಬ್ಬೀ ಭಾಷೆಯಲ್ಲಿಯೇ ಅಂತಿಮ ದೈವಗ್ರಂಥದಲ್ಲಿನ ಜ್ಞಾನವೆಲ್ಲವನ್ನೂ ಕೇಳುವುದು ನಡೆದಿದೆ. ಜಿಬ್ರಯೇಲ್ ಮಹಮ್ಮದ್ ಪ್ರವಕ್ತರವರಿಗೆ ಒಟ್ಟು 23 ಸಂವತ್ಸರಗಳು ಜ್ಞಾನವನ್ನು ಹೇಳುವುದು ನಡೆದಿದೆ. ಆದರೇ ಇಲ್ಲಿ ಜ್ಞಾನವನ್ನು ಹೇಳಿದ ಜಿಬ್ರಯೇಲ್ ಮನುಷ್ಯನೇ ಅಲ್ಲ. ಆತನು ಆಕಾಶದಲ್ಲಿ ಸೃಷ್ಟ್ಯಾದಿಯಿಂದ ಇರುವ ಒಂದು ದೊಡ್ಡ ಗ್ರಹಶಕ್ತಿ. ಜಿಬ್ರಯೇಲ್ ಹೇಳಿದಾಗ ಕೇಳಿದ ಪ್ರವಕ್ತರವರು ಮನುಷ್ಯನೇ ಆದರೂ, ಆತನು ಎಲ್ಲರ ಹಾಗೆ ಸಾಧಾರಣ ಮನುಷ್ಯನೇ ಆದರೇ ದೇವರ ಅವತಾರ ಮಾತ್ರ ಅಲ್ಲ. ಆತನಲ್ಲಿ ಯಾವ ಪ್ರತ್ಯೇಕತೆಯೂ ಇಲ್ಲ. ಮುಹಮ್ಮದ್ ಪ್ರವಕ್ತರವರು ಕೇಳಿದ ಜ್ಞಾನವನ್ನು ಆತನ ಅನುಚರರಿಗೆ ಹೇಳಿದಾಗ ಅವರು ಆ ವಿಷಯಗಳನ್ನು ಗ್ರಂಥವಾಗಿ ಬರೆದಿದ್ದಾರೆ.

ಅಂತಿಮ ದೈವಗ್ರಂಥವನ್ನು ಹೇಳಿರುವುದು ಜಿಬ್ರಯೇಲ್ ಆದರೆ, ಕೇಳಿರುವುದು ಮುಹಮ್ಮದ್ ಪ್ರವಕ್ತರವರಾದರೆ, ಮುಹಮ್ಮದ್ ಪ್ರವಕ್ತರವರು ಹೇಳಿದಾಗ ಕೇಳಿದವರು ಅದನ್ನು ಗ್ರಂಥವಾಗಿ ಬರೆದಿದ್ದಾರೆ. ಈ ರೀತಿ ಅಂತಿಮ ದೈವಗ್ರಂಥ ತಯಾರಾಗುವುದರಿಂದ ಅದರಲ್ಲಿ ದೇವರ ಅವತಾರ ಎನ್ನುವುದು ಇಲ್ಲವೇ ಇಲ್ಲ. ಆಕಾಶದಲ್ಲಿದ್ದ ದೇವರ ಪಾಲಕರಲ್ಲಿ ಒಬ್ಬರಾದ ಸೂರ್ಯನು ಭೂಮಿ ಮೇಲೆ ಮನುವು ಎಂಬ ವ್ಯಕ್ತಿಗೆ ದೈವಜ್ಞಾನವನ್ನು ಹೇಳಿದಹಾಗೆ, ಆಕಾಶದಲ್ಲಿನ ಜಿಬ್ರಯೇಲ್ ಎಂಬ ಗ್ರಹಶಕ್ತಿ ಭೂಮಿ ಮೇಲೆ ಪ್ರವಕ್ತರವರಿಗೆ ದೈವ ಜ್ಞಾನವನ್ನು ಹೇಳಿದೆ. ಈ ರೀತಿ ದೇವರು ತಾನು ಸ್ವತಃವಾಗಿ, ನೇರವಾಗಿ ಯಾರೊಂದಿಗೂ ಮಾತನಾಡದೇ ಎರಡು ಬಾರಿ ತಾನು ಶರೀರವನ್ನು ಧರಿಸಿ

ಆತ್ಮನಾಗಿದ್ದು ಜ್ಞಾನವನ್ನು ಹೇಳಿ ಗ್ರಂಥರೂಪವಾಗುವಂತೆ ಮಾಡಿದ್ದಾನೆ. ಮೂರನೆಯದಾದ ಅಂತಿಮ ದೈವ ಗ್ರಂಥವನ್ನು ಕಾಣಿಸದ ತನ್ನ ಸೇವಕನಾದ ಗ್ರಹಶಕ್ತಿಯಾದ ಜಿಬ್ರಯೇಲ್‌ನಿಂದ ಹೇಳಿಸಿದ್ದಾನೆ. ಈ ರೀತಿ ಮೂರು ದೈವಗ್ರಂಥಗಳು ಭೂಮಿಮೇಲೆಗೆ ಬಂದಿವೆ. ಅದರಿಂದ ಅಂತಿಮ ದೈವ ಗ್ರಂಥದಲ್ಲಿ 42ನೇ ಸೂರಾ, 51ನೇ ಆಯತ್‌ನಲ್ಲಿ ಹೇಳಿದ ವಿಧವಾಗಿ ಒಂದು ವಾಣಿಯಿಂದ, ಎರಡು ತನ್ನ ದೂತನಿಂದ, ಮೂರು ಕಾಣಿಸದೆ ತೆರೆಮರೆಯಲ್ಲಿರುವ ಗ್ರಹದಿಂದ ತನ್ನ ಜ್ಞಾನವನ್ನು ಭೂಮಿ ಮೇಲೆ ಮನುಷ್ಯರಿಗೆ ತಿಳಿಸುವುದು ನಡೆದಿದೆ. ತನ್ನ ದೂತನಿಂದ ಎಂದು ಹೇಳಿದ ಮಾತಿನಲ್ಲಿ ತಾನೇ ದೂತನಾಗಿ, ವಾರ್ತೆಯನ್ನು ತೆಗೆದುಕೊಂಡುಬರುವವನಾಗಿ ನಟಿಸಿ ಶರೀರವನ್ನು ಧರಿಸಿ ಹೇಳುವುದು ನಡೆದಿದೆ. ದೇವರು ಮೂರು ಪದ್ಧತಿಗಳಿಂದ ತನ್ನ ಜ್ಞಾನವನ್ನು ಭೂಮಿ ಮೇಲೆ ಸಮಸ್ತ ಮಾನವರಿಗೂ ಅನ್ವಯಿಸುವಂತೆ ತಿಳಿಸಿದ್ದಾನೆ. ದೇವರು ಮೊದಲು ಸೃಷ್ಠಿಆದಿಯಲ್ಲಿ ಆಕಾಶವಾಣಿಯಿಂದ ಜ್ಞಾನವನ್ನು ತಿಳಿಸಿದ್ದಾನೆ. ಹಾಗೆ ತಿಳಿಸಿದಾಗ ತನ್ನ ಪ್ರಕೃತಿಯಲ್ಲಿನ ಒಂದು ಭಾಗವಾದ ಆಕಾಶವನ್ನು ವಿನಿಯೋಗಿಸಿಕೊಂಡು ಆಕಾಶದಿಂದ ಜ್ಞಾನವನ್ನು ತಿಳಿಸಿದ್ದಾನೆ. ಈ ರೀತಿ ಸೃಷ್ಟ್ಯಾದಿಯಲ್ಲಿ ಆಕಾಶದಿಂದ ಸೂರ್ಯನಿಗೆ ಹೇಳಿದಾಗ ದೇವರು ತಾನು ಸ್ವತಃವಾಗಿ ಶರೀರವನ್ನು ಧರಿಸಿ ಅವತರಿಸಲಿಲ್ಲ. ಅಂತಿಮ ದೈವಗ್ರಂಥದಲ್ಲಿ 42ನೇ ಸೂರಾ, 51ನೇ ಆಯತ್‌ನಲ್ಲಿ ಹೇಳಿದ ಪ್ರಕಾರ **"ವಹೀ"** ಯಿಂದ ತಿಳಿಸುವುದು ನೆರವೇರಿದೆ.

ಈ ವಿಷಯುವನ್ನು ಪೂರ್ತಿ ವಿವರವಾಗಿ ವಿವರಿಸಿಕೊಂಡು ತಿಳಿದುಕೊಂಡರೇ ಈ ರೀತಿ ತಿಳಿಯಬಲ್ಲದು. ವಹೀ ಎಂದರೆ ಆಕಾಶದಲ್ಲಿ ಹುಟ್ಟಿದ ಶಬ್ಧ ಎಂದು ಅರ್ಥ. ಆ ಶಬ್ಧ ಆಕಾಶದಲ್ಲಿ ಹೇಗೆ ಹುಟ್ಟಿದೆಯೆಂದು ಪ್ರಶ್ನಿಸಿಕೊಂಡು ನೋಡಿದರೆ ಹೀಗೆ ಹೇಳಬಹುದು. ಪ್ರಕೃತಿ ಎನ್ನುವುದು ಐದು ಮಹಾಭೂತಗಳಿಂದ ಏರ್ಪಟ್ಟಿದೆ. ಭೂತ ಎಂದರೆ ಜೀವಶಕ್ತಿ ಇರುವುದು ಅಥವಾ ಜೀವಿಸಿ ಇರುವುದೆಂದು ಅರ್ಥ. ಭೂತ ಎಂದರೆ ಯಾವುದೋ ದೆವ್ವವೆಂದೋ, ಪಿಶಾಚಿಯೆಂದೋ ಅರ್ಥ ಮಾಡಿಕೊಳ್ಳಬಾರದು. ಮಹಾಭೂತ ಎಂದರೆ ದೊಡ್ಡ ಶಕ್ತಿಯಿಂದ ಜೀವಿಸುವುದೆಂಬ ಭಾವ. ಆಕಾಶ ಒಂದು ಭೂತ

ಆಗುವುದರಿಂದ ಆಕಾಶ ಪ್ರಪಂಚದಲ್ಲಿ ಎಷ್ಟೋ ಕಾರ್ಯಗಳನ್ನು ಮಾಡಬೇಕಾಗಿರುತ್ತದೆ. ಕಾರ್ಯಗಳು ನಡೆಯಬೇಕೆಂದರೇ ಆಕಾಶದಲ್ಲಿ ಕಾರ್ಯಗಳನ್ನು ಮಾಡಿಸುವ ಆತ್ಮವೂ ಸಹ ಇರಬೇಕು. ಜೀವವಿರುವ ಪ್ರತಿಯೊಂದನ್ನು ಭೂತ ಎನ್ನುತ್ತಿದ್ದೇವೆ. ಆ ಲೆಕ್ಕದ ಪ್ರಕಾರ ಮನುಷ್ಯರೆಲ್ಲರೂ ಭೂತಗಳೇ. ಒಬ್ಬ ಮನುಷ್ಯನಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಯಾವ ರೀತಿಯಲ್ಲಿ ಮೂವರಿದ್ದಾರೋ ಅದೇ ರೀತಿ ಮಹಾ ಭೂತವಾದ ಆಕಾಶದಲ್ಲಿಯೂ ಸಹ ಮೂರು ಆತ್ಮಗಳೇ ಇರುತ್ತವೆ. ಮನುಷ್ಯನಲ್ಲಿರುವ ಜೀವಾತ್ಮ ಕರ್ಮವಿದ್ದು ಕಷ್ಟ ಸುಖಗಳನ್ನು ಹೆಚ್ಚಾಗಿ ಅನುಭವಿಸುತ್ತಿರುತ್ತಾನೆ. ಅದರೇ ಮಹಾ ಭೂತಗಳಲ್ಲಿದ್ದ ಜೀವಾತ್ಮ ಕರ್ಮ ಇಲ್ಲದ್ದಾಗಿ, ಕಷ್ಟಸುಖಗಳನ್ನು ಅನುಭವಿಸದೆ, ಕೇವಲ ದೇವರ ಕಾರ್ಯಗಳನ್ನು ಮಾತ್ರ ಮಾಡುವುದಾಗಿದೆ. ಜೀವಿಯು ಎಲ್ಲಿರುತ್ತಾನೋ ಅಲ್ಲಿ ತಪ್ಪದೆ ಆತ್ಮವಿರಲೇ ಬೇಕು. ಪದ್ಧತಿ ಪ್ರಕಾರ ಆಕಾಶಭೂತದಲ್ಲಿಯೂ ಸಹ ಆತ್ಮವಿದ್ದು ಅವಶ್ಯವಾದ ದೇವರ ಕಾರ್ಯಗಳನ್ನು ಮಾಡಿಸುತ್ತಿದೆ. ಆತ್ಮ ಸಂಪೂರ್ಣವಾಗಿ ಪರಮಾತ್ಮನನ್ನು ತಿಳಿದಿರುವುದಾಗಿರುವುದರಿಂದ ದೇವರ ಜ್ಞಾನವನ್ನು ಎಲ್ಲಿ ಹೇಳಿದರೂ ಆತ್ಮವೇ ಹೇಳಬೇಕಾಗಿರುತ್ತದೆ. ಆತ್ಮ ಹೊರತು ಜೀವಾತ್ಮ ಎನ್ನುವವನು ಹೇಳುವುದಕ್ಕೆ ಸಾಧ್ಯವಿಲ್ಲ. ಯಾವ ರೀತಿ ಜೀವಿಯು ದೇವರ ಜ್ಞಾನವನ್ನು ಹೇಳುವುದಕ್ಕೆ ಅರ್ಹನಲ್ಲವೋ, ಅದೇ ರೀತಿ ದೇವರು ಸ್ವತಹವಾಗಿ ತನ್ನ ಜ್ಞಾನವನ್ನು ಹೇಳುವುದಿಲ್ಲ. ಏಕೆಂದರೆ! ದೇವರು ಕಾರ್ಯರಹಿತನೆಂಬ ಸೂತ್ರದ ಪ್ರಕಾರ ಯಾವ ಕಾರ್ಯಗಳನ್ನೂ ಮಾಡುವುದಿಲ್ಲ. ಜ್ಞಾನವನ್ನು ಇತರರಿಗೆ ಹೇಳುವುದೂ ಸಹ ಒಂದು ಕೆಲಸವೇ ಆಗುತ್ತದೆ. ಆದ್ದರಿಂದ ತನ್ನ ಜ್ಞಾನವನ್ನು ಹೇಳುವುದು ಎಂಬ ಕೆಲಸವನ್ನೂ ಸಹ ದೇವರು ಮಾಡುವುದಿಲ್ಲ. ದೇವರ ಜ್ಞಾನವನ್ನು ಹೇಳುವ ಕೆಲಸ ಆತ್ಮವೇ ಮಾಡಬೇಕಾಗಿದೆ.

ಜೀವಿಯು ಯಾವ ಕೆಲಸವನ್ನು ಮಾಡಲಾರದೆ ಕೈಲಾಗದವನಾಗಿ ಶರೀರದಲ್ಲಿದ್ದರೇ, ದೇವರು ಯಾವ ಕೆಲಸವನ್ನು ಮಾಡಬಾರದವನಾಗಿ, ಕಾರ್ಯ ರಹಿತನಾಗಿ ಇದ್ದಾನೆ. ಜೀವಿಗೂ ದೇವರಿಗೂ ಮಧ್ಯದಲ್ಲಿರುವ ಆತ್ಮ ಮಾತ್ರ ಇತ್ತ ಜೀವಿಯ ಕೆಲಸವನ್ನಾಗಲೀ, ಅತ್ತ ದೇವರ ಕೆಲಸವನ್ನಾಗಲೀ ಮಾಡುವ

ಸಾಮರ್ಥ್ಯ ಇರುವುದಾಗಿ, ಚೈತನ್ಯವಂತವಾಗಿದೆ. ಆದ್ದರಿಂದ ಯಾವ ಭೂತದಲ್ಲಾಗಲೀ, ಆಕಾಶದಿಂದ ಭೂಮಿಮೇಲೆ, ಭೂಮಿ ಪೊರೆಗಳಲ್ಲಿ ಎಲ್ಲಿರುವ ಜೀವರಾಶಿಯಲ್ಲಾಗಲೀ ಆತ್ಮವೇ ಎಲ್ಲ ಮಾಡುತ್ತಿದೆ. ಮಾಡಬೇಕಾಗಿರುವುದು ಪ್ರಪಂಚ ಕಾರ್ಯವಾಗಲೀ, ಪರಮಾತ್ಮ ಕಾರ್ಯವಾಗಲೀ ಆತ್ಮವೇ ಮಾಡಬೇಕಾಗಿದೆ. ಇದೆಲ್ಲವೂ ದೇವರು ನಿರ್ಣಯಿಸಿದ ಕಾನೂನು. ಆ ದೇವರ ಕಾನೂನನ್ನು ಅನುಸರಿಸಿ ಆಕಾಶಭೂತದಲ್ಲಿರುವ ಆತ್ಮ, ಶಬ್ದದಿಂದ ಆಕಾಶದಲ್ಲಿನ ಸೂರ್ಯನಿಗೆ ದೈವ ಜ್ಞಾನವನ್ನು ತಿಳಿಸುವುದು ನಡೆದಿದೆ. ಈ ವಿಧವಾಗಿ ನಡೆದ ಕಾರ್ಯ ಅಂತಿಮ ದೈವಗ್ರಂಥದಲ್ಲಿ ದೇವರು ಮೂರು ವಿಧಗಳ ಜ್ಞಾನವನ್ನು ತಿಳಿಸುವೆನು ಎಂಬ (42-51) ವಾಕ್ಯದಲ್ಲಿನ ಒಂದನೆಯ ಮಾತಿನ ಪ್ರಕಾರ ಆದಿಯಲ್ಲೇ ನೆರವೇರಿದೆ. ದೇವರು ವಾಣಿಯಿಂದ ತಿಳಿಸಿರುವುದು ನಿಜವೇ ಆದರೂ, ಅಲ್ಲಿ ಆ ಕಾರ್ಯವನ್ನು ಪೋಷಿಸಿ ಮಾಡಿರುವುದು ಆತ್ಮಯೆಂದು ಎಲ್ಲರೂ ತಿಳಿಯಬೇಕು. ದೇವರು ಮೂರು ವಿಧಗಳ ಜ್ಞಾನ ತಿಳಿಸಿದಾಗ ಅದರಲ್ಲಿ ಮೊದಲು ಆತ್ಮನಿಂದ ವಾಣಿರೂಪದಲ್ಲಿ ತಿಳಿಸಿದ್ದಾನೆ. ಆಗ ದೇವರು ಅವತರಿಸಲಿಲ್ಲ.

ಸೃಷ್ಟಿ ಆದಿಯಲ್ಲಿ ಆಕಾಶವಾಣಿಯಿಂದ ದೇವರ ಜ್ಞಾನ ಸೂರ್ಯನಿಗೆ ಹೇಳುವುದು, ನಂತರ ಸೂರ್ಯನಿಂದ ಆಕಾಶದಲ್ಲಿನ ಉಳಿದ ಗ್ರಹಗಳಿಗೆ ಮತ್ತು ಭೂಮಿ ಮೇಲೆ ಮನುಷ್ಯರಿಗೆ ತಿಳಿಸುವುದು ನಡೆದಿದೆ. ಹಾಗೆ ಮೊದಲು ಹೇಳಲಾಗಿರುವ ಜ್ಞಾನ ಬಹಳ ಕಾಲ ಕಳೆದುಹೋದಾಗ, ಕೊನೆಗೆ ಮನುಷ್ಯರಿಗೆ ತಿಳಿಯದ ಪರಿಸ್ಥಿತಿ ಏರ್ಪಟ್ಟು, ಅಜ್ಞಾನದಿಂದ ಕೂಡಿಕೊಂಡ ಅಧರ್ಮಗಳ ಜ್ಞಾನವನ್ನೇ ಜ್ಞಾನವೆಂದು ಪ್ರಜೆಗಳು ಆಚರಿಸುತ್ತಿರುವ ಸಮಯದಲ್ಲಿ, ದೇವರು ಪ್ರಜೆಗಳಿಗೆ ಧರ್ಮಯುಕ್ತವಾದ ಜ್ಞಾನವನ್ನು ಹೇಳಿ, ಅಧರ್ಮಗಳಿಂದ ಕೂಡಿಕೊಂಡ ಜ್ಞಾನವನ್ನು ಇಲ್ಲದಂತೆ ಮಾಡಬೇಕೆಂದುಕೊಂಡಿದ್ದಾನೆ. ಆ ಪ್ರಯತ್ನದಲ್ಲಿ ದೇವರು ಸ್ವತಃವಾಗಿ ಮಾನವ ಶರೀರವನ್ನು ಧರಿಸಿ ಬಂದು, ಶರೀರದಲ್ಲಿ ಆತ್ಮನಾಗಿದ್ದು, ತನ್ನ ಜ್ಞಾನವನ್ನು ಆತ್ಮ ರೂಪದಿಂದ ತಿಳಿಸಿದ್ದಾನೆ. ಆಗ ತಿಳಿಸಿದ ಜ್ಞಾನ ಸ್ವಲ್ಪ ಕಾಲಕ್ಕೇ ಗ್ರಂಥರೂಪವಾಗಿ ಬದಲಾಗಿದೆ.

ದ್ವಾಪರಯುಗದ ಕೊನೆಯಲ್ಲಿ ಕಲಿಯುಗ ಆದಿಯಲ್ಲಿ ದೇವರು ಮನುಷ್ಯನಾಗಿ ಬಂದು ಕೃಷ್ಣನೆಂಬ ಹೆಸರು ಹೊಂದಿ ಹೇಳಿದ ಜ್ಞಾನ ವ್ಯಾಸನಿಂದ ಪ್ರಥಮ ದೈವಗ್ರಂಥವಾಗಿದೆ. ಹಾಗೆ ತಯಾರಾದ ಗ್ರಂಥದ ಹೆಸರು **"ಭಗವದ್ಗೀತೆ"** ಎಂದು ಹೇಳಲಾಗಿದೆ. ಕೃಷ್ಣನು ಆ ಕಾಲದಲ್ಲಿ ಅಲ್ಲಿನ ಪ್ರಾಂತೀಯ ಭಾಷೆಯಾದ ಹಿಂದೀ ಭಾಷೆಯಲ್ಲಿ ಜ್ಞಾನವನ್ನು ಹೇಳಿದಾಗ, ವ್ಯಾಸನು ಲಿಪಿಯಿಲ್ಲದ ಸಂಸ್ಕೃತ ಭಾಷೆಯಲ್ಲಿ ಹಿಂದೀಲಿಪಿಯಲ್ಲಿಯೇ ಬರೆದಿದ್ದಾನೆ. ಹಾಗೆ ಬರೆದಿರುವ ಭಗವದ್ಗೀತೆ ಇಂದಿಗೂ ಶ್ಲೋಕಗಳ ರೂಪದಲ್ಲಿ ಇದೆ. ಕೃಷ್ಣನು ಕೆಲವು ನಿಮಿಷಗಳು ಮಾತ್ರವೇ ಹೇಳಿದ ಜ್ಞಾನವನ್ನು ವ್ಯಾಸನು ಪೂರ್ತಿ ವಿವರಿಸುತ್ತಾ ಅನೇಕ ಶ್ಲೋಕಗಳ ರೂಪದಲ್ಲಿ ಬರೆದಿದ್ದಾನೆ. ಅಂದಿನ ಕವಿಯಾದ ವ್ಯಾಸನು ಸುಮಾರು ಐದು ನೂರು ಶ್ಲೋಕಗಳನ್ನು ಭಗವದ್ಗೀತೆಯಾಗಿ ಹೇಳಿದಾಗ, ನಂತರ ಕಾಲದಲ್ಲಿ ವ್ಯಾಸನು ಮರಣಿಸಿದ ನಂತರ ಇತರರಿಂದ ಮತ್ತೆ ಕೆಲವು ಶ್ಲೋಕಗಳು ಸೇರಿಸಲಾಗಿ, ಈದಿನ ಏಳು ನೂರು ಶ್ಲೋಕಗಳ ರೂಪದಲ್ಲಿ ಭಗವದ್ಗೀತೆ ಕಾಣಿಸುತ್ತಿದೆ.

ಈ ರೀತಿ ಭಗವದ್ಗೀತೆಯನ್ನು ದೇವರೇ ಮನುಷ್ಯನಾಗಿ ಅವತರಿಸಿ ಹೇಳಿದಾಗ, ಅದು ಈದಿನ ಭಗವದ್ಗೀತೆ ರೂಪದಲ್ಲಿದ್ದರೂ, ಭೂಮಿ ಮೇಲೆ ಬಹಳ ಜನರಿಗೆ ಅದೇ ಪ್ರಥಮ ದೈವಗ್ರಂಥವೆಂದು ತಿಳಿದಿಲ್ಲ. ಭಗವದ್ಗೀತೆ ಭಾರತದೇಶದಲ್ಲಿ ಇಲ್ಲಿಗೆ 5153 ಸಂವತ್ಸರಗಳ ಕೆಳಗೆ ಹೇಳಲಾಗಿದೆ. ನಂತರ ಕಲಿಯುಗ ಮೂರುಸಾವಿರ ಸಂವತ್ಸರಗಳಿಗೆ ಪಶ್ಚಿಮ ದೇಶವಾದ ಇಜ್ರಾಯೆಲ್ ದೇಶದಲ್ಲಿ ಇರುವ ಅಜ್ಞಾನವನ್ನನುಸರಿಸಿ, ಅಲ್ಲಿ ದೇವರು ಉದ್ಭವಿಸಿ ಜ್ಞಾನವನ್ನು ಹೇಳಿ ಹೋಗುವುದು ನಡೆದಿದೆ. ಅಲ್ಲಿ ಹೇಳಿರುವ ಜ್ಞಾನವೂ ಸಹ ಬೈಬಲ್ ಗ್ರಂಥವಾಗಿ ಬರೆಯಲಾಗಿದೆ. ಬೈಬಲ್ ಈದಿನ ಪ್ರಪಂಚದಲ್ಲಿ ಅಧಿಕ ಸಂಖ್ಯೆಯಲ್ಲಿ ಅನೇಕ ಭಾಷೆಗಳಲ್ಲಿ ಎಲ್ಲರ ಹತ್ತಿರಕ್ಕೂ ಸೇರಿದೆ. ಆದರೇ ಬೈಬಲ್ ಗ್ರಂಥವೇ ಮಧ್ಯ ದೈವ ಗ್ರಂಥವೆಂದು ಕ್ರೈಸ್ತವರಿಗೂ ಸಹ ತಿಳಿದಿಲ್ಲ. ಭಗವದ್ಗೀತೆ ಪ್ರಥಮ ದೈವಗ್ರಂಥವೆಂದಾಗಲೀ, ಬೈಬಲ್ ಮಧ್ಯದೈವಗ್ರಂಥವೆಂದಾಗಲೀ ಭಗವದ್ಗೀತೆ ಯನ್ನು ಓದಿದ ಹಿಂದುಗಳಿಗು, ಬೈಬಲ್‌ನ್ನು ಓದಿದ ಕ್ರೈಸ್ತರಿಗೂ ತಿಳಿಯದಂತೆ ಹೋಗಿದೆ. ಬೈಬಲ್ ಗ್ರಂಥವನ್ನು ಹೇಳಿದ ನಂತರ ಆರು ನೂರು ಸಂವತ್ಸರಗಳಿಗೆ

ಅಂದರೆ ಇಲ್ಲಿಗೆ 1400 ಸಂವತ್ಸರಗಳ ಕೆಳಗೆ ಅರಬ್ ದೇಶದಲ್ಲಿ ಖುರ್ಆನ್ ಗ್ರಂಥವೊಂದರ ಜ್ಞಾನವನ್ನು ಸೂರ್ಯಗ್ರಹ ಬಂದು ಭೂಮಿಮೇಲೆ ಕೃತಯುಗದ ಆದಿಯಲ್ಲೇ ಹೇಳಿದಹಾಗೆ, ಜಿಬ್ರಯೇಲ್ ಎಂಬ ಗ್ರಹವು ಭೂಮಿಮೇಲೆಗೆ ಬಂದು ಕಾಣಿಸದೆ ತೆರೆಮರೆಯಲ್ಲಿರುವಂತಿದ್ದು ಮುಹಮ್ಮದ್ ಪ್ರವಕ್ತರವರಿಗೆ ಹೇಳಿಹೋಗುವುದು ನಡೆದಿದೆ. ಸೂರ್ಯನು ಮನುವಿಗೆ ಹೇಳಿದಹಾಗೆ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರಿಗೆ ಹೇಳಿದೆ. ಆದರೇ ಸ್ವತಃವಾಗಿ ದೇವರು ಅವತರಿಸಿ ಕೃಷ್ಣನಾಗಿ ಭಗವದ್ಗೀತೆಯನ್ನು, ಏಸಾಗಿ ಬೈಬಲ್ ಗ್ರಂಥಜ್ಞಾನವನ್ನು ಹೇಳಲಾಗಿದೆ. ಖುರಾನ್ ಗ್ರಂಥವನ್ನು ಹೇಳಿದಾಗ ದೇವರು ಅವತರಿಸಲಿಲ್ಲ. ಆಕಾಶದಲ್ಲಿ ಸೂರ್ಯನ ಹಾಗೆ ಇರುವ ಜಿಬ್ರಯೇಲ್ ಗ್ರಹ ಎನ್ನುವ ದೊಡ್ಡ ಜ್ಞಾನಿ ಭೂಮಿಮೇಲೆಗೆ ಬಂದು ಹೇಳುವುದು ನಡೆದಿದೆ. ಖುರ್ಆನ್ ಗ್ರಂಥಕ್ಕಿಂತ ಮೊದಲು ಬಂದಿರುವ ಎರಡು ಗ್ರಂಥಗಳನ್ನು ಜಿಬ್ರಯೇಲ್ ತನ್ನ ಮಾತುಗಳಲ್ಲಿ **'ತೌರಾತು', 'ಇಂಜೀಲು'** ಎಂದು ಹೇಳಿದೆ. ಅಷ್ಟೇ ಅಲ್ಲದೆ ಆ ಎರಡು ಗ್ರಂಥಗಳಲ್ಲಿ ಜ್ಞಾನ ಜ್ಯೋತಿ ಇದೆಯೆಂದು ಜಿಬ್ರಯೇಲ್ ಹೇಳಿದ್ದಾನೆ. ದೇವರು ಸ್ವತಃವಾಗಿ ಬಂದು ಹೇಳಿದ ಜ್ಞಾನವೆಂದು ತಿಳಿದ ಮಹಾಜ್ಞಾನಿ ಜಿಬ್ರಯೇಲ್ ಕೊನೆಯಲ್ಲಿ ತಾನು ಹೇಳಿದ ಖುರ್ಆನ್ ಗ್ರಂಥ ಜ್ಞಾನಕ್ಕೆ ಅಂತಿಮ ಗ್ರಂಥವೆಂದು, ಅದನ್ನು ಪ್ರಜೆಗಳಿಗೆ ಬೋಧಿಸಿದ ಪ್ರವಕ್ತ ಅಂತಿಮ ಪ್ರವಕ್ತರೆಂದು ಹೇಳುವುದು ನಡೆದಿದೆ. ಹಾಗೆ ಹೇಳುವುದಕ್ಕೆ ಕಾರಣವೇನೆಂದರೇ! ಇದು ಅಂತಿಮ ಗ್ರಂಥವಾದಾಗ ಭಗವದ್ಗೀತೆಯನ್ನು ಪ್ರಥಮ ದೈವಗ್ರಂಥವೆಂದು, ಬೈಬಲ್‌ನ್ನು ಮಧ್ಯ ದೈವಗ್ರಂಥವೆಂದು ಪ್ರಜೆಗಳು ತಿಳಿದುಕೊಳ್ಳಬಲ್ಲರೆಂದು ಹಾಗೆ ಹೇಳಿದ್ದಾನೆ.

ಖುರ್ಆನ್ ಗ್ರಂಥದಲ್ಲಿ 42ನೇ ಸೂರಾ, 51ನೇ ಆಯತ್‌ನಲ್ಲಿ (42–51) **"ದೇವರು ನೇರವಾಗಿ ಯಾರೊಂದಿಗೂ ಮಾತನಾಡುವುದಿಲ್ಲ, ಆದರೇ ದೇವರು ತನ್ನ ಜ್ಞಾನವನ್ನು ಮೂರು ವಿಧಗಳಾಗಿ ಮನುಷ್ಯರಿಗೆ ತಿಳಿಸುವನು. ಒಂದು ವಹೀಯಿಂದ, ಎರಡು ತೆರೆಮರೆಯಿಂದ, ಮೂರು ತನ್ನ ದೂತನಿಂದ ಎಂದು ಹೇಳಲಾಗಿದೆ."** ಇಂದಿಗೆ ಈ ಮೂರು ವಿಧಾನಗಳಿಂದ ದೇವರು

ಭೂಮಿಮೇಲೆ ಮನುಷ್ಯರಿಗೆ ಜ್ಞಾನವನ್ನು ತಿಳಿಸಿದ್ದಾನೆ. ದೇವರು ಮೊದಲು ವಹೀಯಿಂದ ತಿಳಿಸಿದ ಜ್ಞಾನವನ್ನೇ ನಂತರ ಕಾಲಗಳಲ್ಲಿ ಉಳಿದ ಎರಡು ವಿಧಗಳಲ್ಲಿ ತೆರೆಮರೆಯಿಂದ ಒಂದು ವಿಧ, ದೂತನಿಂದ ಒಂದು ವಿಧವನ್ನು ತಿಳಿಸಿದ್ದಾನೆ. ಆದರೇ ಆತನು ತಿಳಿಸಿದ ವಿಧಾನವನ್ನು ಸಹ ಸರಿಯಾಗಿ ತಿಳಿಯದವರು ತೆರೆಮರೆಯಿಂದ ಹೇಳಿದ ಜಿಬ್ರಯೇಲ್‌ನ್ನು ದೇವರ ದೂತನಾಗಿ ಹೇಳಿಕೊಳ್ಳುತ್ತಿದ್ದಾರೆ. ದೂತನಾಗಿ ಬಂದಿರುವವನನ್ನು ಪೂರ್ತಿಯಾಗಿ ಮರೆತುಹೋಗಿದ್ದಾರೆ. ದೇವರು ಯಾವಾಗ ಸ್ವತಃವಾಗಿ ಶರೀರವನ್ನು ಧರಿಸಿ ಬರುವನೋ, ಆ ಬಂದಿರುವ ಆಕಾರವನ್ನು ದೂತ ಎಂದು ಹೇಳಲಾಗಿದೆ. ವಿವರವಾಗಿ ಹೇಳಿಕೊಂಡರೇ ದೂತ ಎಂದರೆ ಸಮಾಚಾರವನ್ನು ತೆಗೆದುಕೊಂಡು ಬಂದವನೆಂದು ಅರ್ಥ. ಸಮಾಚಾರವನ್ನು ತೆಗೆದುಕೊಂಡು ಬರುವ ದೂತನಿಗೆ ಸಹಜವಾಗಿ ಎರಡು ಧೃವಗಳಿರುತ್ತವೆ. ಒಂದು ಸಮಾಚಾರವನ್ನು ತಿಳಿಸಬೇಕಾದ ವ್ಯಕ್ತಿ ಹತ್ತಿರಕ್ಕೆ ದೂತ ಬರಬೇಕಾಗಿರುವಾಗ ಮೊದಲು ಸಮಾಚಾರವನ್ನು ಯಾರೋ ಒಬ್ಬರ ಹತ್ತಿರದಿಂದ ತೆಗೆದುಕೊಂಡು ಬರಬೇಕಾಗಿದೆ. ಇಲ್ಲಿ ಸಮಾಚಾರವನ್ನು ತರುವ ದೂತ ಮೊದಲನೆ ಧೃವವಾದ ದೇವರ ಹತ್ತಿರದಿಂದ ಜ್ಞಾನ ಎಂಬ ಸಮಾಚಾರವನ್ನು ತೆಗೆದುಕೊಂಡು ಮನುಷ್ಯನ ಹತ್ತಿರಕ್ಕೆ ಬಂದು, ತಂದಿರುವ ಸಮಾಚಾರವನ್ನು ತಿಳಿಸಬೇಕಾಗಿದೆ. ಸಮಾಚಾರವನ್ನು ಸ್ವೀಕರಿಸುವವನು ಮನುಷ್ಯನಾದಾಗ, ಸಮಾಚಾರವನ್ನು ತರುವವನು ಯಾರೋ ದೂತ ಎಂದುಕೊಳ್ಳೋಣ. ಸಮಾಚಾರವನ್ನು ದೇವರ ಹತ್ತಿರದಿಂದ ತರಬೇಕಾಗಿದೆ. ಅದರೇ ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೇ! ಸಮಾಚಾರವನ್ನು ತರುವವನು ದೇವರ ಹತ್ತಿರದಿಂದ ಹೊರಟು, ದೇವರು ಕೊಟ್ಟಿರುವ ಸಮಾಚಾರವನ್ನು ತೆಗೆದುಕೊಂಡು ಬರಬೇಕಲ್ಲವೆ! ಆದರೇ ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ದೇವರನ್ನು ಇಲ್ಲಿಯವರೆಗು ಯಾರೂ ನೋಡಲಿಲ್ಲ. ದೇವರು ಎಂದರೇ ಬದುಕಿರುವ ಯಾವನಿಗೂ ತಿಳಿದಿಲ್ಲ. ದೇವರು ಕಾಣಿಸುವ ವನಲ್ಲ, ಹಾಗಿರುವಾಗ ಯಾರೂ ದೇವರ ಹತ್ತಿರದಿಂದ ಸಮಾಚಾರವನ್ನು ತರುವುದಕ್ಕೆ ಅವಕಾಶವಿಲ್ಲ.

ದೇವರು ತನ್ನ ಕಾನೂನಿನ ಪ್ರಕಾರ (ತನ್ನ ಧರ್ಮದ ಪ್ರಕಾರ) ರೂಪ, ನಾಮ, ಕ್ರಿಯೆಗಳು ಇಲ್ಲದವನು. ಆತನ ಹತ್ತಿರ ಯಾವ ಕೆಲಸ ಮನುಷ್ಯನಾಗಲೀ, ದೂತನಾಗಲೀ, ಸೇವಕನಾಗಲೀ, ಯಾರೇಯಾಗಲೀ ಇರುವುದಕ್ಕೆ ಅವಕಾಶವೇ ಇಲ್ಲ. ಹಾಗೆ ಇದ್ದಾನೆ ಎಂದರೆ ಅವನು ದೇವರನ್ನು ನೋಡಿದವನಾಗುತ್ತಾನೆ. ದೇವರನ್ನು ನೋಡಿದವನು ಇಲ್ಲಿಯವರೆಗು ಎಲ್ಲೂ ಇಲ್ಲದಿರುವಾಗ ಆತನಿಗೆ ಪ್ರತ್ಯೇಕಿಸಿ ಒಬ್ಬ ದೂತ ಇದ್ದಾನೆನ್ನುವುದು ತಪ್ಪಾಗುತ್ತದೆ. ಈಗ ಇಲ್ಲಿ ಕೆಲವರು ನನ್ನನ್ನು ಒಂದು ಪ್ರಶ್ನೆ ಕೇಳಬಹುದು. ಅದೇನೆಂದರೇ! ದೇವರನ್ನು ಯಾರೂ ನೋಡದಿರುವಾಗ, ದೇವರಿಗೆ ಯಾರೂ ದೂತರು ಇಲ್ಲದಿರುವಾಗ, ಅಂತಿಮ ದೈವಗ್ರಂಥದಲ್ಲಿ ಮಹಾಜ್ಞಾನಿ ಆದ ಜಿಬ್ರಯೇಲ್ 42ನೇ ಸೂರಾದಲ್ಲಿ 51ನೇ ವಾಕ್ಯದಲ್ಲಿ (ಆಯತ್‌ನಲ್ಲಿ) ದೇವರು ತನ್ನ ದೂತನಿಂದ ಮನುಷ್ಯರಿಗೆ ಜ್ಞಾನವನ್ನು ತಿಳಿಸುವನೆಂದು ಹೇಳಿದ್ದಾನಲ್ಲವೆ! ಹಾಗೆ ಏಕೆ ಹೇಳಿದ್ದಾನೆಂದು ಕೇಳಬಹುದು. ಈ ಪ್ರಶ್ನೆಗೆ ನಾವು ಹೇಳುವ ಉತ್ತರ ಹೀಗೆ ಇದೆ ನೋಡಿರಿ. ನಾವಿರುವುದು ಇಹಲೋಕದಲ್ಲಿ, ದೇವರಿರುವುದು ಪರಲೋಕದಲ್ಲಿ ಆದರೆ ಇಹಲೋಕದಲ್ಲಿ ಸಮಸ್ತ ಜೀವರಾಶಿಗಳು, ಆ ಜೀವರಾಶಿಗಳನ್ನು ಪಾಲಿಸುವ ದೇವರ ಪಾಲಕರು, ದೇವತೆಗಳು, ದೆವ್ವಗಳು ಮೊದಲಾದ ಸಮಸ್ತ ಜನರು ಇದ್ದಾರೆ. ಪರಲೋಕದಲ್ಲಿ ದೇವರು ಹೊರತು ಎರಡನೆಯವನು ಯಾವನೂ ಇರುವುದಕ್ಕೆ ಅವಕಾಶವಿಲ್ಲ. ಎರಡನೆಯವನು ಯಾರಿದ್ದರೂ ದೇವರೆಂದರೆ ಏನು, ದೇವರೆಂದರೆ ಯಾರು ಎಂದು ಅವರಿಗೆ ತಿಳಿದುಹೋಗುತ್ತದೆ. ದೇವರು ತನಗಿಂತ ಬೇರೆಯಾಗಿರುವ ಯಾವನಿಗೂ ತಿಳಿಯುವುದಿಲ್ಲ. ಅಷ್ಟೇ ಅಲ್ಲದೆ ದೇವರ ಜ್ಞಾನ ದೇವರಿಗೆ ಹೊರತು ಯಾರಿಗೂ ತಿಳಿದಿಲ್ಲ. ಹಾಗಿರುವಾಗ ದೂತ ಎಂಬ ಪ್ರತ್ಯೇಕವಾದವನು ಯಾವನೂ ಇರುವುದಕ್ಕೆ ಅವಕಾಶವಿಲ್ಲ. ಎಲ್ಲಾದರೂ ತನ್ನ ಸಮಾಚಾರವನ್ನು ತಿಳಿಸಬೇಕೆಂದು ದೇವರು ಅಂದುಕೊಂಡರೆ, ದೇವರೇ ಸ್ವತಃವಾಗಿ ಮಾರುವೇಷ ದಲ್ಲಿ ದೂತನಾಗಿ ಬರಬಹುದಾಗಲೀ, ಪ್ರತ್ಯೇಕವಾದ ದೂತ ಯಾರೂ ಇರುವುದಿಲ್ಲ. ದ್ವಾಪರ ಯುಗ ಅಂತ್ಯದಲ್ಲಿ ಕಲಿಯುಗ ಪ್ರಾರಂಭದಲ್ಲಿ ದೇವರು ಸ್ವತಹವಾಗಿ ಮನುಷ್ಯ ಶರೀರವನ್ನು ಧರಿಸಿ ಕೃಷ್ಣ ಎಂಬ ಹೆಸರಿಂದ ಬರುವುದು

ನಡೆದಿದೆ. ರೂಪವಿಲ್ಲದ ದೇವರು ಮಾರು ವೇಷದಂತೆ ತನ್ನದಲ್ಲದ ರೂಪವನ್ನು ಧರಿಸಿ ಮನುಷ್ಯನಾಗಿ ಬಂದಾಗ, ಹಾಗೆ ಬಂದಿರುವವನನ್ನು ದೂತ ಎಂದು ಹೇಳುವುದು ನಡೆಯುತ್ತಿದೆ. ದೇವರು ತನ್ನ ಜ್ಞಾನವನ್ನು ತಿಳಿಸುವ ನಿಮಿತ್ತ ದೂತ ವೇಷದಲ್ಲಿ ಕಲಿಯುಗದಲ್ಲಿ ಇಲ್ಲಿಗೆ ಎರಡು ಬಾರಿ ಬಂದು ಹೋಗುವುದು ನಡೆದಿದೆ. ಆದರೂ ಬಂದಿರುವವನು ದೇವರು ಎಂದು, ಆತನು ಮಾರು ವೇಷದಲ್ಲಿ ಬಂದಿದ್ದಾನೆಂದು ಯಾರೂ ತಿಳಿಯದೆ ಹೋಗಿದ್ದಾರೆ.

ಒಂದುಬಾರಿ ಅಲೆಗ್ಜಾಂಡರ್ ಪುರುಷೋತ್ತಮ ರಾಜನ ಹತ್ತಿರಕ್ಕೆ ಯುದ್ಧ ವಿಷಯಗಳನ್ನು ತಿಳಿಸುವುದಕ್ಕೆ ದೂತನನ್ನು ಕಳುಹಿಸಿದ್ದಾನೆ. ಆದರೇ ದೂತವೇಷದಲ್ಲಿ ಬಂದಿರುವವನು ಅಲೆಗ್ಜಾಂಡರೇಯೆಂದು ಇತರರ್ಯಾರೂ ತಿಳಿಯದೆಹೋದರೂ, ಪುರುಷೋತ್ತಮ ರಾಜ ಬಂದಿರುವವನು ದೂತವೇಷ ದಲ್ಲಿರುವ ಅಲೆಗ್ಜಾಂಡರೆಂದು ಗ್ರಹಿಸಿದ್ದಾನೆ. ಹಾಗೇ ದೇವರು ಮನನುಷ್ಯರಿಗೆ ಜ್ಞಾನವನ್ನು ತಿಳಿಸುವ ಸಲುವಾಗಿ ಶರೀರವನ್ನು ಧರಿಸಿ ಸಮಾಚಾರವನ್ನು ತಂದಿರುವ ದೂತನಹಾಗೆ ಬಂದಾಗ ಪ್ರಜೆಗಳು ಯಾರೂ ಗ್ರಹಿಸಲಾರದೆ ಹೋದರೂ, ಸೂಕ್ಷಜ್ಞಾನಿ ಆದವನು ಬಂದಿರುವವನು ದೇವರೇಯೆಂದು ತಿಳಿಯಬಲ್ಲನು. ಆದರೇ ದೇವರು ಮಾರುವೇಷದಲ್ಲಿ ಮನುಷ್ಯನಹಾಗೆ ಇರುವುದರಿಂದ ದೇವರನ್ನು ಪ್ರತ್ಯಕ್ಷವಾಗಿ ನೋಡಿದವನು ಯಾರೂ ಇಲ್ಲವೆಂದು ಹೇಳಬಹುದು. ದೇವರ ಹತ್ತಿರ ದೇವರು ಹೊರತು ಯಾರೂ ಇಲ್ಲ. ಆದ್ದರಿಂದ ಪಕ್ಕದವನು ಯಾವನೂ ದೂತನಾಗಿ ಬರುವುದಕ್ಕೆ ಅವಕಾಶವಿಲ್ಲ. ಒಂದುವೇಳೆ ದೇವರ ಜ್ಞಾನವನ್ನು ಮನುಷ್ಯರಿಗೆ ತಿಳಿಸುವುದಕ್ಕೆ ಯಾರು ಬಂದರೂ ಅವನು ಮಾರುವೇಷದಲ್ಲಿರುವ ದೇವರೆಂದು ತಿಳಿಯಬಹುದು. ದೇವರ ಜ್ಞಾನ ದೇವರಿಗೆ ಹೊರತು ಯಾರಿಗೂ ತಿಳಿಯದಿರುವಾಗ, ದೇವರ ಜ್ಞಾನವನ್ನು ದೇವರೇ ತಿಳಿಸಬೇಕಾಗಿರುತ್ತದೆ, ದೇವರೇ ದೂತನಾಗಿ ಬರಬೇಕಾಗಲೀ ಇತರರ್ಯಾರೂ ಬರುವುದಕ್ಕೆ ಅವಕಾಶವಿಲ್ಲ. ದೇವರು ಹೇಳಿದ ಜ್ಞಾನವನ್ನು ಆಕಾಶದಲ್ಲಿ ಮೊದಲೇ ತಿಳಿದಿರುವ ಜಿಬ್ರಯೇಲ್ ಭೂಮಿಮೇಲೆ ಮನುಷ್ಯರಿಗೆ ಜ್ಞಾನವನ್ನು ಹೇಳುವುದಕ್ಕೆ

ಬಂದಿದ್ದಾನೆ. ಆಗ ಆತನನ್ನು ದೇವರ ಅವತಾರವೆಂದುಕೊಳ್ಳುವುದಕ್ಕೆ ಅವಕಾಶ ವಿಲ್ಲ. ಏಕೆಂದರೆ! ತಾನು ಇನ್ನೊಬ್ಬರಿಂದ ತಿಳಿದ ಜ್ಞಾನವನ್ನೇ ಹೇಳುತ್ತಿದ್ದಾನಾಗಲೀ ಸ್ವತಃವಾಗಿ ಜ್ಞಾನವನ್ನು ಹೇಳಲಿಲ್ಲವಲ್ಲವೆ! ಆದ್ದರಿಂದ ಆತನನ್ನು ದೂತ ಎನ್ನುವದಕ್ಕೆ ಅವಕಾಶವಿಲ್ಲ. ಖುರ್‌ಆನ್ ಗ್ರಂಥದಲ್ಲಿಯೂ ಸಹ ಜಿಬ್ರಯೇಲ್‌ನ್ನು ದೂತ ಎಂದು ಎಲ್ಲಿಯೂ ಸಂಬೋಧಿಸಿ ಹೇಳಲಿಲ್ಲ. ದೇವರು ದೂತ ರೂಪದಲ್ಲಿ ಬಂದರೇ ದೂತನಾಗಿದ್ದರೂ ಪ್ರಕೃತಿಯನ್ನು ಶಾಸಿಸುವ ಸಾಮರ್ಥ್ಯ ಹೊಂದಿರುವನು. ಕಾಣಿಸದೆ ತೆರೆಮರೆಯಲ್ಲಿದ್ದು ಹೇಳಿದವನು ಕಲಿಯುಗದಲ್ಲಿ ಜಿಬ್ರಯೇಲ್, ಕೃತಯುಗದಲ್ಲಿ ಸೂರ್ಯನು ಇದ್ದಾರೆಂದು ಹೇಳಬಹುದು. ತೌರಾತು, ಇಂಜೀಲು ಗ್ರಂಥಗಳ ಜ್ಞಾನವನ್ನು ಹೇಳಿದವರು ಕೃಷ್ಣನು, ಏಸು ಎಂಬ ಇಬ್ಬರು ದೂತರೆಂದು ಹೇಳಬಹುದು. **ಎರಡು ಬಾರಿ, ಎರಡು ಹೆಸರುಗಳಿಂದ, ಎರಡು ಶರೀರಗಳನ್ನು ಧರಿಸಿಬಂದ ಇಬ್ಬರು ದೂತರು ಬೇರೆಬೇರೆ ಹೆಸರುಗಳು ಹೊಂದಿದ್ದರೂ, ಬಂದಿರುವವನು ದೇವರು ಒಬ್ಬನೇಯೆಂದು ತಿಳಿಯಬೇಕು.**

ದೇವರು ದೇವರಾಗಿ ಅಲ್ಲದೆ ದೂತರೆಂಬ ಮಾರುವೇಷದಲ್ಲಿ ಬಂದು, ಶರೀರದಲ್ಲಿ ಆತ್ಮನಾಗಿದ್ದು ಪ್ರಥಮ ದೈವಗ್ರಂಥವನ್ನು, ಮಧ್ಯ ದೈವಗ್ರಂಥವನ್ನು ಬೋಧಿಸಿದ್ದಾನೆ. ನಂತರ ತನ್ನ ಪಾಲನೆಯಲ್ಲಿನ ಒಬ್ಬನಾದ ಜಿಬ್ರಯೇಲ್ ಎಂಬ ಗ್ರಹದಿಂದ ಅಂತಿಮ ದೈವಗ್ರಂಥವನ್ನು ಬೋಧಿಸಿದ್ದಾನೆ. ಈ ರೀತಿ ಮೂರು ದೈವ ಗ್ರಂಥಗಳು ಭೂಮಿ ಮೇಲೆ ತಯಾರುಮಾಡಿ ಮನುಷ್ಯರಿಗೆ ಕೊಟ್ಟಿದ್ದಾನೆ. ವಾಸ್ತವಕ್ಕೆ ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನವೇ ಮೂರು ದೈವಗ್ರಂಥಗಳಲ್ಲಿ ಇದೆ. ದೇವರು ಮೊದಲು ಹೇಳಿದ ಒಂದು ಜ್ಞಾನವನ್ನೇ ಮೂರು ಗ್ರಂಥಗಳ ರೂಪದಲ್ಲಿ ಏಕೆ ಮಾಡಬೇಕಾಗಿ ಬಂದಿದೆಯೆಂದು ಯಾರಾದರೂ ಪ್ರಶ್ನಿಸಿದರೇ ಅದಕ್ಕೆ ನಮ್ಮ ಉತ್ತರ ಈ ರೀತಿ ಇದೆ. ಈ ವಿಷಯ ಅರ್ಥವಾಗುವುದಕ್ಕೆ ಚಿಕ್ಕ ಉದಾಹರಣೆಯನ್ನು ಹೇಳುತ್ತೇನೆ ಚೆನ್ನಾಗಿ ಅರ್ಥಮಾಡಿಕೊಳ್ಳಿ. ಒಂದು ಕುಟುಂಬದಲ್ಲಿ ಒಂದೇ ಸೋರೆಯಲ್ಲಿ ಬೆಲ್ಲದಿಂದ ಪಾನಕವನ್ನು ತಯಾರು

ಮಾಡಿದ್ದಾರೆಂದುಕೊಳ್ಳಿ. ಆ ಕುಟುಂಬದಲ್ಲಿನ ಹಿರಿಯರಿಗೆ ದೊಡ್ಡ ಗ್ಲಾಸಿನಲ್ಲಿ ಪಾನಕವನ್ನು ಹಾಕಿ ಕೊಡುತ್ತಾರೆ. ಹತ್ತರಿಂದ ಐದುವರ್ಷಗಳ ಮಕ್ಕಳಿಗೆ ದೊಡ್ಡಗ್ಲಾಸನ್ನು ಹಿಡಿದುಕೊಳ್ಳಲಾರರೆಂದು ಚಿಕ್ಕ ಗ್ಲಾಸಿನಲ್ಲಿ ಹಾಕಿಕೊಡುತ್ತಾರೆ. ಒಂದು ಎರಡು ವರ್ಷದ ಮಕ್ಕಳಿಗೆ ಚಿಕ್ಕ ಹೊಳಿಲುನಿಂದ ಸ್ವಲ್ಪ ಸ್ವಲ್ಪ ಕುಡಿಸುತ್ತಾರೆ. ಅವರ ವಯಸ್ಸನ್ನು ಬಲವನ್ನು ಅನುಸರಿಸಿ ಅವರಿಗೆ ದೊಡ್ಡ ಗ್ಲಾಸುಗಳನ್ನು, ಚಿಕ್ಕ ಗ್ಲಾಸುಗಳನ್ನು, ಚಿಕ್ಕ ಗೋಕರ್ಣಗಳನ್ನು ಹೇಗೆ ವಿನಿಯೋಗಿಸಿ ಪಾನಕವನ್ನು ಕುಡಿಸುತ್ತಿದ್ದೇವೊ, ಹಾಗೇ ದೇವರು ಒಂದೇ ಕುಟುಂಬದಂತಿರುವ ಒಂದೇ ಮನುಷ್ಯ ಜಾತಿಗೆ ಅವರವರ ಸಾಮರ್ಥ್ಯವನ್ನನುಸರಿಸಿ ಅದರಲ್ಲಿನ ಜ್ಞಾನವನ್ನು ಗ್ರಹಿಸುವಹಾಗೆ, ಮೂರು ವಿಧಗಳ ಗ್ರಂಥಗಳಲ್ಲಿ ಜ್ಞಾನವನ್ನು ಕೊಟ್ಟಿದ್ದಾನೆ. ಒಂದು ಕುಟುಂಬದಲ್ಲಿನ ಹಿರಿಯರು ಕುಡಿದರೂ, ಮಕ್ಕಳು ಕುಡಿದರೂ ಒಂದೇ ರುಚಿ ಇರುವ ಪಾನಕವೇ ಅಲ್ಲವೆ! ಹಾಗೇ ಒಂದೇ ಜಾತಿ ಮನುಷ್ಯರಾದ ಹಿಂದೂಗಳು ಓದಿದರೂ, ಕ್ರೈಸ್ತರು ಓದಿದರೂ, ಮುಸ್ಲೀಮ್‌ರು ಓದಿದರೂ ಮೂರು ಗ್ರಂಥಗಳಲ್ಲಿ ಇರುವುದು ಒಂದೇ ಜ್ಞಾನವಲ್ಲವೇ! ಒಂದೇ ಪಾನಕವನ್ನು (ಪಾನೀಯವನ್ನು) ದೊಡ್ಡ ಗ್ಲಾಸು, ಚಿಕ್ಕ ಗ್ಲಾಸು, ಚಿಕ್ಕ ಸೌಟಿನಿಂದ ಹೇಗೆ ಕೊಡುತ್ತಿದ್ದೇವೊ, ಹಾಗೇ ಒಂದೇ ದೇವರ ಜ್ಞಾನವನ್ನು ದೊಡ್ಡ, ಚಿಕ್ಕ ಎಂಬ ಮೂರು ಗ್ರಂಥಗಳ ರೂಪದಲ್ಲಿ ದೇವರು ಕೊಟ್ಟಿದ್ದಾನೆ. ಒಂದೇ ಪಾನಕವನ್ನು ಕುಡಿಯುವುದಕ್ಕೆ ಮೂರು ಪರಿಮಾಣಗಳ ಗ್ಲಾಸುಗಳನ್ನು ಬಳಸಿದಂತೆ, ಒಂದೇ ಜ್ಞಾನವನ್ನು ತಿಳಿಯುವುದಕ್ಕೆ ಪ್ರಥಮ, ಮಧ್ಯಮ, ಅಂತಿಮ ಎಂಬ ಮೂರು ಗ್ರಂಥಗಳನ್ನು ಮನುಷ್ಯರಿಗೆ ಕೊಡಬೇಕಾಗಿ ಬಂದಿದೆ. ದೊಡ್ಡ ಚಿಕ್ಕ ವಯಸ್ಸನ್ನನುಸರಿಸಿ ಮೂರು ವಿಧಗಳ ಗ್ಲಾಸುಗಳಲ್ಲಿ ಪಾನಕವನ್ನು ಕೊಟ್ಟರೂ ಕೆಲವರು ಕುಡಿಯಲಾರದೆ ಚೆಲ್ಲಿಕೊಂಡಹಾಗೆ, ಮನುಷ್ಯರಿಗೂ ಸಹ ಮೂರು ವಿಧಗಳ ಗ್ರಂಥಗಳಲ್ಲಿ ಜ್ಞಾನವನ್ನು ಕೊಟ್ಟರೂ ಅವರು ಜ್ಞಾನವನ್ನು ಗ್ರಹಿಸಿಕೊಳ್ಳದೇ ಪಾನಕವನ್ನು ಸ್ವಲ್ಪ ಕುಡಿದು ಸ್ವಲ್ಪ ಚೆಲ್ಲಿಕೊಂಡಹಾಗೆ, ಜ್ಞಾನವನ್ನೂ ಸಹ ಸ್ವಲ್ಪ ತಿಳಿದು, ಸ್ವಲ್ಪ ತಿಳಿಯಲಾರದೆ ಹೋಗುತ್ತಿದ್ದಾರೆ.

ಕೆಲವರು ನಡುಗುವ ರೋಗವಿರುವವರು ಗ್ಲಾಸಿನಲ್ಲಿರುವ ಎಲ್ಲಾ ಪಾನಕವನ್ನು ಕೆಳಗೆ ಚೆಲ್ಲಿಕೊಂಡು ಸ್ವಲ್ಪವೂ ಸಹ ಕುಡಿಯಲಾರದೆ ಹೋದಹಾಗೆ, ಕೆಲವರು ಮೆದುಳಿನಲ್ಲಿ ಸ್ಥಿರತ್ವ ಇಲ್ಲದವರು ಅವರ ಗ್ರಂಥಗಳಲ್ಲಿನ ಒಟ್ಟು ಜ್ಞಾನದಲ್ಲಿ ಸ್ವಲ್ಪವೂ ಸಹ ಅರ್ಥ ಮಾಡಿಕೊಳ್ಳಲಾರದೆ ಹೋಗುತ್ತಿದ್ದಾರೆ. ಅವರಿಗೆ ಗ್ರಂಥದಲ್ಲಿನ ಜ್ಞಾನ ಅರ್ಥವಾಗಲಿಲ್ಲವೆಂದು ಹೇಳಬಹುದು. ಮನೆಯಲ್ಲಿ ಕುಡಿಯುವ ಸಾಮರ್ಥ್ಯವನ್ನನುಸರಿಸಿ ದೊಡ್ಡ ಗ್ಲಾಸು, ಚಿಕ್ಕ ಗ್ಲಾಸು ಕೊಟ್ಟರೆ, ಪಾನಕವನ್ನು ಕುಡಿದವರು ಪಾನಕವನ್ನು ಕುರಿತು ಹೇಳದೆ ನನ್ನದು ದೊಡ್ಡ ಗ್ಲಾಸು ಪಾರ್ಟೀ, ನನ್ನದು ಚಿಕ್ಕ ಗ್ಲಾಸು ಪಾರ್ಟೀ ಎನ್ನುವಂತೆ ದೇವರು ಮನುಷ್ಯರ ಸಾಮರ್ಥ್ಯವನ್ನನುಸರಿಸಿ ಅವರಿಗೆ ಅರ್ಥವಾಗಬೇಕೆಂದು ಮೂರು ಗ್ರಂಥಗಳ ರೂಪದಲ್ಲಿ ಜ್ಞಾನವನ್ನು ತಿಳಿಸಿದರೇ, ಮನುಷ್ಯರು ಅದನ್ನು ಅರ್ಥ ಮಾಡಿಕೊಳ್ಳದೇ, ಮೂರು ಗ್ರಂಥಗಳನ್ನು ಆಧಾರ ಮಾಡಿಕೊಂಡು ಮೂರು ಮತಗಳನ್ನು ತಯಾರು ಮಾಡಿಕೊಂಡಿದ್ದಾರೆ. ಮೂರು ಮತಗಳಿಗೆ ಮೂವರು ಬೇರೆ ಬೇರೆ ದೇವತೆಗಳ ಹೆಸರುಗಳನ್ನು ಹೇಳಿಕೊಳ್ಳುತ್ತಿದ್ದಾರೆ. ಒಂದೇ ಪಾನಕವನ್ನು ಮೂವರಿಗೆಕೊಟ್ಟರೆ ಅದನ್ನು ಕುಡಿಯಲಾರದೆ ಕೆಳಗೆ ಚೆಲ್ಲಿಕೊಂಡು, ನಾವು ಪಾನಕವನ್ನು ಕುಡಿದಿದ್ದೇವೆ ಎಂದು ಅಸತ್ಯವನ್ನು ಹೇಳುತ್ತಾ, ನಾನು ಕುಡಿದಿರುವುದು ಉಪ್ಪು ಆಗಿದೆ ಎಂದು ಒಬ್ಬನು ಹೇಳಿದರೇ, ನಾನು ಕುಡಿದಿರುವುದು ವಗರಾಗಿ ಇದೆ ಎಂದು ಮತ್ತೊಬ್ಬನು ಅನ್ನುತ್ತಿದ್ದಾನೆ. ಅವರಿಗೆ ಕೊಟ್ಟಿರುವುದು ಬೆಲ್ಲದ ಪಾನಕವಾದಾಗ ಅದು ಸಿಹಿಯಾಗಿ ಇರುತ್ತದಾಗಲೀ, ಉಪ್ಪಾಗಿ, ವಗರಾಗಿ, ಹುಳಿಯಾಗಿ ಇರುವುದಕ್ಕೆ ಅವಕಾಶವಿಲ್ಲ ಅಲ್ಲವೆ! ಅಂತಹದರಲ್ಲಿ ಅವರು ಎಲ್ಲರೂ ಹೇಳುವುದು ಅಸತ್ಯವೆಂದು ಸುಲಭವಾಗಿ ತಿಳಿಯುತ್ತಿದೆ. ಅದೇ ವಿಧವಾಗಿಯೇ ಅವರಿಗೆ ಕೊಟ್ಟಿರುವುದು ಒಂದೇ ದೇವರ ಜ್ಞಾನವಾದಾಗ, ದೇವರು ಮೂವರಾಗಿ ಇದ್ದಾನೆ ಎಂದು ಅವರು ಅಂದಾಗ, ಅವರಿಗೆ ದೇವರ ಜ್ಞಾನ ಪೂರ್ತಿಯಾಗಿ ಅರ್ಥವಾಗಲಿಲ್ಲವೆಂದು ತಿಳಿದುಹೋಗುತ್ತಿದೆ.

ಮನುಷ್ಯರಿಗೆ ಜ್ಞಾನ ಚೆನ್ನಾಗಿ ಅರ್ಥವಾಗಬೇಕೆನ್ನುವ ಉದ್ದೇಶ್ಯದಿಂದ ದೇವರು ಮನುಷ್ಯ ರೂಪದೊಳಗೆ ಬಂದು, ಮನುಷ್ಯ ಭಾಷೆಯಲ್ಲೇ ಮಾತನಾಡಿ, ತನ್ನ ಜ್ಞಾನವನ್ನು ಹೇಳಿದರೂ, ಮನುಷ್ಯ ದೇವರುಕೊಟ್ಟಿರುವ ಜ್ಞಾನವನ್ನು ಸರಿಯಾಗಿ ಸ್ವೀಕರಿಸದೆ, ದೇವರು ಕೊಟ್ಟಿರುವ ಮೂರು ಗ್ರಂಥಗಳ ಜ್ಞಾನವನ್ನು ಮೂರು ಮತಗಳಾಗಿ ಏರ್ಪಡಿಸಿಕೊಂಡಿದ್ದಾನೆ. ಎಲ್ಲಾದರೂ ದೇವರ ಜ್ಞಾನ ಅರ್ಥವಾದವನು ಇದ್ದು ದೇವರು ಮತಗಳನ್ನು ಕುರಿತು ಹೇಳಲಿಲ್ಲವೆಂದು ಹೇಳಿದರೂ, ಅವನ ಮಾತನ್ನು ಯಾರೂ ಕೇಳದಂತೆ ಇದ್ದಾರೆ. ತಾವು ಅಜ್ಞಾನಿಗಳಾಗಿದ್ದು ಮತ ಎನ್ನುವುದು ಒಳ್ಳೆಯದಲ್ಲ ಎನ್ನುವವನನ್ನು ಅಜ್ಞಾನಿ ಎನ್ನುತ್ತಿದ್ದಾರೆ. ಒಂದೇ ಕುಟುಂಬದಲ್ಲಿ ಒಂದೇ ಬೆಲ್ಲದಿಂದ, ಒಂದೇ ಪಾತ್ರೆಯಲ್ಲಿ, ಒಂದೇ ರುಚಿಯಿರುವ ಪಾನಕವನ್ನು ತಯಾರು ಮಾಡಿ ಕುಟುಂಬದವರಿಗೆ ಕೊಟ್ಟರೇ, ಒಂದೇ ರುಚಿ ಇರುವ ಪಾನಕವನ್ನು ಬೇರೆಬೇರೆ ರುಚಿಗಳಲ್ಲಿ ಹೇಳಿದಂತೆ, ಒಂದೇ ಮನುಷ್ಯ ಸಮಾಜದಲ್ಲಿ ಒಂದೇ ದೇವರ ಜ್ಞಾನವನ್ನು ತಿಳಿಸಿದರೆ, ಅದನ್ನು ಸ್ವೀಕರಿಸಿದವರು ಅದರಲ್ಲಿನ ಒಂದೇ ದ್ವೈವತ್ವವೆನ್ನುವ ರುಚಿಯನ್ನು ತಿಳಿಯದೆ ಬೇರೆ ಬೇರೆ ರುಚಿಗಳಾಗಿ ಹೇಳುತ್ತಾ, ಬೇರೆಬೇರೆ ಮತಗಳಾಗಿ ಬದಲಾಗಿ, ಬೇರೆ ಬೇರೆ ದೇವತೆಗಳ ಹೆಸರು ಹೇಳಿಕೊಳ್ಳುವುದರಿಂದ, ಬೇರೆ ಬೇರೆ ಸಮಾಜಗಳಾಗಿ ಬದಲಾಗಿದ್ದಾರೆ. ಈದಿನ ಭೂಮಿಮೇಲಿರುವ ಪರಿಸ್ಥಿತಿಯನ್ನನುಸರಿಸಿ ಮನುಷ್ಯ ಮೂರು ಗ್ರಂಥಗಳಲ್ಲಿನ ದೇವರ ಜ್ಞಾನವನ್ನು ಯಾವ ಸ್ವಲ್ಪವೂ ಸಹ ಅರ್ಥ ಮಾಡಿಕೊಳ್ಳಲಿಲ್ಲವೆಂದು ತಿಳಿಯುತ್ತಿದೆ. ಮೂರು ಮತಗಳಾಗಿ ಸೀಳಿಹೋದ ಮನುಷ್ಯರು ಒಬ್ಬರಿಗೊಬ್ಬರು ನಾವು ದೊಡ್ಡ ಜ್ಞಾನಿಗಳೆಂದರೇ, ಅಲ್ಲ ನಿಮಗಿಂತ ನಾವೇ ದೊಡ್ಡ ಜ್ಞಾನಿಗಳೆಂದು ವಾದಿಸಿ ಕೊಳ್ಳುತ್ತಿದ್ದಾರೆ. ಅದರಿಂದ ಯಾರು ಜ್ಞಾನಿಗಳೋ, ಯಾರು ಅಜ್ಞಾನಿಗಳೋ ಅರ್ಥವಾಗದೆ, ನಾವು ಜ್ಞಾನಿಗಳೆಂದುಕೊಳ್ಳುತ್ತಾ ತಾರತಮ್ಯಗಳು ಇಲ್ಲದಂತೆ ಮಾತನಾಡುತ್ತಿದ್ದಾರೆ. **'ಮೊದಲು ಬಂದಿರುವ ಕಿವಿಗಳಿಗಿಂತ ಹಿಂದೆ ಬಂದಿರುವ ಕೋಡುಗಳು ನಾವೇ ದೊಡ್ಡವರು'** ಎನ್ನುವಂತೆ, ಮೊದಲು ಬಂದಿರುವ ಗ್ರಂಥಗಳಿಗಿಂತ ಹಿಂದೆ ಬಂದಿರುವ ಮತ ಜ್ಞಾನವೇ ದೊಡ್ಡದೆಂದು ಕೆಲವರನ್ನುತ್ತಿದ್ದಾರೆ.

ಈದಿನ ಭೂಮಿಮೇಲೆ ಮತ ಪ್ರಭಾವ ಹೆಚ್ಚಾಗಿಹೋಗಿ, ದೇವರ ಜ್ಞಾನಪ್ರಭಾವ ಕಡಿಮೆಯಾಗಿ ಹೋಗಿದೆ. ಮೂರು ಗ್ರಂಥಗಳಲ್ಲಿ ದೇವರ ಜ್ಞಾನ ಒಂದೇ ಇದ್ದರೂ, ಒಂದೊಂದು ಗ್ರಂಥವನ್ನು ಒಂದೊಂದು ಮತಗ್ರಂಥವಾಗಿ ಪ್ರಜೆಗಳು ಇಟ್ಟುಕೊಂಡಿದ್ದಾರೆ. ಅಂತಿಮ ದೈವ ಗ್ರಂಥವಾದ ಖುರ್‌ಆನ್‌ನನ್ನು ಮುಸ್ಲೀಮ್ ಮತ ಗ್ರಂಥವಾಗಿ ಪ್ರಪಂಚದಲ್ಲಿನ ಮುಸ್ಲೀಮ್‌ರೆಲ್ಲರೂ ಹೇಳಿಕೊಳ್ಳುತ್ತಿದ್ದಾರೆ. ಹಾಗೇ ಮಧ್ಯ ದೈವಗ್ರಂಥವಾದ ಬೈಬಿಲ್‌ನ್ನು ಕ್ರೈಸ್ತರು ತಮ್ಮ ಮತಗ್ರಂಥವಾಗಿ ಹೇಳಿಕೊಳ್ಳುವುದು ನಡೆಯುತ್ತಿದೆ. ಇನ್ನು ಹಿಂದುಗಳು ಕೆಲವರು ಭಗವದ್ಗೀತೆಯನ್ನು ತಮ್ಮ ಮತ ಗ್ರಂಥವಾಗಿ ಹೇಳಿಕೊಳ್ಳುತ್ತಿದ್ದಾರೆ. ಮೂರು ಗ್ರಂಥಗಳಲ್ಲಿ ಇಲ್ಲದ ಮತ ಪ್ರಸ್ತಾವನೆಯನ್ನು ಮನುಷ್ಯರು ಆ ಗ್ರಂಥಗಳಿಗೆ ಅತ್ತಗಟ್ಟಿದ್ದಾರೆ. ವಾಸ್ತವಕ್ಕೆ ಮೂರು ಗ್ರಂಥಗಳು ಸಮಸ್ತ ಮನುಷ್ಯರಿಗೂ ಹೇಳಲಾಗಿರುವ ಜ್ಞಾನವಾಗಿದ್ದು, ಆ ಗ್ರಂಥಗಳಲ್ಲಿ ಸಹ ಸಮಸ್ತ ಮನುಷ್ಯರಿಗಾಗಿ ಹೇಳಲಾಗಿರುವ ಜ್ಞಾನವಿದ್ದಹಾಗೆ ವಾಕ್ಯಗಳು ಸಹ ಇವೆ. ಆದರೇ ಮನುಷ್ಯರು ಮಾತ್ರ ಬೇರೆಬೇರೆ ಮತಗಳಾಗಿದ್ದು ಎಲ್ಲ ಮತಗಳಿಗಿಂತ ನಮ್ಮ ಮತವೇ ದೊಡ್ಡದೆಂದು ಎನ್ನುತ್ತಿದ್ದಾರೆ. ಒಂದು ಮತದಲ್ಲಿ ಇಲ್ಲದ ಜ್ಞಾನ ಮತ್ತೊಂದು ಮತದಲ್ಲಿ ಇದೆಯೆನ್ನುತ್ತಿದ್ದಾರೆ. ದೇವರು ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಹೇಳಿದ ಜ್ಞಾನವನ್ನೇ ಉಳಿದ ಎರಡು ಗ್ರಂಥಗಳಲ್ಲಿ ಹೇಳಿದ್ದಾನೆ. ಆದರೂ ಒಂದು ಮತದವರು ನಮ್ಮ ಜ್ಞಾನಬೇರೆ, ನಮ್ಮ ಮತಬೇರೆ, ನಮ್ಮ ಮತದಲ್ಲಿನ ದೇವರು ಬೇರೆ ಎಂದು ಎನ್ನುತ್ತಿದ್ದಾರೆ. ಈದಿನ ಭೂಮಿ ಮೇಲೆ ಮನುಷ್ಯರಲ್ಲಿರುವ ಜ್ಞಾನವನ್ನು ನೋಡಿದರೇ ದೇವರು ಹೇಳಿರುವುದಕ್ಕೂ ಮನುಷ್ಯರ ಹತ್ತಿರ ಇರುವುದಕ್ಕೂ ಯಾವ ಸಂಬಂಧವಿಲ್ಲ.

ಪ್ರಸ್ತುತ ಕಾಲದಲ್ಲಿ ಮುಖ್ಯವಾಗಿ ಮೂರು ಮತಗಳಿದ್ದರೂ ಮೊದಲ ಹಿಂದೂಮತ, ಕೊನೆಯ ಮುಸ್ಲೀಮ್‌ರ ಮತ ಎರಡೂ ಒಂದಕ್ಕೊಂದು ಹೆಚ್ಚಾಗಿ ವಿಮರ್ಶಿಸಿಕೊಳ್ಳುತ್ತಿವೆ. ಈ ಎರಡು ಮತಗಳವರಲ್ಲಿಯೂ ಜ್ಞಾನದಲ್ಲಿ ಮುಖ್ಯವಾಗಿ ಮೂರು ಅಭಿಪ್ರಾಯಬೇಧಗಳು ಇವೆ. ಒಂದು ದೇವರು ಮನುಷ್ಯನಾಗಿ

ಹುಟ್ಟುವುದಿಲ್ಲವೆಂಬ ವಿಷಯ, ಎರಡು ಮನುಷ್ಯ ಅನ್ಯದೇವತಾರಾಧನೆ, ವಿಗ್ರಹಾರಾಧನೆ ಮಾಡುತ್ತಿದ್ದಾನೆಂದು, ಮೂರು ಮನುಷ್ಯನಿಗೆ ಪುನರ್ಜನ್ಮಗಳು ಇಲ್ಲವೆಂದು ಅಭಿಪ್ರಾಯ ಬೇಧಗಳು ಹೊಂದಿದ್ದಾರೆ. ದೇವರನ್ನು ಬಿಟ್ಟು ಯಾರನ್ನು ಆರಾಧಿಸಿದರೂ ಅದು ಅನ್ಯದೇವತಾರಾಧನೆ ಆಗುತ್ತದೆಂದು ಮೂರು ಗ್ರಂಥಗಳಲ್ಲಿ ಇದೆ. ಆದರೇ ಹಿಂದೂಗಳು ಆ ಮಾತನ್ನು ಲೆಕ್ಕ ಮಾಡದೇ ಅನ್ಯದೇವತಾರಾಧನೆ ಮಾಡುತ್ತಿದ್ದಾರೆ. ಮುಸ್ಲೀಮ್‌ರು ಒಂದೇ ದೇವತಾರಾಧನೆಯಲ್ಲಿ ಇದ್ದಾರಾದ್ದರಿಂದ, ಭಗವದ್ಗೀತೆ ಪ್ರಕಾರವಾಗಲೀ, ಖುರ್‌ಆನ್ ಗ್ರಂಥದ ಪ್ರಕಾರವಾಗಲೀ, ಆರಾಧನೆ ವಿಷಯದಲ್ಲಿ ಮುಸ್ಲೀಮ್‌ರೇ ಸಕ್ರಮವಾಗಿ ಮಾತನಾಡುತ್ತಿದ್ದಾರೆ. ಒಂದು ವಿಧವಾಗಿ ಆರಾಧನಾ ವಿಷಯದಲ್ಲಿ ಹಿಂದೂಗಳೇ ದಾರಿ ತಪ್ಪಿ ಭಗವದ್ಗೀತೆಗೆ ವಿರುದ್ಧವಾಗಿ ನಡೆಯುತ್ತಿದ್ದಾರೆಂದು ಹೇಳಬಹುದು. ಎರಡನೆ ವಿಷಯವಾದ 'ದೇವರು ಮನುಷ್ಯನಾಗಿ ಹುಟ್ಟುವುದಿಲ್ಲ' ಎನ್ನುವುದನ್ನು ಮುಸ್ಲೀಮ್‌ರು ಹೆಚ್ಚಾಗಿ ವಾದಿಸುತ್ತಿದ್ದಾರೆ. ಹಿಂದೂಗಳು ದೇವರು ಮನುಷ್ಯ ಅವತಾರವಾಗಿ ಬರುತ್ತಾನೆಂದು ನಂಬುತ್ತಿದ್ದಾರೆ. ಈ ವಿಷಯದಲ್ಲಿ ಹಿಂದೂಗಳು ಸಕ್ರಮ ಜ್ಞಾನವನ್ನು ಪ್ರದರ್ಶಿಸುತ್ತಿರುವಾಗ, ಮುಸ್ಲೀಮ್‌ರು ಇತ್ತ ಭಗವದ್ಗೀತೆಗೂ ಅತ್ತ ಖುರ್‌ಆನ್ ಗ್ರಂಥಕ್ಕೂ ವಿರುದ್ಧವಾಗಿ ನಡೆಯುತ್ತಿದ್ದಾರೆ. ಮೂರನೆಯದಾದ ಪುನರ್ಜನ್ಮಗಳ ವಿಷಯದಲ್ಲಿ ಭಗವದ್ಗೀತೆಗೂ, ಖುರ್‌ಆನ್‌ಗೂ ವಿರುದ್ಧವಾಗಿ ಮುಸ್ಲೀಮ್‌ರು ಪುನರ್ಜನ್ಮಗಳು ಇಲ್ಲ ಎನ್ನುತ್ತಿದ್ದಾರೆ.

ಈ ರೀತಿ ದೈವಗ್ರಂಥಗಳಿಗೆ ವಿರುದ್ಧವಾಗಿ ಕೆಲವು ಮತಗಳ ಮನುಷ್ಯರು ಪ್ರವರ್ತಿಸುತ್ತಿದ್ದಾರೆ. ಇದು ನಮ್ಮ ಗ್ರಂಥ ಎಂದು ಹೇಳುವ ಹಿಂದೂಗಳು ಕೆಲವು ವಿಷಯಗಳಲ್ಲಿ ಭಗವದ್ಗೀತೆಗೆ ವಿರುದ್ಧವಾಗಿ ಪ್ರವರ್ತಿಸುತ್ತಿದ್ದಾರೆ. ಹಾಗೇ ಇದು ನಮ್ಮ ಗ್ರಂಥವೆಂದು ಖುರಾನ್ ಗ್ರಂಥದ ಹೆಸರು ಹೇಳುವ ಮುಸ್ಲೀಮ್‌ರು ಸಹ ಕೆಲವು ವಿಷಯಗಳಲ್ಲಿ ಖುರ್‌ಆನ್‌ನಲ್ಲಿನ ಆಯತ್‌ಗಳಿಗಿಂತ, ಅವರ ಮತ ಹಿರಿಯರು ಹೇಳಿದ ಮತ ನಿರ್ಣಯಗಳನ್ನೇ ದೊಡ್ಡದಾಗಿ ಇಟ್ಟುಕೊಂಡಿದ್ದಾರೆ. ಕ್ರೈಸ್ತರೂ ಸಹ ಎಲ್ಲರೂ ಏಸು ಹೇಳಿದ ಜ್ಞಾನದ ಪ್ರಕಾರ

ನಡೆಯದೇ, ಅವರು ಮತ ವ್ಯಾಪ್ತಿಗಾಗಿಯೇ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಡುತ್ತಿದ್ದಾರೆ. ಒಟ್ಟಾರೆ ಎಲ್ಲ ಮತಗಳವರು ಕೆಲವರು ಹೆಚ್ಚಾಗಿ, ಕೆಲವರು ಕಡಿಮೆಯಾಗಿ ದೈವಗ್ರಂಥಗಳನ್ನು ಅತಿಕ್ರಮಿಸಿ ನಡೆಯುತ್ತಿದ್ದಾರೆ. ಆದರೇ ಮೂರು ಮತಗಳವರೂ ನಾವು ನಮ್ಮ ಗ್ರಂಥದಲ್ಲಿ ದೇವರು ಹೇಳಿದಂತೇ ನಡೆಯುತ್ತಿದ್ದೇವೆಂದು ಹೇಳಿಕೊಳ್ಳುತ್ತಾ ಅವರಿಗೆ ತಿಳಿಯದಂತೇ ಅವರು ದೇವರಿಗೂ, ದೇವರ ಜ್ಞಾನಕ್ಕೂ, ದೈವ ಗ್ರಂಥಕ್ಕೂ ವಿರುದ್ಧ ದಿಶೆಯಲ್ಲಿ ಪ್ರಯಾಣಿಸುತ್ತಿದ್ದಾರೆ. ಗುಲಗಂಜಿ ನಾನೆಷ್ಟು ಕೆಂಪಾಗಿ ಇದ್ದೇನೆಂದು ಅಂದುಕೊಳ್ಳುತ್ತಾ ತನ್ನ ಕೆಳಗಿರುವ ಕಪ್ಪನ್ನು ತಿಳಿಯದಂತೆ, ದೈವಗ್ರಂಥವನ್ನು ಅರ್ಥ ಮಾಡಿಕೊಳ್ಳದ ಪ್ರತಿ ಮತಸ್ಥನು ತನ್ನಲ್ಲಿ ಅಡಗಿರುವ ಅಜ್ಞಾನವನ್ನು ತಿಳಿಯಲಾರದೆ ನಾನು ನಿಜವಾದ ಜ್ಞಾನಿಯೆಂದೂ, ನಾನು ಸಂಪೂರ್ಣ ಜ್ಞಾನಿಯೆಂದೂ, ನಾನು ಸ್ವಚ್ಛವಾದ ಜ್ಞಾನಿಯೆಂದೂ, ನಾನು ದೇವರಿಗೆ ಹತ್ತಿರದಲ್ಲಿರುವವನೆಂದು ಅಂದುಕೊಳ್ಳುತ್ತಿದ್ದಾನೆ. ತನ್ನ ಅಜ್ಞಾನ ತನಗೆ ತಿಳಿಯದೇ ಹೋಗುವುದರಿಂದ, ನಾನು ಸಂಪೂರ್ಣ ಜ್ಞಾನಿಯೆಂದು ಅಂದುಕೊಳ್ಳುವು ದರಿಂದ, ಇತರರು ಜ್ಞಾನವನ್ನು ಹೇಳಿದರೂ ಕೇಳುವ ಸ್ಥಿತಿಯಲ್ಲಿ ಇಲ್ಲದಿದ್ದಾನೆ. ಹಾಗೇ ದೈವ ಗ್ರಂಥಗಳ ಮೇಲೆ ದೃಷ್ಠಿಇಟ್ಟು ನೋಡದಿದ್ದಾನೆ.

ಪ್ರತಿ ಮನುಷ್ಯನಲ್ಲಿ ಆರು ಕೆಟ್ಟ ಗುಣಗಳು, ಆರು ಒಳ್ಳೆಯ ಗುಣಗಳು ಇರುತ್ತವೆ. ಒಟ್ಟು ಹನ್ನೆರಡು ಗುಣಗಳನ್ನು 'ಮಾಯೆ' ಎಂದು ದೆವರು ತನ್ನ ಪ್ರಥಮ ದೈವಗ್ರಂಥದಲ್ಲಿ ವಿಜ್ಞಾನಯೋಗದಲ್ಲಿ 14ನೇ ಶ್ಲೋಕದಲ್ಲಿ "ಗುಣಮಯೀ ಮಮ ಮಾಯಾ" ಎಂದು ಹೇಳಿದ್ದಾನೆ. ಪ್ರತಿ ಮನುಷ್ಯನಲ್ಲಿ ಅವನ ತಲೆಯಲ್ಲಿ ಮೆದುಳಿನಲ್ಲಿ ನಿಕ್ಷಿಪ್ತವಾಗಿ ಯಾರಿಗೂ ತಿಳಿಯದಂತೆ ಇರುವ ನಾಲ್ಕು ಚಕ್ರಗಳ ಸಮುದಾಯದಲ್ಲಿ ಕೆಳಗಿನ ಚಕ್ರದಲ್ಲಿ ಮಾಯೆ ಎನ್ನುವುದು ಗುಣಗಳ ರೂಪದಲ್ಲಿದೆ. ಅದರಲ್ಲಿ ಕೆಟ್ಟ ಗುಣಗಳ ವರಸೆಯಲ್ಲಿರುವ ಗರ್ವ ಎಂಬ ಗುಣ ಮನುಷ್ಯನನ್ನು ಜ್ಞಾನ ವಿಷಯಗಳಲ್ಲಿ ನೀನೇ ದೊಡ್ಡ ಜ್ಞಾನಿ ಎಂದು ಗರ್ವಪಡುವಂತೆ ಮಾಡುತ್ತಿರುತ್ತದೆ. ಆಗ ತನ್ನಲ್ಲಿರುವ ಮಾಯೆ ಮೇಲೆ ಸ್ಪೃಹ ಇಲ್ಲದ ಮನುಷ್ಯ,

ಗರ್ವದಿಂದ ನಾನೇ ಜ್ಞಾನಿಯೆಂದು ನನ್ನನ್ನು ಮೀರಿದ ಜ್ಞಾನಿ ಇಲ್ಲವೆಂದು ಅಂದುಕೊಳ್ಳುತ್ತಿರುತ್ತಾನೆ. ಅಂತಹವನಿಗೆ ಮನುಷ್ಯ ರೂಪದಲ್ಲಿರುವ ದೇವರು ಎದುರಾದರೂ ಅವನ ದೃಷ್ಟಿಯಲ್ಲಿ ಕಡಿಮೆಯಾಗಿಯೇ ಕಾಣಿಸುತ್ತದೆ. ಅಂತಹವನಿಗೆ ಮನುಷ್ಯನಾಗಿರುವ ದೇವರು ಅವನಲ್ಲಿನ ಅಜ್ಞಾನವನ್ನು ತೆಗೆದುಹಾಕುವುದಕ್ಕೆ ಜ್ಞಾನ ಹೇಳಿದರೂ, ಅವನು ಹೇಳನವಾಗಿ ಮಾತನಾಡುತ್ತಾ ನೀನು ಜ್ಞಾನಿಯಾ, ನಿನಗೆ ಜ್ಞಾನ ತಿಳಿದಿದೆಯಾಯೆಂದು ಲೆಕ್ಕ ಮಾಡದೇ ಮಾತನಾಡುತ್ತಾನೆ. ಈದಿನ ಒಂದು ಮತದವನು ಮತ್ತೊಂದು ಮತ ಗ್ರಂಥವಾಗಿರುವ ದೈವಗ್ರಂಥವನ್ನು ಹೇಳನವಾಗಿ ಮಾತನಾಡುತ್ತಿದ್ದಾನೆ. ಆ ಮತ ಗ್ರಂಥದಲ್ಲಿ ಜ್ಞಾನವನ್ನು ಹೇಳಿದ ವಕ್ತನನ್ನು ಕೇವಲವಾಗಿ ಮಾತ ನಾಡುತ್ತಿದ್ದಾರೆ. ಒಬ್ಬ ಹಿಂದೂ ಇತರ ಮತ ಜ್ಞಾನವನ್ನು, ಆ ಮತ ಗ್ರಂಥವನ್ನು ವಿಮರ್ಶಿಸಿ ಮಾತನಾಡಿದರೇ, ಒಬ್ಬ ಮುಸ್ಲೀಮ್ ಇತರ ಮತದಲ್ಲಿನ ಜ್ಞಾನವನ್ನು ವಿಮರ್ಶಿಸಿ ಮಾತನಾಡುತ್ತಿದ್ದಾನೆ. ಯಾವಾಗಾದರೇ ಮತಗಳು ಬೇರೆ, ಮತ ಜ್ಞಾನಗಳು ಬೇರೆ ಎಂಬ ಭಾವ ಮನುಷ್ಯನಲ್ಲಿ ಹುಟ್ಟಿದೆಯೋ, ಆಗಲೇ ಆ ಮನುಷ್ಯ ಈ ಮತ ಆ ಮತ ಎನ್ನದೇ, ಯಾವನ ಮತವನ್ನು ಅವನು ದೊಡ್ಡದಾಗಿ ಹೇಳಿಕೊಳ್ಳುತ್ತಾ, ಇತರ ಮತಗಳನ್ನು ಹೀಯಾಳಿಸಿ ಮಾತನಾಡುತ್ತಾನೆ. ಆಗ ಮನುಷ್ಯನಲ್ಲಿನ ಮಾಯ ಕೆಲಸ ಮಾಡುತ್ತಾ ಎಲ್ಲ ಮತಗಳಲ್ಲಿ ಇರುವುದು ಒಂದೇ ದೇವರ ಜ್ಞಾನವೆಂದು ಮನುಷ್ಯನಿಗೆ ತಿಳಿಯದಂತೆ ಮಾಡಿದೆಯೆಂದು ಹೇಳಬಹುದು.

ಶರೀರಾಂತರ್ಗತದಲ್ಲಿರುವ ಮಾಯೆ ವಿಷಯ ತಿಳಿಯದ ಮನುಷ್ಯ ಹೊರಗಿನ ಪ್ರಪಂಚದಲ್ಲಿ ಎಷ್ಟೋ ದೊಡ್ಡ ಜ್ಞಾನಿಯಾಗಿ ಕಾಣಿಸಿದರೂ, ಒಳಗಿನ ಪ್ರಪಂಚವಾದ ಶರೀರದಲ್ಲಿ ಅಜ್ಞಾನ ದಾರಿಯಲ್ಲಿ ನಡೆಯುತ್ತಿರುತ್ತಾನೆ. ಆಗ ತನಗೆ ತಿಳಿದ ಜ್ಞಾನಕ್ಕೆ ಅಂದರೆ ದೈವ ಗ್ರಂಥದಿಂದ ತನಗೆ ಅರ್ಥವಾದ ಜ್ಞಾನಕ್ಕೆ ಯಾರು ಬೇರೆಯಾಗಿ ಮಾತನಾಡಿದರೂ ಆತನು ಈತನ ಮನೋಭಾವಕ್ಕೆ ಸರಿಹೋಗುವುದಿಲ್ಲ. ಅಲ್ಲೇ ಆಗಲೇ ಎದುರಿಗಿರುವವನು ನಿಜವಾದ ಜ್ಞಾನವನ್ನು ಹೇಳುತ್ತಿದ್ದರೂ, ತನಗೆ ಅರ್ಥವಾಗುವಂತೆ ಇಲ್ಲದೇ ಹೋಗುವುದರಿಂದ ಅವನು

ಹೇಳುವುದು ಸರಿಯಾದುದಾ, ಅಲ್ಲವಾಯೆಂದು ನೋಡದೇ, ತನಗೆ ವಿರೋಧಿಯಾಗಿಯೇ ಭಾವಿಸಿಕೊಳ್ಳುತ್ತಾನೆ. ಮನುಷ್ಯನಲ್ಲಿನ ಗರ್ವ ಎಂಬ ಗುಣ ಕೆಲಸ ಮಾಡುವುದರಿಂದ ತಾನು ತಿಳಿದುಕೊಂಡ ಜ್ಞಾನದಲ್ಲಿ ಲೋಪವಿದ್ದರೂ, ಇತರರು ಹೇಳುವ ಜ್ಞಾನದಲ್ಲಿ ಲೋಪವಿಲ್ಲದಿದ್ದರೂ ತನ್ನದೇ ಸರಿಯಾದ ಜ್ಞಾನವೆಂದು ತಿಳಿದ ಮನುಷ್ಯ ಎದುರಿಗಿರುವವನ ಮೇಲೆ ದ್ವೇಷವನ್ನು ಬೆಳಸಿಕೊಳ್ಳುತ್ತಾ ಬರುತ್ತಾನೆ. ಮನುಷ್ಯನ ಶರೀರದಲ್ಲಿ ಆರು ಕೆಟ್ಟ ಗುಣಗಳಲ್ಲಿ ಐದನೆಯದು ಗರ್ವ ಆದಾಗ, ಆರನೆಯದು ಅಸೂಯೆ. ಮನುಷ್ಯನಲ್ಲಿ ಮೊದಲು ಗರ್ವ ಹುಟ್ಟಿದ ನಂತರ ತಾನೇ ದೊಡ್ಡವನೆಂದುಕೊಂಡು, ತನಗೆ ಪೋಟಿಯಾಗಿ ಹೇಳುವವನಮೇಲೆ ಆರನೆಯ ಗುಣವಾದ ಅಸೂಯೆಯನ್ನು ಬೆಳಸಿಕೊಳ್ಳುತ್ತಾನೆ. ಅಸೂಯೆ ಬೆಳೆದಮತೆಲ್ಲಾ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಆರು ಗುಣಗಳಲ್ಲಿ ಎರಡನೆಯದಾದ ಕ್ರೋಧ ಬೆಳೆಯುತ್ತದೆ. ಈ ವಿಧವಾಗಿ ಮನುಷ್ಯ ತಲೆಯಲ್ಲಿನ ಮಾಯೆ ಮೊದಲು ಗರ್ವ (ಮದ) ಎರಡನೆಯ ಬಾರಿ ಅಸೂಯೆ (ಮತ್ಸರ) ಮೂರನೆಯ ಬಾರಿ ಕೋಪ (ಕ್ರೋಧ) ಎಂಬ ರೂಪದಲ್ಲಿ ಬೆಳೆದು ದೊಡ್ಡದಾಗಿ ಇತರ ಮನುಷ್ಯನನ್ನು ಹಿಂಸಿಸಿ ಸಾಯಿಸುವಹಾಗೆ ಮಾಡುತ್ತಿದೆ. ಆದ್ದರಿಂದ ಯಾವ ಮತದಲ್ಲಾದರೂ, ಆ ಮತ ಗ್ರಂಥ ಜ್ಞಾನ ಸರಿಯಾಗಿ ಅರ್ಥವಾಗದೆಹೋಗಿ ತಪ್ಪು ಭಾವಗಳಿಂದ ಅರ್ಥವಾದರೇ, ಇತರ ಮತಗಳೆಲ್ಲವೂ ಅಜ್ಞಾನ ಮತಗಳೆಂದು, ತನ್ನ ಮತ ಮಾತ್ರವೇ ಜ್ಞಾನವಿರುವ ಮತವೆಂದು ಭಾವಿಸಲಾಗುತ್ತದೆ. ಆಗ ಇತರ ಮತಗಳ ಮೇಲೆ ಇತರ ಮತಸ್ಥರ ಮೇಲೆ ಅಸೂಯೆ ಬೆಳೆದು ಅದು ದ್ವೇಷಕ್ಕೆ ದಾರಿ ತೋರಿಸಿ, ದ್ವೇಷ ಬೆಳೆದುಹೋಗಿ, ಕೊನೆಗೆ ಹಿಂಸಾಕಾರ್ಯಗಳಿಗೆ ದಾರಿ ತೆಗೆಯುತ್ತದೆ. ಕೊನೆಗೆ ಅಜ್ಞಾನದಿಂದ ಮನುಷ್ಯನಲ್ಲಿ ಮತದ್ವೇಷ ಬೆಳೆದು ಅಲ್ಲೇ ಇತರರನ್ನು ಹಿಂಸಿಸಬೇಕೆಂಬ ಉಗ್ರವಾದ ಬೀಜ ಹುಟ್ಟುತ್ತಿದೆ. ಇದು ಒಂದು ಮತದಲ್ಲಿಯೇ ನಡೆಯುವುದಲ್ಲ. ಎಲ್ಲ ಮತಗಳಲ್ಲಿ ಎಲ್ಲಾದರೂ ಇದೇ ಪದ್ಧತಿಯಿಂದ ನಡೆಯುತ್ತದೆ. ಯಾರಿಗಾದರೆ ಮತ ಧ್ಯಾಸ ಹೆಚ್ಚಾಗಿದೆಯೋ ಅವರಲ್ಲಿ ಅಜ್ಞಾನ ಬೆಳೆದುಹೋಗಿ, ಕೊನೆಗೆ ಮಾಯೆ ಪ್ರಭಾವದಿಂದ ಉಗ್ರವಾದ ಹುಟ್ಟುತ್ತಿದೆ.

ನಮಗೆ ಮುಖ್ಯವಾದವು ಮೂರು ಮತಗಳು ಇವೆ. ಅವು ಹಿಂದೂ, ಕ್ರೈಸ್ತವ, ಇಸ್ಲಾಮ್ ಮತಗಳು. ಈ ಮೂರರಲ್ಲಿ ಸಂಖ್ಯೆಯಲ್ಲಿ ಕ್ರೈಸ್ತವ ಮತ ದೊಡ್ಡದಾಗಿದೆ. ಎರಡನೆಯದು ಇಸ್ಲಾಮ್ ಮತ, ಮೂರನೆಯದು ಹಿಂದೂ ಮತ. ಇದಿನ ಕ್ರೈಸ್ತರು ಪ್ರಪಂಚವ್ಯಾಪ್ತವಾಗಿ ಸುಮಾರು 210 ಕೋಟಿ ಜನಸಂಖ್ಯೆ ಇದ್ದಾರೆ. ಮುಸ್ಲೀಮ್‌ರು 162 ಕೋಟಿ ಜನಸಂಖ್ಯೆ ಇದ್ದಾರೆ, ಹಿಂದೂಗಳು ಸುಮರು 100 ಕೋಟಿ ಜನಸಂಖ್ಯೆ ಇದ್ದಾರೆಂದು ಹೇಳಬಹುದು. ಈ ದಿನ ಮೂರನೆಯ ಸ್ಥಾನದಲ್ಲಿರುವ ಹಿಂದೂಮತ ಒಂದು ಕಾಲದಲ್ಲಿ ಅಂದರೆ ಎರಡುಸಾವಿರ ಸಂವತ್ಸರಗಳ ಪೂರ್ವದಲ್ಲಿ ಮೊದಲ ಸ್ಥಾನದಲ್ಲಿ ಇತ್ತು. ಎರಡು ಸಾವಿರ ಸಂವತ್ಸರಗಳ ಸಮಯದಲ್ಲಿ ಪ್ರಾರಂಭವಾದ ಕ್ರೈಸ್ತವ ಮತ ತನ್ನ ಮತ ಜ್ಞಾನವನ್ನು ಪ್ರಚಾರ ಮಾಡಿ ಮತವನ್ನು ಬೆಳಸಿಕೊಂಡಿದೆ. 14 ನೂರು ಸಂವತ್ಸರಗಳ ಸಮಯದಲ್ಲಿ ಹುಟ್ಟಿದ ಇಸ್ಲಾಮ್ ಮತವೂ ಸಹ ಹಿಂದೂ ಮತವನ್ನು ಮೂರನೇ ಸ್ಥಾನದೊಳಗೆ ತಳ್ಳಿ ಎರಡನೆ ಸ್ಥಾನದಲ್ಲಿದೆ. ಈ ಮೂರು ಮತಗಳು ಹುಟ್ಟಿದ ಕಾಲವನ್ನನುಸರಿಸಿ, ಬೆಳೆದ ಸಂಖ್ಯೆಯನ್ನನುಸರಿಸಿ ಲೆಕ್ಕಿಸಿ ನೋಡಿದರೇ ಹಿಂದೂಗಳಿಗೆ ಮತದ ಮೇಲೆ ದೊಡ್ಡದಾಗಿ ಧ್ಯಾಸ ಇಲ್ಲವೆಂದು, ಅವರಿಗೆ ಭಕ್ತಿ ಮೇಲೆ ಶ್ರದ್ಧೆ ಇದೆಯೆಂದು ತಿಳಿಯುತ್ತಿದೆ. ಉಳಿದ ಎರಡು ಮತಗಳಿಗೂ ಮತದ ಮೇಲೆ ಶ್ರದ್ಧೆ ಇರುವುದರಿಂದ, ಆ ಎರಡು ಮತಗಳು ಮುಂದಿರುವ ಹಿಂದೂ ಮತವನ್ನು ಹಿಂದಕ್ಕೆ ತಳ್ಳಿ ಮುಂದಕ್ಕೆ ಹೋಗುತ್ತಿವೆ. 2000 ಸಂವತ್ಸರಗಳ ಸಮಯದಲ್ಲಿ ಹುಟ್ಟಿದ ಕ್ರೈಸ್ತವ ಮತ ಈದಿನ ಸಂಖ್ಯೆಯಲ್ಲಿ 210 ಕೋಟಿಗಳಿರುವಾಗ, 1400 ಸಂವತ್ಸಗಳ ಸಮಯದಲ್ಲಿ ಹುಟ್ಟಿದ ಮುಸ್ಲೀಮ್ ಈದಿನ 162 ಕೋಟಿ ಜನಸಂಖ್ಯೆ ಹೊಂದಿದೆ. ಈ ಸಂಖ್ಯೆಯನ್ನನುಸರಿಸಿ ಯಾವ ಮತದವರು ತಮ್ಮ ಜ್ಞಾನದ ಮೇಲೆ ಶ್ರದ್ಧೆಯನ್ನು ಕಡಿಮೆ ಮಾಡಿ, ಮತದ ಮೇಲೆ ಶ್ರದ್ಧೆಯನ್ನು ಇಟ್ಟು ಮತವನ್ನು ಬೆಳಸಿಕೊಳ್ಳುತ್ತಿದ್ದಾರೆಂದು ನೋಡಿದರೂ, ಕ್ರೈಸ್ತವ ಮತಕ್ಕಿಂತಲೂ ವೇಗವಾಗಿ ಮುಸ್ಲೀಮ್ ಮತವೇ ತಮ್ಮ ಮತ ಸಂಖ್ಯೆಯನ್ನು ಬೆಳಸಿಕೊಳ್ಳುತ್ತಿದೆಯೆಂದು ತಿಳಿಯುತ್ತಿದೆ.

2000 ಸಂವತ್ಸರಗಳಿಂದ ಇರುವ ಕ್ರೈಸ್ತವಮತ ಒಂದು ಸಂವತ್ಸರಕ್ಕೆ 10,50,000 ಜನರನ್ನು ಕ್ರೈಸ್ತವರಾಗಿ ಬದಲಾಯಿಸಿಕೊಳ್ಳುವುದರಿಂದ ಇಂದಿಗೂ 210 ಕೋಟಿ ಜನಸಂಖ್ಯೆಯಾಗಿದೆ. 1400 ಸಂವತ್ಸರಗಳ ಸಮಯದಲ್ಲಿ ತಯಾರಾದ ಇಸ್ಲಾಮ್ ಮತ ಒಂದು ಸಂವತ್ಸರಕ್ಕೆ 11,45,000 ಜನರನ್ನು ತನ್ನ ಮತಸ್ಥರಾಗಿ ಬದಲಾಯಿಸಿಕೊಳ್ಳುವುದರಿಂದ ಇಂದಿಗೆ 162 ಕೋಟಿ ಜನಸಂಖ್ಯೆಯಾಗಿದೆ. ಇದು ಆಯಾ ಮತಗಳಲ್ಲಿ ಹುಟ್ಟುವವರ ಸಂಖ್ಯೆಯೊಂದಿಗೆ ಸೇರಿಸಿಕೊಂಡು ಹೇಳುತ್ತಿದ್ದೇವೆ. ಈ ಲೆಕ್ಕದ ಪ್ರಕಾರ ಕ್ರೈಸ್ತವಮತಕ್ಕಿಂತಲೂ ಇಸ್ಲಾಮ್ ಮತವೇ ಬಹಳ ವೇಗವಾಗಿ ಮತವನ್ನು ಬೆಳೆಸಿಕೊಳ್ಳುತ್ತಾ ಹೋಗುತ್ತಿದೆಯೆಂದು ತಿಳಿಯುತ್ತಿದೆ. 5000 ಸಂವತ್ಸರಗಳ ಪೂರ್ವದಲ್ಲಿ ಪ್ರಪಂಚ ವ್ಯಾಪ್ತವಾಗಿ 300 ಕೋಟಿ ಜನಸಂಖ್ಯೆ ಇರುವ ಹಿಂದೂಮತವು ಈದಿನ 100 ಕೋಟಿಗೆ ಇಳಿದುಹೋಗಿದೆಯೆಂದರೆ ಪ್ರತಿ ಸಂವತ್ಸರ 4 ಲಕ್ಷ ಜನರು ಹಿಂದೂಗಳು ಕಡಿಮೆಯಾಗುತ್ತಾ ಬಂದಿದ್ದಾರೆಂದು ತಿಳಿಯುತ್ತಿದೆ. ಆದ್ದರಿಂದ ಹಿಂದೆ ಹುಟ್ಟಿರುವ ಎರಡು ಮತಗಳಿಗಿಂತ ಮೊದಲು ಹುಟ್ಟಿದ ಹಿಂದೂಮತವೇ ಪೂರ್ತಿ ಹಿಂದುಳಿದು, ಮೂರನೆ ಸ್ಥಾನದೊಳಗೆ ಬಂದಿದೆ. ಪ್ರಸ್ತುತ ಕಾಲದಲ್ಲಿ ಕ್ರೈಸ್ತರು, ಮುಸ್ಲೀಮ್‌ರು ತಮ್ಮ ಮತಗಳನ್ನು ಬೆಳೆಸಿಕೊಳ್ಳುವ ಧ್ಯಾಸೆಯಲ್ಲಿದ್ದು ಅವರ ಗ್ರಂಥಗಳ ಜ್ಞಾನಕ್ಕಿಂತ ಮತದಮೇಲೆಯೇ ಹೆಚ್ಚಿನ ಶ್ರದ್ಧೆಯನ್ನು ಇಟ್ಟುಕೊಂಡಿದ್ದಾರೆ. ಇಂದು ಕ್ರೈಸ್ತರಿಗಿಂತ ಹೆಚ್ಚಾಗಿ ಮುಸ್ಲೀಮ್‌ರೇ ಮತವನ್ನು ಬೆಳೆಸುವ ಪ್ರಯತ್ನ ಮಾಡುತ್ತಿದ್ದಾರೆಂದು ಬಹಿರಂಗವಾಗಿಯೇ ತಿಳಿಯುತ್ತಿದೆ. ಈದಿನ ಮುಸ್ಲೀಮ್‌ರು ತಮ್ಮ ಮತವನ್ನು ಬೆಳೆಸುವುದಕ್ಕೆ ಹೊಸ ಪಥಕಗಳನ್ನು ಅವಲಂಭಿಸುತ್ತಿದ್ದಾರೆ. ಕಳೆದ 50 ಸಂವತ್ಸರಗಳಿಗಿಂತ ಈ ಮಧ್ಯ ಕಾಲದಲ್ಲಿ ಮತವ್ಯಾಪ್ತಿಗಾಗಿ ತಮ್ಮ ವೇಗವನ್ನು ಬೆಳೆಸಿದ್ದಾರೆ. ಗತದಲ್ಲಿರುವ ವೇಗದ ಪ್ರಕಾರವಾದರೇ ಕ್ರೈಸ್ತರ ಸಂಖ್ಯೆಯನ್ನು ದಾಟುವುದಕ್ಕೆ ಕನಿಷ್ಟ 50 ಸಂವತ್ಸರಗಳು ಬೇಕಾಗುತ್ತದೆ. ಆದ್ದರಿಂದ ಅಷ್ಟು ಕಾಲ ಇಲ್ಲದಂತೆ 20 ಸಂವತ್ಸರಗಳಲ್ಲಿ ಕ್ರೈಸ್ತರ ಸಂಖ್ಯೆಯನ್ನು ಅಧಿಕಗೊಳಿಸಬೇಕೆಂಬ ಯೋಚನೆಯೊಂದಿಗೆ ಅನೇಕ ವಿಧಗಳ ವೇಗವನ್ನು ಬೆಳೆಸಿ ತಮ್ಮ ಮತವನ್ನು ವಿಸ್ತಾರ ಮಾಡಬೇಕೆಂದುಕೊಂಡಿದ್ದಾರೆ.

ಕ್ರೈಸ್ತವರು ಮತವನ್ನು ವ್ಯಾಪ್ತಿ ಮಾಡಬೇಕೆಂದು ಮಾಡುತ್ತಿದ್ದರೂ, ಅವರು ಒಂದು ಪದ್ಧತಿಯಾಗಿ ಮತ ಪ್ರಚಾರವನ್ನು ಮಾಡುತ್ತಿದ್ದಾರೆ. ಎಲ್ಲಿ ಕ್ರೈಸ್ತವ ಮತವನ್ನು ಪ್ರಚಾರ ಮಾಡಿದರೂ, ಅಲ್ಲಿ ಬೈಬಲ್ ಗ್ರಂಥದಲ್ಲಿನ ಜ್ಞಾನವನ್ನು ಹೇಳಿ, ತಮ್ಮ ಜ್ಞಾನದ ಕಡೆ ಆಕರ್ಷಿತರನ್ನಾಗಿ ಮಾಡಿ, ಇತರರನ್ನು ಕ್ರೈಸ್ತವರಾಗಿ ಬದಲಾಯಿಸುತ್ತಿದ್ದಾರೆ. ಕ್ರೈಸ್ತವರು ಮತಮಾರ್ಪಾಟು ಮಾಡಿದರೂ, ಅವರು ಬೈಬಲ್ ಜ್ಞಾನವನ್ನು ತೋರಿಸಿ, ತಮ್ಮ ಜ್ಞಾನಕ್ಕೆ ಇತರ ಮತಸ್ಥರನ್ನು ಆಕರ್ಷಿತರಾಗಿ ಮಾಡಿ, ಅವರ ಇಷ್ಟದಿಂದ ಅವರು ತಮ್ಮ ಮತದೊಳಗೆ ಬರುವಹಾಗೆ ಮಾಡುತ್ತಿದ್ದಾರೆ. ಅಷ್ಟೇ ಹೊರತು ಮತವನ್ನು ದೊಡ್ಡದಾಗಿ ಹೇಳಿಕೊಳ್ಳುವುದಕ್ಕಾಗಿ ಎಲ್ಲಿಯಾಗಲೀ ಹಿಂಸಾ ಪದ್ಧತಿಗಳನ್ನು ಅವಲಂಬಿಸಲಿಲ್ಲ. ಆದರೇ ತಮ್ಮ ಮತದಲ್ಲಿನ ಜ್ಞಾನ ದೊಡ್ಡದೆಂದು, ಹಿಂದೂಗಳ ಜ್ಞಾನ ಕಡಿಮೆಯೆಂದು ಭಾರತದೇಶದಲ್ಲಿ ಪ್ರಚಾರ ಮಾಡಿ, ತಮ್ಮ ಮತದಲ್ಲಿನ ದೊಡ್ಡತನವನ್ನು ಪ್ರಚಾರ ಮಾಡಿ ಹಿಂದೂಗಳನ್ನು ಹೆಚ್ಚಾಗಿ ಆಕರ್ಷಿಸಿ ತಮ್ಮ ಮತದಲ್ಲಿ ಸೇರಿಸಿಕೊಂಡ ಮಾತು ವಾಸ್ತವವೇ, ಆದರೂ ಅವರು ಹಿಂಸಾ ಪದ್ಧತಿಯನ್ನು ಎಲ್ಲೂ ಅವಲಂಬಿಸಲಿಲ್ಲ. ಎಲ್ಲಿ ಕ್ರೈಸ್ತರ ಮತ ಪ್ರಚಾರವಿದ್ದರೂ ಅಲ್ಲಿ ಅವರ ಗ್ರಂಥದಲ್ಲಿನ ವಾಖ್ಯಗಳು ಸ್ವಲ್ಪ ಹೇಳುವುದು, ಹೆಚ್ಚಾಗಿ ಆ ಮತದಲ್ಲಿ ಸೇರಿದವರಿಗೆ ಅವರ ಪಾಪಗಳು ಹೋಗುವವೆಂದು, ಏಸೇ ನಿಜವಾದ ದೇವರೆಂದು, ಏಸು ರಕ್ತದಿಂದ ಪಾಪಗಳು ಹೋಗುವವೆಂದು ಹೇಳಿ, ಇತರರನ್ನು ನಂಬಿಸಿ ಅವರ ಮತದಲ್ಲಿ ಸೇರುವಂತೆ ಮಾಡುತ್ತಿದ್ದಾರೆ. ಹಿಂದೂ ಮತದಲ್ಲಿರುವ ಕುಲವಿವಕ್ಷ ಸಹಿಸಿಕೊಳ್ಳಲಾರದವರೆಲ್ಲರೂ ಕ್ರೈಸ್ತವಮತದಲ್ಲಿ ಸೇರುವುದು ನಡೆದಿದೆ. ಒಂದು ವಿಧವಾಗಿ ಮತಮಾರ್ಪಾಟು ದೈವದ್ರೋಹವೆಂದು ಅವರಿಗೆ ತಿಳಿದಿಲ್ಲ. ಆದ್ದರಿಂದ ತಮ್ಮ ಮತವನ್ನು ಎಷ್ಟು ಪ್ರಚಾರ ಮಾಡಿದರೇ, ಅಷ್ಟಾಗಿ ಏಸು ಅವರನ್ನು ಒಪ್ಪಿಕೊಳ್ಳುವನೆಂದು ನಂಬಿ ಮತಪ್ರಚಾರವನ್ನು ಸಾಗಿಸುತ್ತಿದ್ದಾರೆ. ಕ್ರೈಸ್ತವರಲ್ಲಿ ಎಷ್ಟೋ ಬೋಧಕರು ಬೈಬಲ್‌ನ್ನು ಬೋಧಿಸುತ್ತಿದ್ದರೂ, ಬೈಬಲ್ ಗ್ರಂಥದಲ್ಲಿರುವ ನಾಲ್ಕು ಸುವಾರ್ತೆಗಳ ಜ್ಞಾನ ಅವರಿಗೆ ತಿಳಿಯದೆಂದೇ ಹೇಳಬಹುದು. ವಾಸ್ತವವಾಗಿ ಮಧ್ಯ ದೈವಗ್ರಂಥವಾದ ಬೈಬಲ್ ಗ್ರಂಥವನ್ನು

ಇಂಜೀಲು ಗ್ರಂಥವೆಂದು ಖುರ್‌ಆನ್ ಗ್ರಂಥದಲ್ಲಿ ಬರೆಯಲಾಗಿದೆ. ಆದರೇ ಅದರಲ್ಲಿನ ನಾಲ್ಕು ಸುವಾರ್ತೆಗಳಲ್ಲಿಯೆ ಏಸು ಹೇಳಿದ ಜ್ಞಾನವಿದೆ. ಆ ನಾಲ್ಕು ಸುವಾರ್ತೆಗಳ ಜ್ಞಾನವನ್ನು ಕ್ರೈಸ್ತವರಲ್ಲಿ ದೊಡ್ಡ ಬೋಧಕರಾಗಿರುವವರೂ ಸಹ ಪೂರ್ತಿಯಾಗಿ ತಿಳಿಯರೆಂದೇ ಹೇಳಬಹುದು. ನಾಲ್ಕು ಸುವಾರ್ತೆಗಳ ಜ್ಞಾನವೇ ಬೈಬಲ್‌ನಲ್ಲಿ ಮುಖ್ಯವಾದ ಜ್ಞಾನವಾಗಿ ಇದೆ. ಆದರೇ ಈದಿನ ಕ್ರೈಸ್ತವ ಬೋಧಕರಲ್ಲಿ ಯಾರೂ ಸಹ ಸುವಾರ್ತೆಗಳ ಜ್ಞಾನದಲ್ಲಿನ ಆಳವನ್ನು ನೋಡಲಿಲ್ಲವೆಂದೇ ಹೇಳಬಹುದು. ಬೈಬಲ್‌ನಲ್ಲಿ ಮುಖ್ಯವಾದ ವಾಕ್ಯವಾಗಿದ್ದ **"ತಂದೆ, ಕುಮಾರ, ಪರಿಶುದ್ಧಾತ್ಮ"** ಎಂಬ ಮೂರು ಹೆಸರುಗಳಿಗೂ ವಿವರ ತಿಳಿಯದವರು ಅದರಲ್ಲಿನ ಜ್ಞಾನದ ಮೇಲೆ ದೃಷ್ಠಿಯನ್ನಿಡದೇ ಮತ ಪ್ರಚಾರದ ಮೇಲೆಯೇ ಹೆಚ್ಚಿನ ದೃಷ್ಠಿಯನ್ನು ತೋರಿಸಿದ್ದಾರೆ. ಒಂದು ಕಡೆ ಜ್ಞಾನವನ್ನು ಹೇಳುತ್ತಿದ್ದರೂ ಜ್ಞಾನಕ್ಕಿಂತ ಮತದ ಮೇಲೆಯೇ ಅವರಿಗೆ ಹೆಚ್ಚಿನ ಆಸಕ್ತಿ ಇದೆ.

ಭಾರತದೇಶದಲ್ಲಿ ಹೆಚ್ಚಾಗಿ ಹಿಂದುಗಳಿರುವುದರಿಂದ ಕ್ರೈಸ್ತರು ಹೆಚ್ಚಾಗಿ ಪ್ರಚಾರ ಮಾಡಿ, ಪ್ರತಿ ಊರಿನಲ್ಲಿ ಚರ್ಚಿಗಳನ್ನು ನಿರ್ಮಿಸಿ, ಅಲ್ಲಲ್ಲಿ ಸುವಾರ್ತೆಗಳ ಸಭೆಗಳು ನಿರ್ವಹಿಸಿ ಬಹಳ ಶಾತ ಹಿಂದೂಗಳನ್ನು ಕ್ರೈಸ್ತರಾಗಿ ಬದಲಾಯಿಸಿ ಕೊಂಡಿದ್ದಾರೆ. ಹಿಂದುಗಳಿಗೆ ಒಬ್ಬ ಮತ ಹಿರಿಯನೆಂದಾಗಲೀ, ಮತ ಗುರುವು ಎಂದಾಗಲೀ ಇಲ್ಲದಿರುವುದರಿಂದ, ಒಬ್ಬ ಕುಲದವರೇ ಪ್ರತಿಯೊಂದು ಕಡೆ ಅವರ ಆಧಿಪತ್ಯವನ್ನು ತೋರಿಸುತ್ತಾ ಹಿಂದೂಗಳಲ್ಲಿ ಉಳಿದ ಕುಲದವರೆಲ್ಲರನ್ನೂ ಅಂಟದವರನ್ನಾಗಿ ನೋಡುವುದರಿಂದ, ಸ್ವತಃವಾಗಿ ದೇವರನ್ನು ಮುಗಿಯುವ ಅವಕಾಶ ಇಲ್ಲದಿರುವುದರಿಂದ, ಆಧ್ಯಾತ್ಮಿಕ ಜ್ಞಾನ ಸ್ವಲ್ಪವಾದರೂ ತಿಳಿಯದಿರುವುದರಿಂದ, ತಿಳಿದುಕೊಳ್ಳಬೇಕೆಂಬ ಆಸೆಯಿದ್ದರೂ ಜ್ಞಾನ ತಿಳಿಸುವವರು ಇಲ್ಲದಿರುವುದರಿಂದ, ಉಳಿದ ಎರಡು ಮತಗಳಿಗೂ ಬೈಬಲ್, ಖುರ್‌ಆನ್ ಇದ್ದಂತೆ, ಹಿಂದೂ ಮತಕ್ಕೆ ಯಾವ ಗ್ರಂಥವಿದೆಯೋ ಸಹ ತಿಳಿಯದಿರುವುದರಿಂದ, ಭಗವದ್ಗೀತೆಗಿಂತ ಮುಖ್ಯವಾದವು ವೇದಗಳೆಂದು

ಉಳಿದ ಗುರುಗಳು ತಪ್ಪುದಾರಿ ಹಿಡಿಸುವುದರಿಂದ, ಗುರುಗಳೆನ್ನುವವರು ಒಂದು ಮಂತ್ರವನ್ನು ಹೇಳಿ ಇದೇ ಉಪದೇಶ, ಇದೇ ಜ್ಞಾನ ಇದನ್ನೇ ಜಪಿಸುತ್ತಿರೆಂದು ಹೇಳುವುದರಿಂದ, ಕೆಲವರು ವಿಗ್ರಹಾರಾಧನೆಯೇ ಮುಖ್ಯವೆಂದು ಹೇಳಿ ಅನೇಕ ದೇವತೆಗಳನ್ನು ಪೂಜಿಸುವಂತೆ ಮಾಡುವುದರಿಂದ ಜ್ಞಾನವೆಂದರೆ ಏನೋ, ಅಜ್ಞಾನವೆಂದರೆ ಏನೋ, ತಿಳಿಯದ ಅಗಮ್ಯಗೋಚರ ಸ್ಥಿತಿಯಲ್ಲಿರುವ ಹಿಂದೂಗಳು ಕ್ರೈಸ್ತರಿಗೆ ಸುಲಭವಾಗಿ ಸಿಗುವ ಪಕ್ಷಿಗಳ ಹಾಗೆ ಕಾಣಿಸಿದ್ದಾರೆ. ಆದ್ದರಿಂದ ಭಾರತ ದೇಶದಲ್ಲಿ ಗತ ಐವತ್ತು (50) ಸಂವತ್ಸರಗಳಿಂದ ಮತಮಾರ್ಪಾಟು ಹೆಚ್ಚಾಗಿ ನಡೆದಿದೆ. ಹಿಂದೂಗಳು ಹೆಚ್ಚಾಗಿ ಕ್ರೈಸ್ತವರಾಗಿ ಬದಲಾಗಿದ್ದಾರೆ.

ಕೆಲವು ಸಂವತ್ಸರಗಳಿಂದ ಇದನ್ನೆಲ್ಲವನ್ನೂ ಗಮನಿಸುತ್ತಿರುವ ಮುಸ್ಲೀಮ್‌ರು ತಾವೂ ಸಹ ಕೈಲಾದಷ್ಟು ಅವರ ಸಂಖ್ಯೆಯನ್ನು ಬೆಳೆಸಿಕೊಳ್ಳಬೇಕೆಂದುಕೊಂಡಿದ್ದಾರೆ. ಆದ್ದರಿಂದ ಈ ಮಧ್ಯೆ ಕಳೆದ 20 ಸಂವತ್ಸರಗಳಿಂದ ಸ್ವಲ್ಪ ಪ್ರಯತ್ನವನ್ನು ಮಾಡುತ್ತಿದ್ದಾರೆ. ಆ ಪ್ರಯತ್ನದಲ್ಲಿ ಭಾಗವಾಗಿ ಪ್ರತಿ ಜಿಲ್ಲೆ ಸೆಂಟರ್‌ಗಳಲ್ಲಿಯೂ, ಜಿಲ್ಲಾ ಅಲ್ಲದ ದೊಡ್ಡ ಪಟ್ಟಣಗಳಲ್ಲಿಯೂ ಒಂದೊಂದು ಕಡೆ ಒಂದೊಂದು ಹೆಸರಿಂದ ಇಸ್ಲಾಮ್ (ಮುಸ್ಲೀಮ್) ಸಂಘಗಳನ್ನು ಸ್ಥಾಪಿಸಿದ್ದಾರೆ. ಆ ಸಂಘಗಳಲ್ಲಿ ಚೆನ್ನಾಗಿ ಜ್ಞಾಪಕಶಕ್ತಿ ಇರುವವರನ್ನೂ, ವಾಕ್‌ಚಾತುರ್ಯವಿರುವವರನ್ನೂ, ಇತರ ಮತ ಗ್ರಂಥಗಳಲ್ಲಿನ ಶ್ಲೋಕಗಳನ್ನು, ಪದ್ಯಗಳನ್ನು ಕಲೆತಿರುವ ಮೇಧಾವಿಗಳನ್ನು ಚಾತುರ್ಯವಿರುವ ಯುವಕರನ್ನು ಆ ಸಂಘಗಳಲ್ಲಿ ಇರುವಂತೆ ಏರ್ಪಾಟು ಮಾಡಿಕೊಂಡಿದ್ದಾರೆ. ಧಾರಾಳವಾಗಿ ಮಾತನಾಡುವ ಸಾಮರ್ಥ್ಯವಿರುವವರಿಂದ ಸಂಘವನ್ನು ನಡೆಸುತ್ತಾ, ಚಾಪೆಕೆಳಗೆ ನೀರಿನಂತೆ ಮತವನ್ನು ಪ್ರಚಾರಮಾಡಿ ಮತದಲ್ಲಿ ಸಂಖ್ಯೆಯನ್ನು ಬೆಳೆಸಿಕೊಳ್ಳಬೇಕೆಂದುಕೊಂಡಿದ್ದಾರೆ. ಕೈಲಾದರೇ ಇತರ ಮತಸ್ಥರನ್ನು ತಮ್ಮ ಕಡೆ ಸೆಳೆದುಕೊಳ್ಳುವುದರಿಂದ ಇತರ ಮತವನ್ನು ಇಳಿಕೆ ಮಾಡಿ, ತಮ್ಮ ಮತವನ್ನು ಬೆಳೆಸಿಕೊಳ್ಳಬಹುದು. ಹಾಗೆ ಕೈಲಾಗದೇ ಹೋದರೇ ಇತರ ಮತಸ್ಥರ

ಸಂಖ್ಯೆಯನ್ನು ಹಿಂಸೆಯಿಂದಾದರೂ ಇಳಿಕೆ ಮಾಡಿ ತಮ್ಮ ಸಂಖ್ಯೆಯನ್ನು ಬೆಳಸಿಕೊಳ್ಳುವುದೆನ್ನುವ ಉದ್ದೇಶದಿಂದಿರುವಹಾಗೆ ಅವರ ಪ್ರವರ್ತನೆಯನ್ನನುಸರಿಸಿ ತಿಳಿದುಹೋಗುತ್ತಿದೆ. ಕ್ರೈಸ್ತರಹಾಗೆ ಮತ ಗ್ರಂಥಗಳಲ್ಲಿನ ಜ್ಞಾನವನ್ನು ಹೇಳುವುದಕ್ಕೆ ಖುರ್‌ಆನ್‌ನಲ್ಲಿರುವ ಜ್ಞಾನ ಯಾವುದೋ ಅವರಿಗೇ ಅರ್ಥವಾಗಲಿಲ್ಲ. ಒಂದು ವೇಳೆ ಅರ್ಥವಾದವರಿದ್ದರೂ ಇತರರಿಗೆ ಅದು ಆಮೋದಯೋಗ್ಯವಾಗಿ ಇರುವುದಿಲ್ಲ. ಖುರ್‌ಆನ್‌ನಲ್ಲಿ ಜ್ಞಾನ ಶೇಕಡ ಹತ್ತರಷ್ಟು ಸಹ ಇಲ್ಲಿಯವರೆಗು ಯಾವ ಮುಸ್ಲೀಮ್‌ಗೂ ಅರ್ಥವಾಗಲಿಲ್ಲ. ಅವರಿಗೆ ಹೆಚ್ಚಾಗಿ ಅರ್ಥವಾಗಿರುವುದು ಅವರ ಹಿರಿಯರು ಹೇಳಿದ ಹದೀಸು ಗ್ರಂಥಗಳ ವಿಷಯಗಳೇಯಾಗಲೀ, ಖುರ್‌ಆನ್ ಗ್ರಂಥ ವಿಷಯಗಳಲ್ಲ. ಆದ್ದರಿಂದ ಯಾವುದೋ ಒಂದು ವಿಧವಾಗಿ ಇತರರೊಂದಿಗೆ ಪೋಟಿಬಿದ್ದು ಮಾತುಗಳ ಚಾಕಚಕ್ಯದಿಂದಲೂ, ತಮ್ಮ ಜ್ಞಾಪಕಶಕ್ತಿಯಿಂದಲೂ ಎದುರಿಗಿರುವವರನ್ನು ಸೋಲಿಸಿ ತಾವೇ ದೊಡ್ಡವರೆಂದು ತಮ್ಮ ಆಧಿಕಾರವನ್ನು ಹೆಚ್ಚಿಸಿಕೊಳ್ಳಬೇಕೆಂದು ನೋಡುತ್ತಿದ್ದಾರೆ. ಯಾವುದೋ ಒಂದು ಹೆಸರು ಇಟ್ಟುಕೊಂಡ ಮುಸ್ಲೀಮ್ ಸಂಘ ಅವರ ಮುಂದೆ ಸ್ವಲ್ಪ ಯಾರಾದರೂ ಜ್ಞಾನವನ್ನು ಮಾತನಾಡಿದರೂ, ನಮ್ಮೊಂದಿಗೆ ಬಹಿರಂಗವಾಗಿ ಚರ್ಚೆ ಇಟ್ಟುಕೊಳ್ಳಿ ಎಂದು ಮುಸ್ಲೀಮ್‌ರು ಸ್ಪರ್ದೆಗೆ ಕರೆಯುವುದು ನಡೆಯುತ್ತಿದೆ. ಹೀಗೆ ಪೋಟಿ ನಡೆದ ಸಭೆಗಳ ವೀಡಿಯೋಗಳನ್ನು ವಿದೇಶಗಳಲ್ಲಿರುವ ಮುಸ್ಲೀಮ್‌ರಿಗೆ ತೋರಿಸಿ ತಾವು ಉಳಿದ ಮತಗಳೊಂದಿಗೆ ಚೆನ್ನಾಗಿ ಪೋಟಿಬಿದ್ದು ಅವರನ್ನು ಸೋಲಿಸುತ್ತೇವೆಂದು ಹೇಳಿಕೊಳ್ಳುತ್ತಿದ್ದಾರೆ. ಹಾಗೆ ವಿದೇಶೀ ಮುಸ್ಲೀಮ್‌ರಿಗೆ ತಮ್ಮ ವೀಡಿಯೋಗಳನ್ನು ಕಳುಹಿಸಿ ಅವರಿಂದ ತಮ್ಮ ಸಂಘಗಳಿಗೆ ಹಣವನ್ನು ಕಳುಹಿಸುವಂತೆ ಮಾಡಿಕೊಳ್ಳುತ್ತಿದ್ದಾರೆ.

ಪ್ರಪಂಚ ಜನಸಂಖ್ಯೆಯಲ್ಲಿ ಎರಡನೆಯ ಸ್ಥಾನದಲ್ಲಿರುವ ಮುಸ್ಲೀಮ್‌ರು ಶೇ.90ರಷ್ಟು ಮಂದಿ ಉತ್ತಮರಾಗಿದ್ದು, ಅವರು ಯಾರ ಮತದೊಂದಿಗಾಗಲೀ ಮತ ದ್ವೇಷದೊಂದಿಗಾಗಲೀ ಸಂಬಂಧ ಇಲ್ಲದಂತೆ ಅವರ ಬದುಕು ಅವರು ಬದುಕುತ್ತಿದ್ದಾರೆ. ಯಾವುದೋ ಒಂದು ಕೆಲಸವನ್ನು ಮಾಡಿಕೊಂಡು ಇತರರೊಂದಿಗೆ ದ್ವೇಷವಾಗಲೀ, ಅಸೂಯೆಯಾಗಲೀ ಇಲ್ಲದ ಜೀವನವನ್ನು

ಕಳೆಯುತ್ತಾ, ಇತರ ಮತಸ್ಥರೊಂದಿಗೆ ಅಣ್ಣತಮ್ಮಂದಿರ ಹಾಗೆ ಬೆರೆತುಹೋಗುತ್ತಿದ್ದಾರೆ. ಪ್ರಪಂಚ ವ್ಯಾಪ್ತವಾಗಿರುವ ಶೇ.90 ರಷ್ಟು ಮುಸ್ಲೀಮ್‌ರೊಂದಿಗೆ ಇತರರಿಗೆ ಎಂತಹ ಆಪತ್ತು ಇಲ್ಲ. ಮುಸ್ಲೀಮ್ ಮತದಲ್ಲಿ ಕೇವಲ ಶೇ.ಹತ್ತರಷ್ಟು ಮಂದಿ ಪೂರ್ತಿ ಅಜ್ಞಾನಿಗಳಾಗಿದ್ದು ತಾವು ತಮ್ಮ ಮತದಲ್ಲಿ ದೊಡ್ಡಜ್ಞಾನಿಗಳೆಂದು ಹೇಳಿಕೊಳ್ಳುತ್ತಾ, ಉಳಿದ ಮುಸ್ಲೀಮ್‌ಗಳಿಗೆ ಹಿರಿಯರಾಗಿ ವ್ಯವಹರಿಸುತ್ತಾ 90ರಷ್ಟು ಶಾತ ಮುಸ್ಲೀಮ್‌ರನ್ನು ಅವರ ಮಾತು ಕೇಳುವಹಾಗೆ ಮತ ಕಟ್ಟುಪಾಡುಗಳು, ಮತ ಷರಿಯತ್‌ಗಳೆಂದು ಹೇಳಿ ಉಳಿದ ಮುಸ್ಲೀಮ್‌ರೆಲ್ಲರನ್ನೂ ತಮ್ಮ ಬಂದೋಬಸ್ತಿನಲ್ಲಿ ಸಿಲುಕಿಸಿಕೊಂಡು ತಾವು ಹಿರಿಯರಾಗಿ ವ್ಯವಹರಿಸುತ್ತಿದ್ದಾರೆ. ಮುಸ್ಲೀಮ್ ಮತದಲ್ಲಿ ಶೇ.90ರಷ್ಟು ಜನರಿಗೆ ಅಂತಿಮ ದೈವಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿನ ಜ್ಞಾನವನ್ನು ತಿಳಿಯದಂತೆ ಮಾಡಿದ್ದಾರೆ. ತಾವು ಹಿರಿಯರಾಗಿದ್ದು ಅವರಿಗೆ ಖುರ್‌ಆನ್ ಜ್ಞಾನವನ್ನು ಹೇಳದೇ, ಖುರಾನ್‌ಗಿಂತ ಪೂರ್ತಿ ಬೇರೆಯಾದ ಹದೀಸು ಗ್ರಂಥಗಳಲ್ಲಿನ ವಾಕ್ಯಗಳನ್ನು ಹೇಳಿ ಮತ ಕಟ್ಟುಪಾಡುಗಳನ್ನು, ಮತ ನಿಯಮಗಳನ್ನು ಕಲಿಸುತ್ತಿದ್ದಾರೆ. ಖುರ್‌ಆನ್ ಜ್ಞಾನ ತಿಳಿಯದ ಉಳಿದ ಮುಸ್ಲೀಮ್‌ರು ಅವರು ಹೇಳುವುದೇ ನಿಜವಾದ ಜ್ಞಾನವೆಂದು ನಂಬಿ ಅವರ ಕಟ್ಟುಪಾಡುಗಳ ಪ್ರಕಾರ ಪೂರ್ತಿ ಅವರ ಹಿರಿಯರ ಅಧೀನದಲ್ಲಿದ್ದು ಅವರು ಹೇಳಿದಂತೆ ನಡೆದುಕೊಳ್ಳುವುದಕ್ಕೆ ಅಭ್ಯಾಸವಾಗುತ್ತಿದ್ದಾರೆ. ಮುಸ್ಲೀಮ್‌ರಲ್ಲಿ ಕೇವಲ ಹತ್ತರಷ್ಟು ಮಂದಿ ತಾವೇ ಜ್ಞಾನಿಗಳಾಗಿ ಚಲಾವಣೆ ಆಗುತ್ತಾ, ಉಳಿದ ಮುಸ್ಲೀಮ್‌ರ ಮೇಲೆ ಸ್ವಾರೀ ಮಾಡುತ್ತಾ, ಎಲ್ಲರೂ ಬಡವರಾಗಿರುವಾಗ ತಾವು ಮಾತ್ರ ಧನಿಕರಾಗಿ ಇದ್ದಾರೆ. ಶೇಕಡ 90ರಷ್ಟು ಮುಸ್ಲೀಮ್‌ರು ಖುರ್‌ಆನ್ ಗ್ರಂಥದಲ್ಲಿನ ಜ್ಞಾನವನ್ನು ತಿಳಿಯದಂತೆ ಮಾಡುವುದಕ್ಕೆ ಮುಖ್ಯವಾಗಿ ಖುರ್‌ಆನ್‌ನನ್ನು ಅರಬ್ಬೀ ಭಾಷೆಯಲ್ಲಿಯೇ ಓದಬೇಕೆನ್ನುವ ನಿಯಮವನ್ನು ಇಟ್ಟಿದ್ದಾರೆ. ಪ್ರಪಂಚದಲ್ಲಿ ಎಷ್ಟೋ ದೇಶಗಳಲ್ಲಿ ಮುಸ್ಲೀಮ್‌ರು ಇದ್ದಾರೆ. ಅವರಿಗೆ ಆ ದೇಶಭಾಷೆ ಹೊರತು ಅರಬ್ಬೀ ಭಾಷೆ ಬರುವುದಿಲ್ಲ. ಅಂತಹವರು ಇತರ ಭಾಷೆಯಲ್ಲಿರುವ ಖುರ್‌ಆನ್ ಓದಬಾರದೆನ್ನುವ ತಮ್ಮ ಹಿರಿಯರ ನಿರ್ಣಯದ ಪ್ರಕಾರ ಅವರು ಖುರ್‌ಆನ್‌ನನ್ನು ತಮಗೆ ತಿಳಿದಿರುವ ಭಾಷೆಯಲ್ಲಿ ಓದಲಾರದೆ

ಹೋಗುತ್ತಿದ್ದಾರೆ. ಎಷ್ಟೋ ಕಷ್ಟಪಟ್ಟು ಅರಬ್ಬೀ ಭಾಷೆಯಲ್ಲಿನ ಅಕ್ಷರಗಳನ್ನು ಕಲಿತುಕೊಂಡು ಅರಬ್ಬೀ ಅಕ್ಷರಗಳೊಂದಿಗೆ ಖುರ್‌ಆನ್ ಓದಿದವರಿದ್ದಾರೆ. ಆದರೇ ಅವರಿಗೆ ಅಕ್ಷರಗಳು ಮಾತ್ರ (ಲಿಪಿ ಮಾತ್ರ) ತಿಳಿದು ಭಾಷೆಯಲ್ಲಿನ ಪದಗಳ ಅರ್ಥಗಳು ತಿಳಿಯದೆ ಹೋಗುವುದರಿಂದ ಖುರ್‌ಆನ್ ಗ್ರಂಥವನ್ನು ಓದಿದರೂ ಅದರಲ್ಲಿ ಏನು ಜ್ಞಾನವಿದೆಯೋ ಅವರಿಗೆ ತಿಳಿಯದಂತೆ ಹೋಗಿದೆ.

ಪ್ರಪಂಚ ಜನಸಂಖ್ಯೆಯಲ್ಲಿ ಒಟ್ಟು 162 ಕೋಟಿ ಜನರು ಮುಸ್ಲೀಮ್‌ರು ಇರುವಾಗ, ಅದರಲ್ಲಿ ಕೇವಲ 32 ಕೋಟಿ ಜನರಿಗೆ ಮಾತ್ರವೇ ಅರಬ್ಬೀ ಭಾಷೆ ತಿಳಿದಿದೆ. ಉಳಿದ 130 ಕೋಟಿ ಮಂದಿ ಮುಸ್ಲೀಮ್‌ರಿಗೆ ಅರಬ್ಬೀ ಭಾಷೆ ತಿಳಿಯದಿರುವುದರಿಂದ ಅವರ ಮತ ಗ್ರಂಥದಲ್ಲಿನ ಜ್ಞಾನವೇ ಅವರಿಗೆ ತಿಳಿದಿಲ್ಲ. ಅರಬ್ಬೀ ಭಾಷೆ ಬರುವ 32 ಕೋಟಿ ಜನರಲ್ಲಿ ಎರಡು ಕೋಟಿ ಜನರು ಅಂಗವಿಕಲರು, ಕುರುಡರು, ಮತಿಸ್ಥಿಮಿತ ಇಲ್ಲದವರು ಇದ್ದಾರೆ. ಆ ಎರಡು ಕೋಟಿ ಜನರನ್ನು ತೆಗೆದುಹಾಕಿದರೆ ಉಳಿದ 30 ಕೋಟಿ ಜನರಲ್ಲಿ ಹತ್ತು ಕೋಟಿ ಜನರಿಗೆ ಭಾಷೆ ತಿಳಿದರೂ ಓದು ಬರುವುದಿಲ್ಲ. ಆದ್ದರಿಂದ ಅವರಲ್ಲಿ 20 ಕೋಟಿ ಮಂದಿ ಅಂತಿಮ ದೈವ ಗ್ರಂಥವನ್ನು ಓದಿದವರಿದ್ದರೂ ಅವರಲ್ಲಿ ಕೆಲವು ಜನರಿಗೆ ಮಾತ್ರ ಸ್ವಲ್ಪಮಟ್ಟಿಗೆ ಅರ್ಥವಾಗಿದೆ. ಖುರ್‌ಆನ್ ಅರ್ಥವಾಗಿದೆ ಎಂದುಕೊಳ್ಳುವವರಿಗೆ ಖುರ್‌ಆನ್‌ನಲ್ಲಿ ಕೇವಲ ಸ್ವಲ್ಪ ಭಾಗವೇ ಅರ್ಥವಾಗಿದೆ. ಉಳಿದ ಸ್ವಲ್ಪ ಭಾಗ ಅರ್ಥವಾಗಲಿಲ್ಲ. ಓದಿದವರು ನಮಗೆ ಅರ್ಥವಾಗಿದೆಯೆಂದರೂ ಅದು ಬೇರೆ ಭಾವದಲ್ಲಿ ಅರ್ಥವಾಗಿದೆಯಾಗಲೀ ಸರಿಯಾದ ಭಾವದಲ್ಲಿ ಅರ್ಥವಾಗಿಲ್ಲ. ಅಂತಿಮ ದೈವಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ಎಷ್ಟೋ ದೊಡ್ಡ ಜ್ಞಾನ ರಹಸ್ಯಗಳು ಇವೆ. ಅವು ಎಲ್ಲರಿಗೂ ಸುಲಭವಾಗಿ ಅರ್ಥವಾಗುವವಲ್ಲ. ಆದರೇ ಮುಸ್ಲೀಮ್‌ರಲ್ಲಿ ನಾವು ಜ್ಞಾನಿಗಳೆಂದು ಹೇಳಿಕೊಳ್ಳುವ ಶೇ.ಹತ್ತರಷ್ಟು ಜನರು ನಾವು ಖುರ್‌ಆನ್ ಗ್ರಂಥದಲ್ಲಿ ಜ್ಞಾನವನ್ನು ಸಂಪೂರ್ಣವಾಗಿ ತಿಳಿದವರಂತೆಯೇ ಅಂದುಕೊಳ್ಳುವುದು ನಡೆಯುತ್ತಿದೆಯಾಗಲೀ, ಅವರಲ್ಲಿ ಶೇ.ಒಂದರಷ್ಟು ಸಹ ಜ್ಞಾನವನ್ನು ತಿಳಿದವರು ಇಲ್ಲ.

ಮುಸ್ಲೀಮ್ ಮತದಲ್ಲಿ ನಾವು ಜ್ಞಾನಿಗಳು ಎಂದುಕೊಳ್ಳುವ ಹತ್ತರಷ್ಟು ಮಂದಿ ಭಾರತದೇಶದಲ್ಲಿ ಇಸ್ಲಾಮ್ ಹೆಸರಿಂದ ಬೆರೆತ ಮುಸ್ಲೀಮ್ ಸಂಘಗಳನ್ನು ತಯಾರು ಮಾಡಿ, ಒಂದು ಕಡೆ ಉಳಿದ ಮುಸ್ಲೀಮ್‌ರ ಮೇಲೆ ಅವರ ಅಧಿಕಾರವನ್ನು ಚಲಾಯಿಸುವುದಲ್ಲದೆ, ಹಿಂದುಗಳನ್ನು ಇತರ ಮತಗಳವರನ್ನು ತಮ್ಮ ಮತದೊಳಗೆ ಸೆಳೆದುಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತಿದ್ದಾರೆ. ಅವರ ಪ್ರಚಾರದಲ್ಲಿ "ಗತ ಕಾಲದಲ್ಲಿ ನಾವು ಹಿಂದೂಗಳಾಗಿ ಇರುವವರೇ, ಹಿಂದೂಮತದಲ್ಲಿ ಸರಿಯಾದ ಜ್ಞಾನವಿಲ್ಲವೆಂದು, ಮುಸ್ಲೀಮ್ ಮತದಲ್ಲಿ ಎಷ್ಟೋ ದೊಡ್ಡ ಜ್ಞಾನವಿದೆಯೆಂದು ತಿಳಿದು ನಾವು ಮುಸ್ಲೀಮ್‌ಆಗಿ ಬದಲಾಗಿದ್ದೇವೆಂದು" ಅಸತ್ಯವನ್ನು ಹೇಳುತ್ತಾ ಹಿಂದೂಗಳ ದೃಷ್ಠಿಯನ್ನು ತಮ್ಮ ಮತದಕಡೆಗೆ ತಿರುಗಿಸಿಕೊಳ್ಳುತ್ತಿದ್ದಾರೆ. ಎಲ್ಲರಿಗೂ ತಿಳುಯುವಹಾಗೆ ತಮ್ಮ ಜ್ಞಾನವನ್ನು ಪ್ರಚಾರ ಮಾಡುತ್ತಾ, ಅಲ್ಲಲ್ಲಿ ಅವರ ಸಂಘದ ಹೆಸರಿಂದ ಬಹಿರಂಗ ಸಭೆಗಳು ಏರ್ಪಾಟು ಮಾಡಿ, ಅಲ್ಲಿ ಖುರ್‌ಆನ್ ಜ್ಞಾನವನ್ನೇ ಅಲ್ಲದೆ ಅವರಿಗೆ ಅನುಕೂಲವಾಗಿದ್ದ ಉಳಿದ ಮತಗಳಲ್ಲಿನ ಜ್ಞಾನವನ್ನೂ ಸಹ ಶ್ಲೋಕಗಳ ರೂಪದಲ್ಲಿ, ಪದ್ಯಗಳ ರೂಪದಲ್ಲಿ ವರ್ಣಿಸಿ ಹೇಳುತ್ತಾ, ಅವರಿಗೆ ಅವರ ಮತ ಜ್ಞಾನವೇ ಅಲ್ಲದೆ ಉಳಿದ ಮತ ಜ್ಞಾನಗಲು ಸಹ ಸಂಪೂರ್ಣವಾಗಿ ತಿಳಿದಂತೆ ಕಾಣಿಸುತ್ತಾ, ಆ ವೀಡಿಯೋಗಳನ್ನು ವಿದೇಶೀ ಮುಸ್ಲೀಮ್‌ರಿಗೆ ಕಳುಹಿಸುತ್ತಾ, ತಮ್ಮ ಸಂಸ್ಥೆಗಳಿಗೆ ಬೇಕಾದ ಆರ್ಥಿಕ ಸಹಾಯವನ್ನು ಪಡೆಯುತ್ತಿರುವರು. ಇದು ಮುಸ್ಲೀಮ್ ಹಿರಿಯರೆಂದು, ಮುಸ್ಲೀಮ್ ಪಂಡಿತರೆಂದು, ಖುರ್‌ಆನ್ ಪಂಡಿತರೆಂದು ಹೇಳಿಕೊಳ್ಳುತ್ತಾ ಹೊರಗೆ ಎಲ್ಲರೊಂದಿಗೆ ಸಂಬಂಧವನ್ನು ಇಟ್ಟುಕೊಂಡು ತಮ್ಮ ಮತವನ್ನು ಪ್ರಚಾರ ಮಾಡುವುದು ಒಂದು ಕೋನವಾದಾಗ, ತಮ್ಮ ಮತವನ್ನು ಬೆಳೆಸಿಕೊಳ್ಳುವುದೇ ಅಲ್ಲದೆ ಇತರ ಮತಗಳ ಸಂಖ್ಯೆಯನ್ನು ತಗ್ಗಿಸುವುದು ಮತ್ತೊಂದು ಕೋನವಾಗಿ ಇದೆ. ಆ ವಿಷಯ ನಂತರ ಪ್ರಸ್ತಾವನೆಗೆ ತೆಗೆದುಕೊಂಡು ಬರುತ್ತೇವೆ. ಈಗ ತಮ್ಮ ಮತಜ್ಞಾನ ಪ್ರಚಾರದಲ್ಲಿ ಕೆಲವು ಮುಸ್ಲೀಮ್ ಸಂಘಗಳು ಮಾಡುವ ಆರ್ಭಾಟಗಳನ್ನು ಕುರಿತೇ ಹೇಳುತ್ತಿದ್ದೇವೆ.

ಈ ವಿಷಯಗಳನ್ನು ನಾವು ಹೇಳುತ್ತಿರುವುದನ್ನು ನೋಡಿ ಕೆವರು ಹಿಂದೂಗಳೇ ನಮ್ಮನ್ನು ಒಂದು ಪ್ರಶ್ನೆಯನ್ನು ಕೇಳಬಹುದು. ಅದು ಏನೆಂದರೆ! ಯಾರ ಮತವನ್ನು ಕುರಿತು ಅವರು ಹೇಳಿಕೊಳ್ಳುವ ಸ್ವತಂತ್ರ ಅವರಿಗೆ ಇದೆ ಅಲ್ಲವೆ! ಭಾರತ ರಾಜ್ಯಾಂಗ ಕೊಟ್ಟಿರುವ ಪ್ರಾಥಮಿಕ ಹಕ್ಕಿನ ಪ್ರಕಾರ ಯಾರು ಏನಾದರೂ ಮಾತಾಡಬಹುದು. ಅವರ ಮತವನ್ನು ಕುರಿತು ಅವರು ದೊಡ್ಡದಾಗಿ ಅವರ ಸಭೆಗಳಲ್ಲಿ ಹೇಳಿಕೊಳ್ಳಬಹುದು. ನಾವು ಅವರ ಮಾತನ್ನು ಕೇಳಲಾರದೇ ಹೋದರೇ ಸರಿಹೋಗುತ್ತದಲ್ಲವೆ! ಹಾಗಲ್ಲದೇ ಅವರನ್ನು ನೀವು ಏಕೆ ವಿಮರ್ಶಿಸುತ್ತಿದ್ದೀರೆಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಈ ರೀತಿ ಇದೆ. ಯಾರ ಮತವನ್ನು ಕುರಿತು ಅವರು ಹೇಳಿಕೊಳ್ಳುವುದು ತಪ್ಪಲ್ಲ. ಹಾಗೇ ಅವರಿದೆಂದು ಹೇಳಿಕೊಳ್ಳುವ ಖುರ್‌ಆನ್ ಗ್ರಂಥದಲ್ಲಿನ ಜ್ಞಾನವನ್ನು ಕುರಿತು ಹೇಳಿಕೊಂಡರೂ ತಪ್ಪಿಲ್ಲ. ಒಳಗೆ ಯಾವುದೋ ದುರುದ್ದೇಶ್ಯವನ್ನು ಇಟ್ಟುಕೊಂಡು ಹೇಳಿಕೊಳ್ಳುವುದು ತಪ್ಪು ಎನ್ನುತ್ತಿದ್ದೇವೆ. ದೇವರು ಪ್ರಜೆಗಳೆಲ್ಲರಿಗೂ ಮೂರು ದೈವ ಗ್ರಂಥಗಳನ್ನು ಕೊಟ್ಟಿದ್ದಾನೆ. ಈದಿನ ಮೂರು ಮತಗ್ರಂಥಗಳಾಗಿ ಹೇಳಿಕೊಳ್ಳುವುದರಲ್ಲಿ ಮತಗಳ ಪ್ರಸ್ತಾವನೆಯೇ ಇಲ್ಲ. ಮೂರು ದೈವ ಗ್ರಂಥಗಳು ಸಮಸ್ತ ಮನುಷ್ಯರಿಗೂ ಸಂಬಂಧಿಸಿರುವವೆಂದು ಖುರ್‌ಆನ್ ಗ್ರಂಥದಲ್ಲಿ ಸೂರಾ 81, ಆಯತ್ 27ರಲ್ಲಿ ಇದೆ. ಪ್ರತ್ಯೇಕಿಸಿ ಖುರ್‌ಆನ್ ಗ್ರಂಥವನ್ನು ಕುರಿತು ಅಲ್ಲಿ ಇದೆ. ಹಾಗಿರುವಾಗ ಖುರ್‌ಆನ್‌ನನ್ನು ಒಂದು ಮತಕ್ಕೆ ಪರಿಮಿತಿ ಮಾಡಿ ಇದು ನಮ್ಮ ಗ್ರಂಥವೆಂದು ಮುಸ್ಲೀಮ್ ಸಂಘದವರು ಹೇಳುವುದನ್ನು ನಾವು ವಿರೋಧಿಸುತ್ತಿದ್ದೇವೆ.

ಒಂದು ಕುಟುಂಬದಲ್ಲಿ ಹತ್ತು ಮಂದಿ ಕುಮಾರರಿರುವ ತಂದೆ, ತನ್ನ ಮಕ್ಕಳಿಗೆ ಮೂರು ವಜ್ರಗಳನ್ನು ಜೋಡಿಸಿದ ಬಂಗಾರದ ಹಾರವನ್ನು ಕೊಟ್ಟರೇ, ಕುಮಾರರಲ್ಲಿ ಒಬ್ಬನು ಇದು ನನ್ನದೇ ಎಂದು ಹಾರದಲ್ಲಿನ ವಜ್ರಗಳನ್ನು ತೆಗೆದುಕೊಂಡರೇ ಉಳಿದ ಮಕ್ಕಳು ಒಪ್ಪಿಕೊಳ್ಳುತ್ತಾರಾ? ಅದು ಎಲ್ಲರಿಗೂ ಸೇರಬೇಕಾಗಿದೆ ಎನ್ನುತ್ತಾರೆ. ಅದೇ ರೀತಿ ದೇವರುಕೊಟ್ಟಿರುವ ದೈವಗ್ರಂಥದಲ್ಲಿ

ಒಂದು ಭಾಗವಾಗಿರುವ ಅಂತಿಮ ದೈವಗ್ರಂಥದಲ್ಲಿನ ಜ್ಞಾನ ಮನುಷ್ಯರೆಲ್ಲರದೇ ಯಾಗಲೀ ಮುಸ್ಲೀಮ್‌ರೊಬ್ಬರದೇ ಅಲ್ಲ ಎನ್ನುತ್ತಿದ್ದೇವೆ. ಮುಸ್ಲೀಮ್‌ರು ಮಾತನಾಡುವುದೆಲ್ಲಾ ನಾವು ಕೇಳುತ್ತಿದ್ದರೇ ದೇವರು ಅವರಿಗೇ ಜ್ಞಾನವನ್ನು ಕೊಟ್ಟಿದ್ದಾನೆ, ಉಳಿದವರಿಗೆ ಯಾರಿಗೂ ಜ್ಞಾನವನ್ನು ಕೊಡಲಿಲ್ಲ ಎನ್ನುವುದಕ್ಕೆ ಸಿದ್ಧವಾಗಿದ್ದಾರೆ. ಆದ್ದರಿಂದ ಅವರು ಹೇಳುವ ಅಸತ್ಯಗಳನ್ನು ಮೊದಲೇ ನಾವು ಖಂಡಿಸುತ್ತಿದ್ದೇವೆ. ಅವರು ಹೇಳುವುದೆಲ್ಲಾ ಕೇಳುತ್ತಿದ್ದರೇ ಕೊನೆಗೆ ನಮ್ಮನ್ನು ನಿಮಗೆ ಜ್ಞಾನತಿಳಿದಿದೆಯಾ? ಎಂದು ಪ್ರಶ್ನಿಸುತ್ತಿದ್ದಾರೆ. ಹಾಗೆ ಅವರು ನಮ್ಮನ್ನು ಕೇಳಿದಾಗಲೂ ಸಹ ಮೌನವಾಗಿದ್ದರೇ ಆಕಾಶದಲ್ಲಿ ವಿಮಾನಗಳನ್ನು ಹೈಜಾಕ್ ಮಾಡಿದಹಾಗೆ ಭೂಮಿಮೇಲೆ ಮತಗಳಲೆಲ್ಲವನ್ನು ಹೈಜಾಕ್ ಮಾಡಬಲ್ಲರು. ಆದ್ದರಿಂದ ನಮ್ಮನ್ನು ಪ್ರಶ್ನಿಸಿದವರನ್ನು ನಾವೂ ಸಹ ಪ್ರಶಿಸುತ್ತಿದ್ದೇವೆ. ಈ ಮಧ್ಯ ಕಾಲದಲ್ಲಿ ಶ್ರೀಕಾಕುಳಂದಲ್ಲಿರುವ ಒಬ್ಬ ಮುಸ್ಲೀಮ್ ತನಗೆ ಜ್ಞಾನ ತಿಳಿದಿದೆಯೆನ್ನುವ ಗರ್ವದಿಂದ ನಮ್ಮನ್ನು ಪ್ರಶ್ನಿಸುವುದು ನಡೆದಿದೆ. ನಮ್ಮನ್ನು ಅಂದರೇ ಪ್ರತ್ಯೇಕಿಸಿ ನನ್ನನ್ನಲ್ಲ ಆದರೇ, ನನ್ನ ಶಿಷ್ಯರಾಗಿ ಹೇಳಿಕೊಳ್ಳುವವರನ್ನು ಪ್ರಶ್ನಿಸುವುದು, ತಮ್ಮೊಂದಿಗೆ ಬಹಿರಂಗ ಚರ್ಚೆಗೆ ಬನ್ನಿರೆಂದು ಕರೆಯುವುದು ನಡೆದಿದೆ. ಚರ್ಚೆಯಲ್ಲಿ ತಮ್ಮೊಂದಿಗೆ ಸೋತುಹೋದರೇ ನಿಮ್ಮ ಹಿಂದೂ ಮತವನ್ನು ಬಿಟ್ಟು ಇಸ್ಲಾಮ್ ಮತದಲ್ಲಿ ಸೇರೆನ್ನುವುದು ಸಹ ನಡೆದಿದೆ. ನಮ್ಮ ಪರವಾಗಿ ಚೆನ್ನೈದಿಂದ **'ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ'** ಯಿಂದ ಒಬ್ಬ ಮುಸ್ಲೀಮ್ ಮಾತನಾಡಿದರೆ ಆತನನ್ನು ಸಹ ಬಹಿರಂಗ ಚರ್ಚೆಗೆ ಬನ್ನಿರೆಂದು, ಚರ್ಚೆಯಲ್ಲಿ ಸೋತುಹೋದರೆ ಅವರ ಚೆಪ್ಪಲಿನಿಂದಲೆ ಅವರು ಹೊಡೆದುಕೊಳ್ಳಬೇಕೆಂದು ಹೇಳುವುದು ನಡೆದಿದೆ. ಅದಕ್ಕೆ ನಮ್ಮವರು ನೀನು ಚರ್ಚೆಗಳಿಗೆ ಕರೆದರೆ ನಾವು ಏಕೆ ಬರಬೇಕು? ಎಂದು ಪ್ರಶ್ನಿಸಿದ್ದಾರೆ. ಅಷ್ಟೇ ಅಲ್ಲದೆ ನೀವು ಇಟ್ಟಿರುವ ನಿಯಮಗಳಿಗೆ ನಾವು ಏಕೆ ಒಪ್ಪಿಕೊಳ್ಳಬೇಕು? ಎಂದು ಪ್ರಶ್ನಿಸಿದ್ದಾರೆ. ನಿನಗೆ ನಮ್ಮೊಂದಿಗೆ ಮಾತನಾಡಬೇಕೆಂದಿದ್ದರೇ ಸರ್ವಸಾಧಾರಣವಾಗಿ ಮಾತನಾಡಿ ಒಬ್ಬರ ಭಾವಗಳನ್ನು ಒಬ್ಬರು ಹೇಳಿಕೊಳ್ಳಬಹುದಾಗಲೀ, ಪೋಟಿಗೆ ಬರುವುದು ಸೋಲುವುದು ಗೆಲ್ಲುವುದು

ನಮಗೆ ಸರಿಹೋಗುವುದಿಲ್ಲವೆಂದು ಹೇಳಿದ್ದಾರೆ. ಅಷ್ಟೇ ಅಲ್ಲದೆ ಇಂತಹ ದಿನ ನಾವು ನಿಮ್ಮ ಹತ್ತಿರಕ್ಕೆ ಬಂದು ಮಾತನಾಡುತ್ತೇವೆ ಆಗ ನೀನು ಕೇಳಿದ ಪ್ರಶ್ನೆಗಳಿಗೆ ನಮಗೆ ತಿಳಿದಿರುವ ಸಮಾಧಾನ ಹೇಳುತ್ತೇವೆ. ಹಾಗೆಯೇ ನಾವು ಕೇಳಿದ ಪ್ರಶ್ನೆಗಳಿಗೆ ನೀವೂ ಸಹ ಉತ್ತರ ಹೇಳಿ. ಅಷ್ಟೇ ಆಗಲೀ (ಪಂತಾಲಕು, ಪಟ್ಟಿಂಪುಲಕು) ನಾವು ಎಲ್ಲಿಗೂ ಹೋಗುವುದಿಲ್ಲ, ಎಲ್ಲಿಗೂ ಬರುವುದಿಲ್ಲ ಎಂದು ಹೇಳಿದ್ದಾರೆ. ಅಗ ಆತನು ಹೇಳಿದ ದಿನದಂದು ಶ್ರೀಕಾಕುಳಂ ಎಂಬ ಊರಿಗೆ ಹೋಗಿ ಬೆಳಗ್ಗೆಯಿಂದ ಸಾಯಂಕಾಲ ಮೂರು ಗಂಟೆಗಳವರೆಗು ಕಾದುಕೊಂಡು, ಆತನೊಂದಿಗೆ ಮಾತನಾಡಿ ಬಂದಿದ್ದಾರೆ. ನಮ್ಮನ್ನು ಚರ್ಚೆಗೆ ಕರೆದಿರುವುದಕ್ಕೆ ಶ್ರೀಕಾಕುಳಂಗೆ ಹತ್ತಿರದಲ್ಲಿರುವ ವಿಜಯನಗರ, ವೈಜಾಗ್ ಮತ್ತು ಶ್ರೀಕಾಕುಳಂದವರು ಆತನೊಂದಿಗೆ ಮಾತನಾಡುವುದಕ್ಕೆ ಹೋಗಿದ್ದಾರೆ. ಹೋದವರು ಸುಮಾರು ಹತ್ತು ಮಂದಿ ಆದಾಗ ಅವರಲ್ಲಿ ಇಬ್ಬರು ಮುಸ್ಲೀಮ್‌ರು ಸಹ ಇದ್ದಾರೆ. ಉಳಿದವರು ಹಿಂದೂಗಳು ಹೋಗಿದ್ದಾರೆ.

ಅಲ್ಲಿಗೆ ಹೋದ ನಂತರ ನಮ್ಮವರನ್ನು ಕರೆದ ಆತನು ಸ್ಥಾನಿಕವಾಗಿ ಒಂದು ಇಸ್ಲಾಮ್ ಸಂಸ್ಥೆಯನ್ನು ನಡೆಸುವ ವ್ಯಕ್ತಿ ಎಂದು ತಿಳಿದಿದೆ. ನಾವು ವಿಜಯ ನಗರದಿಂದ, ವೈಜಾಗ್‌ದಿಂದ, ಶ್ರೀಕಾಕುಳಂದಿಂದಲೂ ಸಹ ಬಂದಿರುವವರೆಂದು ನಮ್ಮವರು ಹೇಳಿದ ನಂತರ ಒಬ್ಬರಿಗೊಬ್ಬರು ಪರಿಚಯದ ನಂತರ ಮಾತನಾಡುವುದಕ್ಕೆ ಆರಂಭಿಸಿದ್ದಾರೆ. ನಮ್ಮವರನ್ನು ಕರೆದ ವ್ಯಕ್ತಿ ವಯಸ್ಸು ಸುಮಾರು 35 ಸಂವತ್ಸರಗಳಿರಬಹುದು. ಆತನೊಂದಿಗೆ ಹತ್ತು ಮಂದಿ ಸುಮಾರು ಅದೇ ವಯಸ್ಸಿರುವ ಮುಸ್ಲೀಮ್‌ರು ಸಹ ಅಲ್ಲಿ ಪಾಲ್ಗೊಳ್ಳುವುದು ನಡೆದಿದೆ. ಅವರ ಮಾತುಗಳು ಕೆಲಗಿನ ವಿಧವಾಗಿ ಮುಂದುವರೆದಿವೆ. ಮಾತುಗಳ ಸಂದರ್ಭದಲ್ಲಿ ಕೆಲವು ಬಾರಿ ಆತನು ಸಿಟ್ಟಿಗೆದ್ದು ಮಾತನಾಡಿದರೂ ನಮ್ಮವರು ತಾಳ್ಮೆಯಿಂದ ಮಾತನಾಡುವುದು ನಡೆದಿದೆ. ಅಲ್ಲಿರುವ ಉಳಿದ ಮುಸ್ಲೀಮ್‌ರು ಆತನನ್ನೇ ನಿದಾನವಾಗಿ ಮಾತನಾಡೆಂದು ಹೇಳುವುದೂ ಸಹ ನಡೆದಿದೆ.

**ನಮ್ಮವರು :–** ನಾವು **"ಇಂದೂ ಜ್ಞಾನವೇದಿಕೆ"**ಯಲ್ಲಿ ಕೆಲಸ ಮಾಡುವ ಸದಸ್ಯರು

ಕೆಲವು ಮಂದಿ, **"ಪ್ರಬೋಧ ಸೇವಾ ಸಮಿತಿ"**ಯಲ್ಲಿ ಕೆಲಸ ಮಾಡುವವರು ಕೆಲವು ಮಂದಿ ಇದ್ದೇವೆ. ಹಾಗೇ ಅಲ್ಲಿಗೆ ನಮ್ಮೊಂದಿಗೆ ಬಂದಿರುವ ಮುಸ್ಲೀಮ್ ಸೋದರರು ಇಬ್ಬರು **"ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ"** ಕಡೆಯಿಂದ ಬಂದಿದ್ದಾರೆ. ನೀವು ನಮ್ಮ ಇಸ್ಲಾಮಿಕ್ ಸಂಸ್ಥೆಯಿಂದ ಬಂದಿರುವ **"ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು"** ಎಂಬ ಗ್ರಂಥವನ್ನು ನೋಡಿ ಅದರಲ್ಲಿ ಬಹಳ ತಪ್ಪಾಗಿ ಬರೆದಿದ್ದಾರೆಂದು ನೀವು ಮದ್ರಾಸಿನಲ್ಲಿರುವ ನಮ್ಮ "ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ" ಸದಸ್ಯರನ್ನು ಫೋನ್‌ನಲ್ಲಿ ಹೆದರಿಸಿದ್ದಾರೆಂದು ತಿಳಿದಿದೆ. ನಂತರ ನೀವು ನಮ್ಮೊಂದಿಗೆ ಮಾತನಾಡಲು ಹೇಳಿದಾಗ ಈಗ ನಾವು ಮಾತನಾಡಿ ನಮ್ಮ ಭಾವನೆಗಳು ತಿಳಿಸುವುದಕ್ಕೆ ಮಾತ್ರವೇ ಬಂದಿದ್ದೇವೆ. ನಾವು ನಿಮ್ಮೊಂದಿಗೆ ಪೈಪೋಟಿಯಾಗಿ ಮಾತನಾಡುವುದಕ್ಕೆ ಬರಲಿಲ್ಲ. ಇತರರೊಂದಿಗೆ ಪೈಪೋಟಿ ಯಾಗಿ ಮಾತನಾಡುವುದು ನಮ್ಮ ಸಂಸ್ಥೆಗಳಲ್ಲಿ ಯಾರಿಗೂ ಸರಿಹೋಗುವುದಿಲ್ಲ. ಆದ್ದರಿಂದ ನೀವು **"ಅಂತಿಮ ದೈವಗ್ರಂಥದಲ್ಲಿ ಜ್ಞಾನ ವಾಕ್ಯಗಳು"** ಎಂಬ ಗ್ರಂಥದಲ್ಲಿ ನಿಮಗೆ ಇಷ್ಟವಾಗದ ವಿವರ ಏನಿದೆಯೋ ಹೇಳಿರಿ.

**ಮುಸ್ಲೀಮ್ :– "ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು"** ಎಂಬ ಗ್ರಂಥವನ್ನು ನಾವು ನೋಡಿದ್ದೇವೆ. ಅದರಲ್ಲಿ ಬಹಳ ತಪ್ಪುಗಳಿರುವಹಾಗೆ ನಾವು ಗ್ರಹಿಸಿದ್ದೇವೆ. ಈ ಗ್ರಂಥವನ್ನು ಪ್ರಚುರಿಸಿದವರು **"ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ"** ಯವರಾದರೇ ಬರೆದಿರುವುದು ಒಬ್ಬ ಹಿಂದುವಾದ ಪ್ರಬೋಧಾನಂದ ಯೋಗೀಶ್ವರರು. ಆತನು ಒಬ್ಬ ಹಿಂದೂವಾಗಿದ್ದು ಮುಸ್ಲೀಮ್ ಗ್ರಂಥವಾದ ಖುರ್‌ಆನ್ ಗ್ರಂಥವನ್ನು ಹೇಗೆ ಬರೆಯಬಲ್ಲನು? ಹಾಗೆ ಇತರ ಮತ ಗ್ರಂಥವನ್ನು ಕುರಿತು ಹೇಳುವುದಕ್ಕೆ ಆತನಿಗೆ ಏನು ಅಧಿಕಾರವಿದೆ? ಆತನು ಹಿಂದೂ ಗ್ರಂಥವಾದ ಭಗವದ್ಗೀತೆಯನ್ನು ಬರೆದುಕೊಳ್ಳಬಹುದಾಗಲೀ, ನಮ್ಮ ಗ್ರಂಥವನ್ನು ಏಕೆ ಬರೆದಿದ್ದಾನೆಂದು ನಾವು ಕೇಳುತ್ತಿದ್ದೇವೆ. ಇದಕ್ಕೆ ನಮಗೆ ನೀವು ಉತ್ತರ ಹೇಳಬೇಕಾಗಿರುತ್ತದೆ.

**ನಮ್ಮವರು :–** 'ಮುಸ್ಲೀಮ್‌ರ ಗ್ರಂಥವನ್ನು ಹಿಂದೂ ಬರೆಯಬಾರದೆಂದು

ನೀವೆಂದಾಗ ಹಿಂದೂ ಗ್ರಂಥಗಳನ್ನು ಮುಸ್ಲೀಮ್‌ರು ಹೇಗೆ ಪ್ರಸ್ತಾಪಿಸಿ ಬರೆದಿದ್ದೀರಿ?' ಎಂದು ನಾವೂ ಸಹ ಕೇಳಬಲ್ಲೆವು. "ಸೃಷ್ಠಿಯನ್ನಲ್ಲ ಸೃಷ್ಠಿಕರ್ತನನ್ನೇ ಆರಾಧಿಸಿರಿ" ಎಂಬ ಹೆಸರಿನಿಂದ ಮುಸ್ಲೀಮ್‌ರು ಒಂದು ಚಿಕ್ಕ ಗ್ರಂಥವನ್ನು ಬರೆದು ಭಗವದ್ಗೀತೆ ಶ್ಲೋಕಗಳು ಮೊದಲುಗೊಂಡು, ವೇದಗಳ ವಾಕ್ಯಗಳು, ಉಪನಿಷತ್‌ಗಳ ಮಂತ್ರಗಳನ್ನು ಸಹ ಬರೆದು ಅವುಗಳಿಗೆ ವಿವರವನ್ನು ಹೇಳಿದ್ದೀರ. ಈಗ ನೀವು ಕೇಳಿದಂತೆ ನಾವು ನಮ್ಮ ಹಿಂದೂಗಳ ಗ್ರಂಥಗಳನ್ನು ಕುರಿತು ನೀವೇಕೆ ಬರೆದಿದ್ದೀರ? ನಿಮಗೆ ಹಾಗೆ ಬರೆಯುವುದಕ್ಕೆ ಏನು ಅಧಿಕಾರವಿದೆ? ಎಂದು ನಾವು ಕೇಳಬಹುದು. ಆದರೇ ನಾವು ಹಾಗೆ ಕೇಳುವುದಿಲ್ಲ. ನೀವು ನಮ್ಮ ಭಗವದ್ಗೀತೆಯನ್ನು, ವೇದಗಳನ್ನು, ಉಪನಿಷತ್ತುಗಳನ್ನು ಬರೆಯುವುದೇ ಅಲ್ಲದೆ, ಕ್ರೈಸ್ತವ ಮತದವರು ನಮ್ಮ ಗ್ರಂಥವೆಂದು ಹೇಳಿಕೊಳ್ಳುವ ಬೈಬಿಲ್‌ನ್ನು ಕುರಿತು ಸಹ ಬರೆದಿದ್ದೀರಿ. ನೀವಾದರೇ ಇತರ ಮತ ಗ್ರಂಥಗಳನ್ನು ಕುರಿತು ಬರೆಯಬಹುದು, ಹೇಳಬಹುದು, ನಾವಾದರೇ ನಿಮಗೆ ಸಂಬಂಧಪಟ್ಟಿರುವವು ಗಳನ್ನು ಕುರಿತು ಬರೆಯಬಾರದು, ಮಾತನಾಡಬಾರದಾ! ಇದು ನಾವು ನಿಮ್ಮನ್ನು ಕೇಳಬೇಕಾದ ಪ್ರಶ್ನೆಯೇ, ಆದರೂ ನಾವು ನಿಮ್ಮನ್ನು ಎಲ್ಲಿಯೂ ಕೇಳಲಿಲ್ಲ. ನೀವು ನಮ್ಮನ್ನು ಪ್ರಶ್ನಿಸಿದರೂ ನಾವು ನಿಮ್ಮನ್ನು ಪುನಃ ಕೇಳದೇ ಹೋಗುವುದಕ್ಕೆ ನಮಗೆ ಏನೂ ತಿಳಿಯದೆಂದು ಅಂದುಕೊಳ್ಳಬೇಡಿ. ನಾವು ದೇವರು ಹೇಳಿದ ಧರ್ಮಗಳಿಗು, ವಾಕ್ಯಗಳಿಗೂ ವಿರುದ್ಧವಾಗಿ ಎಲ್ಲೂ ಪ್ರವರ್ತಿಸುವುದಿಲ್ಲ ಮತ್ತು ಮಾತನಾಡುವುದು ಅಷ್ಟೇ ಅಲ್ಲದೆ ಭಗವದ್ಗೀತೆ, ಬೈಬಲ್, ಖುರ್‌ಆನ್ ಎಂಬ ಮೂರು ಗ್ರಂಥಗಳೂ ಸಾಧಾರಣ ಗ್ರಂಥಗಳು ಅಲ್ಲವೆಂದೂ, ಅವು ಮೂರು ದೈವಗ್ರಂಥಗಳೆಂದು ನಾವು ಎನ್ನುತ್ತಿದ್ದೇವೆ. ಮೂರು ದೈವಗ್ರಂಥಗಳಲ್ಲಿ ಯಾವುದರಲ್ಲಾಗಲೀ ಇದು ಇಂತಹ ಮತಕ್ಕೆ ಸಂಬಂಧಿಸಿದ ಗ್ರಂಥವೆಂದು ಎಲ್ಲೂ ದೇವರು ಹೇಳಲಿಲ್ಲ. ಅಂತಿಮ ದೈವಗ್ರಂಥವೆಂದು ಹೆಸರು ಇಡಲಾಗಿರುವ ಖುರ್‌ಆನ್ ಗ್ರಂಥದಲ್ಲಿ ಸೂರಾ 81, ಆಯತ್ 27ರಲ್ಲಿ **(81–27) "ಇದು ಸರ್ವಲೋಕವಾಸಿಗಳಿಗೂ ಹಿತೋಪದೇಶ"** ಎಂದು ಇದೆಯಾಗಲೀ ಕೇವಲ ಮುಸ್ಲೀಮ್‌ರಿಗೆ ಮಾತ್ರವೇ ಹೇಳಿದ ಜ್ಞಾನವೆಂದು ಇಲ್ಲ. ಆದ್ದರಿಂದ ಖುರ್‌ಆನ್

ಸಮಸ್ತ ಜನರಿಗೂ ಸಂಬಂಧಿಸಿದ ಗ್ರಂಥವೆಂದು ಅಂದುಕೊಳ್ಳುತ್ತಿದ್ದೇವೆ. ಅಷ್ಟೇ ಅಲ್ಲ ಉಳಿದ ಎರಡು ಗ್ರಂಥಗಳಾದ ಬೈಬಲ್, ಭಗವದ್ಗೀತೆಯೂ ಸಹ ಮನುಷ್ಯರೆಲ್ಲರಿಗೂ ಸಂಬಂಧಿಸಿದ ಗ್ರಂಥಗಳೆಂದು ಹೇಳಲ್ಪಟ್ಟಿವೆ. ಯಾವ ಗ್ರಂಥ ಯಾವ ಮತಕ್ಕೂ ಸಂಬಂಧಿಸಿರುವುದಿಲ್ಲ. ಯಾರಾದರೂ ಇಂತಹ ಗ್ರಂಥ ಇಂತಹ ಮತಕ್ಕೆ ಸಂಬಂಧಿಸಿರುವುದೆಂದು ಅಂದರೇ ಅವರು ದೈವಗ್ರಂಥಕ್ಕೆ, ದೇವರಿಗೆ ವಿರುದ್ಧವಾಗಿ ಮಾತನಾಡಿದಂತಾಗುತ್ತದೆ. ಖುರ್‌ಆನ್ ನಮ್ಮ ಗ್ರಂಥವೆಂದು ನೀವು ದೇವರ ಮಾತು ಆದ ಅಂತಿಮ ದೈವಗ್ರಂಥದಲ್ಲಿನ 81ನೇ ಸೂರಾಗು, 27ನೇ ಆಯತ್‌ಗೂ ವಿರುದ್ಧವಾಗಿ ಮಾತನಾಡಿದರೂ, ನಾವು ಮಾತ್ರ ಭಗವದ್ಗೀತೆ ನಮ್ಮ ಗ್ರಂಥವೆಂದು ಮಾತನಾಡುವುದಿಲ್ಲ. ಮೂರು ಗ್ರಂಥಗಳು ಸರ್ವ ಮಾನವರಿಗೂ ಸಂಬಂಧಿಸಿದ ಗ್ರಂಥಗಳಾಗಿರುವುದರಿಂದ ನಮಗೆ ಅವುಗಳನ್ನು ಕುರಿತು ಮಾತನಾಡುವ ಹಕ್ಕು, ಅಧಿಕಾರವಿದೆಯೆನ್ನುವ ಉದ್ದೇಶದಿಂದ ನಮ್ಮ ಗುರುಗಳಾದ ಯೋಗೀಶ್ವರರು **"ಅಂತಿಮ ದೈವಗ್ರಂಥದಲ್ಲಿ ಜ್ಞಾನ ವಾಕ್ಯಗಳು"** ಬರೆದಿದ್ದಾರೆ.

**ಮುಸ್ಲೀಮ್ :–** ಖುರ್‌ಆನ್ ಸರ್ವಮಾನವರಿಗೂ ಹೇಳಿದ ಗ್ರಂಥವೇ ನಾವು ಅಲ್ಲ ಎಂದು ಹೇಳುತ್ತಿಲ್ಲವಲ್ಲವೆ! ಅರಬ್ಬೀ ಭಾಷೆ ಬಾರದವರು ನಮ್ಮ ಗ್ರಂಥವನ್ನು ಹೇಗೆ ಬರೆದಿದ್ದೀರ.? ಅರಬ್ಬೀ ಭಾಷೆ ತಿಳಿದಿದ್ದರೇನೆ ಆಯತ್‌ಗಳಿಗೆ ವಿವರ ಹೇಳಬಲ್ಲರು. ಅದು ಅಲ್ಲದೇ ಖುರ್‌ಆನ್ ಗ್ರಂಥ ಅರಬ್ಬೀ ಭಾಷೆಯಲ್ಲೇ ಓದಬೇಕು, ಅರಬ್ಬೀ ಭಾಷೆಯಲ್ಲಿಯೇ ಬರೆಯಬೇಕು ಎಂಬ ನಿಯಮ ನಮ್ಮ ಮುಸ್ಲೀಮ್ ಸಮಾಜದಲ್ಲಿ ಇದೆ. ಅದನ್ನು ಅಲ್ಲಗಳೆದು ನೀವು ಕನ್ನಡದಲ್ಲಿ ಬರೆದರೂ ನಾವು ಯಾರೂ ಓದುವುದಿಲ್ಲ, ಯಾವ ಮುಸ್ಲೀಮ್ ಆದರೂ ಅರಬ್ಬೀ ಭಾಷೆಯಲ್ಲೇ ಖುರ್‌ಆನ್ ಗ್ರಂಥವನ್ನು ಓದಬೇಕು. ಹಾಗಾದರೇನೆ ವಾಕ್ಯಗಳೊಂದರ ಭಾವ ಬದಲಾಗದಂತಿರುತ್ತದೆ. ಹೀಗೆ ಕನ್ನಡದಲ್ಲಿ ಅದೂ ಅರಬ್ಬೀ ಭಾಷೆ ತಿಳಿಯದವರು ಬರೆಯುವುದರಿಂದ ಖುರ್‌ಆನ್ ಗ್ರಂಥದಲ್ಲಿ ಭಾವ ಬದಲಾಗಿಹೋಗುತ್ತದೆ. ದೇವರು ಹೇಳಿರುವುದು ಸರಿಯಾಗಿ

ಅರ್ಥವಾಗದಂತೆ ಹೋಗುತ್ತದೆ. ಆದ್ದರಿಂದ ಇತರರು ಖುರ್‌ಆನ್ ಗ್ರಂಥವನ್ನು ಬರೆಯಬಾರದು. ಮುಸ್ಲೀಮ್‌ರೇ ಬರೆಯಬೇಕು. ನಮ್ಮನ್ನು (ಮುಸ್ಲೀಮ್‌ರನ್ನು) ಸಂಪರ್ಕಿಸದಂತೆ ಯಾರೂ ಖುರ್‌ಆನ್ ಗ್ರಂಥವನ್ನು ಬರೆಯಬಾರದು. ಒಂದು ವೇಳೆ ಬರೆಯಬೇಕೆಂದುಕೊಂಡರೇ ನಮ್ಮ ಅನುಮತಿ ತೆಗೆದುಕೊಂಡು ಬರೆಯಬೇಕು. ಆದ್ದರಿಂದ ನೀವೇಕೆ ಬರೆದಿದ್ದೀರಾ? ಯಾರ ಅನುಮತಿಯಿಂದ ಬರೆದಿದ್ದೀರ? ಯಾವ ಅಧಿಕಾರದಿಂದ ಬರೆದಿದ್ದೀರೆಂದು ಕೇಳುತ್ತಿದ್ದೇವೆ.

**ನಮ್ಮವರು :–** ನೀವು "ಭಗವದ್ಗೀತೆಯಲ್ಲಿನ ಶ್ಲೋಕಗಳಿಗೆ ವಿವರವನ್ನು ಬರೆದಾಗ ಹಿಂದೂಗಳ ಅನುಮತಿ ತೆಗೆದುಕೊಂಡು ಬರೆದಿದ್ದೀರಾ? ವೇದಗಳು, ಉಪನಿಷತ್ತುಗಳ ಮಂತ್ರಗಳಿಗೆ ಭಾವಗಳನ್ನು ಬರೆದಾಗ ಯಾರ ಅನುಮತಿ ತೆಗೆದುಕೊಂಡು ಬರೆದಿದ್ದೀರ?" ಎಂದು ನಾವೂ ಸಹ ಕೇಳಬಹುದೆಂದು ಮೊದಲ ಪ್ರಶ್ನೆಯಲ್ಲಿಯೇ ಹೇಳಿದ್ದೇವೆ. ದೇವರ ಗ್ರಂಥ ಎಲ್ಲರಿಗೂ ಸಂಬಂಧಿಸಿರುವುದೇಯೆಂದು ಅದಕ್ಕೆ ಯಾರ ಅನುಮತಿ ಅವಶ್ಯವಿಲ್ಲವೆಂದು ಸಹ ಹೇಳಿದ್ದೇವೆ. ಈಗ ಹೊಸದಾಗಿ ಅರಬ್ಬೀ ಭಾಷೆಯನ್ನು ಅಡ್ಡ ಇಟ್ಟುಕೊಂಡು ಅರಬ್ಬೀ ಭಾಷೆಯಲ್ಲಿಯೇ ಬರೆಯಬೇಕಲ್ಲವೆ! ಅರಬ್ಬೀ ಭಾಷೆ ಬರುವವರೇ ಬರೆಯಬೇಕಲ್ಲವೆ! ಎಂದು ಕೇಳುತ್ತಿದ್ದೀರ. ಅದಕ್ಕೆ ಬದಲು ಮುಸ್ಲೀಮ್‌ರು ಭಗವದ್ಗೀತೆ ಶ್ಲೋಕಗಳ ವಿವರಗಳು ಬರೆದವರು ಸಂಸ್ಕೃತವನ್ನು ಕಲಿತವರಾ ಎಂದು ಕೇಳುತ್ತಿದ್ದೇವೆ. ನೀವು ಕೇಳಿದ್ದೀರೆಂದು ನಾವು ಅದೇ ಪದ್ಧತಿಯಲ್ಲಿ ಕೇಳುವುದು ಸರಿಯಾದ ಪದ್ಧತಿ ಅಲ್ಲ. ನಾವು ಯಾವ ಉತ್ತರ ಹೇಳಿದರೂ ದೈವಗ್ರಂಥವನ್ನು ಆಧಾರ ಮಾಡಿಕೊಂಡೇ ಹೇಳುತ್ತೇವೆ. ದೇವರು ಮೊದಲು ಜ್ಞಾನವನ್ನು ಹೇಳಿದಾಗ ಕೇಳುವ ಮನುಷ್ಯ ಯಾವ ಭಾಷೆ ತಿಳಿದಿದ್ದಾನೋ, ಯಾವ ಭಾಷೆದವನೋ ಆ ಭಾಷೆಯಲ್ಲಿಯೇ ಜ್ಞಾನವನ್ನು ಹೇಳಿದ್ದಾನೆ. ಐದು ಸಾವಿರ (5000) ಸಂವತ್ಸರಗಳ ಪೂರ್ವದಲ್ಲಿ ಕೃಷ್ಣನು ಭಗವಂತನಾಗಿ ಬಂದಾಗ ಹಿಂದೀ ಭಾಷೆಯಲ್ಲಿಯೇ ಅರ್ಜುನನಿಗೆ ಜ್ಞಾನವನ್ನು ಹೇಳಿದ್ದಾನೆ. ಎರಡು ಸಾವಿರ (2000) ಸಂವತ್ಸರಗಳ ಪೂರ್ವದಲ್ಲಿ ಏಸು ಬಂದಾಗ ಆ ಪ್ರಾಂತೀಯ

ಭಾಷೆಯಲ್ಲಿಯೇ ಅಲ್ಲಿನ ಪ್ರಜೆಗಳಿಗೆ ತನ್ನ ಬೋಧನೆಯನ್ನು ಹೇಳಿದ್ದಾನೆ. 1400 ಸಂವತ್ಸರಗಳ ಸಮಯದಲ್ಲಿ ಜಿಬ್ರಯೇಲ್ ಭೂಮಿ ಮೇಲೆಗೆ ಬಂದು ಮುಹಮ್ಮದ್ ಪ್ರವಕ್ತರಿಗೆ ಜ್ಞಾನವನ್ನು ತಿಳಿಸಿದಾಗ ಅಲ್ಲಿನ ಪ್ರಾಂತೀಯ ಭಾಷೆಯಾದ ಅರಬ್ಬೀ ಭಾಷೆಯಲ್ಲಿಯೇ ಹೇಳಿಹೋಗಿದ್ದಾನೆ. ಈ ರೀತಿ ಗತದಲ್ಲಿ ನಡೆದಿರುವಾಗ ಖುರ್‌ಆನ್ ಗ್ರಂಥವನ್ನು ಅರಬ್ಬೀ ಭಾಷೆಯಲ್ಲಿಯೇ ಬರೆಯಬೇಕೆಂದು ಅರಬ್ಬೀ ಭಾಷೆಯಲ್ಲಿಯೇ ಹೇಳಬೇಕೆಂದು, ಅರಬ್ಬೀ ಭಾಷೆಯಲ್ಲಿಯೇ ಓದಬೇಕೆಂದು ಅದನ್ನು ಹೇಳಿದ ಜಿಬ್ರಯೇಲ್ ಆಗಲೀ, ದೇವರು ತನ್ನ ವಾಕ್ಯವಾಗಿ ಆಗಲೀ ಎಲ್ಲೂ ಹೇಳಲಿಲ್ಲ. ಹಾಗಿರುವಾಗ ಅರಬ್ಬೀ ಭಾಷೆಗು ದೇವರ ಜ್ಞಾನಕ್ಕೂ ಸಂಬಂಧವೇನು? ಎಂದು ಕೇಳುತ್ತಿದ್ದೇವೆ. ಅಷ್ಟೇಕೆ ಅದೇ ಖುರ್‌ಆನ್ ಗ್ರಂಥದಲ್ಲಿ 14ನೇ ಸೂರಾದಲ್ಲಿ, 4ನೇ ಆಯತ್‌ನಲ್ಲಿ ಹೀಗೆ ಹೇಳಿದ್ದಾನೆ, **(14–4) "ನಾವು ಯಾವ ಪ್ರವಕ್ತನನ್ನು ಕಳುಹಿಸಿದರೂ ಆತನು ವಿಷಯವನ್ನು ಸ್ಪಷ್ಟವಾಗಿ ಬಿಡಿಸಿ ಹೇಳುವುದಕ್ಕೆ ಅನುವಾಗಿ ಕೇಳುವ ಪ್ರಜೆಗಳು ಮಾತನಾಡುವ ಭಾಷೆಯಲ್ಲಿ ಹೇಳಬಲ್ಲವನಾಗಿ ಮಾಡಿ ಕಳುಹಿಸಿದ್ದೇವೆ. ಆ ಮೇಲೆ ಅಲ್ಲಾ ತಾನು ಕೋರಿದವರನ್ನು ಅಪಮಾರ್ಗ ಹಿಡಿಸುತ್ತಾನೆ. ತಾನು ಕೋರಿದವರಿಗೆ ಸನ್ಮಾರ್ಗವನ್ನು ತೋರಿಸುತ್ತಾನೆ. ಆತನು (ದೇವರು) ಸರ್ವಾಧಿಕ್ಯನು, ವಿವೇಕವಂತನು"** ದೈವಗ್ರಂಥದಲ್ಲಿನ ದೇವರ ವಾಕ್ಯವಾದ ಈ ಆಯತ್‌ನ್ನು ನೋಡಿದ ನಂತರ ಅರಬ್ಬೀ ಭಾಷೆಯಲ್ಲೇ ಓದಬೇಕು, ಬರೆಯಬೇಕು ಎನ್ನುವುದರಲ್ಲಿ ಅರ್ಥವಿಲ್ಲ. ನೀವು ಒಬ್ಬ ಮುಸ್ಲೀಮ್ ಆಗಿದ್ದು, ಒಬ್ಬ ಆಧ್ಯಾತ್ಮಿಕ ಸಂಸ್ಥೆಯನ್ನು ಸ್ಥಾಪಿಸಿದವರಾಗಿದ್ದು ಮಾತನಾಡುವುದು ನಿಮಗೆ ಸರಿಯೇನಾ! ಎಂದು ಕೇಳುತ್ತಿದ್ದೇವೆ. ನೀವು ಮಾತನಾಡಿರುವ ವಿಧಾನ ದೇವರ ವಾಕ್ಯಕ್ಕೆ ಭಂಗ ಉಂಟುಮಾಡುವುದಾಗಿದೆ. ಖುರ್‌ಆನ್‌ನಲ್ಲಿನ (14–4) ವಾಕ್ಯವನ್ನು ಅಗೌರವಪಡಿಸಿದಂತಿರುತ್ತದೆ. ಆದ್ದರಿಂದ ವಾಕ್ಯದ ಕೊನೆಯಲ್ಲಿ ದೇವರು ಪ್ರತ್ಯೇಕಿಸಿ ಒಂದು ಮಾತನ್ನು ಹೇಳಿದ್ದಾನೆ. ಅದು **"ಅಲ್ಲಾ ತಾನು ಕೋರಿದವರನ್ನು ಅಪಮಾರ್ಗ ಹಿಡಿಸುತ್ತಾನೆ"** ಎಂದು ಎಚ್ಚರಿಸಿ ಹೇಳಿದ್ದಾನೆ. ಆ ಮಾತಿನಲ್ಲಿನ ಅರ್ಥದ ಪ್ರಕಾರ ದೇವರ ಮಾತನ್ನು ಲೆಕ್ಕ ಮಾಡದೆ ತಮಗೆ ಇಷ್ಟ ಬಂದಂತೆ

ಮಾತನಾಡುವವರಿಗೆ ಅಪಮಾರ್ಗ ತಪ್ಪುವುದಿಲ್ಲವೆಂದು ತಿಳಿಯುತ್ತಿದೆ. ನೀವು ಖುರ್‌ಆನ್‌ನನ್ನು ಓದದ ವ್ಯಕ್ತಿಗಳು ಸಹ ಅಲ್ಲ. ಖುರ್‌ಆನ್ ಗ್ರಂಥವನ್ನು ಓದಿಯೂ ಸಹ ಅರಬ್ಬೀ ಭಾಷೆಯನ್ನು ಕುರಿತು ಮಾತನಾಡುವುದು ಒಳ್ಳೆಯದಾ! ಎಂದು ಕೇಳುತ್ತಿದ್ದೇವೆ.

ಅರಬ್ ದೇಶದಲ್ಲಿ ಅರಬ್ಬೀ ಮಾತನಾಡುತ್ತಾರೆ. ಆದ್ದರಿಂದ ಮೊದಲು ಅಲ್ಲಿನ ಭಾಷೆಯಲ್ಲಿಯೇ ಖುರ್‌ಆನ್ ಜ್ಞಾನ ಹೇಳಲಾಗಿದೆ, ನಂತರ ಬರೆಯಲಾಗಿದೆ. ಆ ಪ್ರಾಂತ ಭಾಷೆ ಅರಬ್ಬೀ ಭಾಷೆ ಆಗಿರುವುದರಿಂದ ದೇವರು ಕಳುಹಿಸಿದ ಜಿಬ್ರಯೇಲ್ ಅರಬ್ಬೀ ಭಾಷೆಯಲ್ಲೇ ಜ್ಞಾನವನ್ನು ಹೇಳಿದ್ದಾನೆ. ಅದೇ ಜ್ಞಾನ ನಂತರ ಯಾವ ಪ್ರಾಂತದೊಳಗೆ ಹೋದರೇ ಅಲ್ಲಿನವರು ತಿಳಿದ ಆ ಪ್ರಾಂತ ಭಾಷೆಯಲ್ಲಿಯೇ ಮಾತನಾಡಬೇಕಾಗಿರುತ್ತದೆ. ಅದಕ್ಕೆ ತಾರ್ಕಾಣ ಖುರ್‌ಆನ್ ಗ್ರಂಥದಲ್ಲಿ ಹೇಳಿದ 14–4 ವಾಕ್ಯವೇಯೆಂದು ಹೇಳಬಹುದು. ದೈವಗ್ರಂಥದಲ್ಲಿನ ದೇವರ ವಾಕ್ಯವನ್ನು ಅನುಸರಿಸಿ ಇಲ್ಲಿನ ಪ್ರಜೆಗಳು ಕನ್ನಡ ಭಾಷೆ ತಿಳಿದವರಾಗಿರುವುದರಿಂದ ನಮ್ಮ ಗುರುಗಳು ಇಲ್ಲಿನವರಿಗೆ ಅರ್ಥ ವಾಗುವಂತೆ ಕನ್ನಡ ಭಾಷೆಯಲ್ಲಿಯೇ ಬರೆಯುವುದು ನಡೆದಿದೆ. “ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ” ಎಂಬ ಹೆಸರಿರುವ ಸಂಸ್ಥೆಯವರು ಬಂದು ನಮ್ಮ ಗುರುಗಳೊಂದಿಗೆ ಭೇಟಿಯಾಗಿ ನೀವು ಭಗವದ್ಗೀತೆಯನ್ನು **“ತ್ರೈತ ಸಿದ್ಧಾಂತ ಭಗವದ್ಗೀತೆ”** ಎಂಬ ಹೆಸರಿನಿಂದ ವಿವರಿಸಿ ಬರೆದಿದ್ದೀರ. ಇಲ್ಲಿಯವರೆಗು ಎಷ್ಟೋ ಜನ ಬರೆದ ಭಗವದ್ಗೀತೆಗಳಿಗಿಂತ ನೀವು ಬರೆದ ವಿವರ ಬಹಳ ಚೆನ್ನಾಗಿದೆ. ಇಲ್ಲಿಯವರೆಗೂ ಯಾರಿಗೂ ತಿಳಿಯದ ಜ್ಞಾನ ರಹಸ್ಯಗಳನ್ನು ತಿಳಿಸಿದ್ದೀರ. ಹಾಗೇ ಖುರ್‌ಆನ್ ಗ್ರಂಥವನ್ನು ಸಹ ನೀವು ವಿವರಿಸಿ ಬರೆದು, ಅದರಲ್ಲಿ ಇಲ್ಲಿಯವರೆಗೂ ತಿಳಿಯದಂತೆ ಅಡಗಿರುವ ಜ್ಞಾನವನ್ನು ತಿಳಿಸುವಿರೆಂದು ಕೇಳುತ್ತಿದ್ದೇವೆ. ನೀವು ಖುರ್‌ಆನ್ ಗ್ರಂಥವನ್ನು ವಿವರಿಸಿ ಬರೆದರೇ ನಿಮ್ಮ ಮೇಲೆ ನಂಬಿಕೆಯಿರುವ ಹಿಂದೂಗಳು ಸಹ ಖುರ್‌ಆನ್ ಗ್ರಂಥವನ್ನು ಓದಬಲ್ಲರು” ಎಂದು ಕೇಳಿದ್ದಾರೆ. ಆಗ ನಮ್ಮ ಗುರುಗಳು

ಮುಸ್ಲೀಮ್‌ರ ಕೋರಿಕೆ ಮೇರೆಗೆ ಖುರ್‌ಆನ್ ಗ್ರಂಥವೆಲ್ಲವನ್ನೂ ಬರೆಯದೆ ಮನುಷ್ಯನಿಗೆ ಅವಶ್ಯವಿರುವ ವಾಕ್ಯಗಳಿಗೆ (ಆಯತ್‌ಗಳಿಗೆ) ಮಾತ್ರ ವಿವರವನ್ನು ಬರೆಯುತ್ತೇವೆಂದು ಹೇಳಿದ್ದಾನೆ. ಅದೇ ಮಾತಿನ ಪ್ರಕಾರ ಕೆಲವು ವಾಕ್ಯಗಳಿಗೆ ಮಾತ್ರವೇ ವಿವರವನ್ನು ಬರೆದು **"ಅಂತಿಮ ದೈವಗ್ರಂಥದಲ್ಲಿ ಜ್ಞಾನ ವಾಕ್ಯಗಳು"** ಎಂಬ ಹೆಸರಿನಿಂದ ಗ್ರಂಥವನ್ನು ಬಿಡುಗಡೆ ಮಾಡಿದ್ದಾರೆ. ನಮ್ಮ ಗುರುಗಳು ಮುಸ್ಲೀಮ್ ಸಂಸ್ಥೆಯವರು ಕೇಳಿರುವುದಕ್ಕೆ ಗ್ರಂಥವನ್ನು ಬರೆಯುವುದರಿಂದ ಆ ಮುಸ್ಲೀಮ್ ಸಂಘದವರೇ ಆ ಗ್ರಂಥವನ್ನು ಮುದ್ರಿಸಿದ್ದಾರೆ. ನಮ್ಮ ಗುರುಗಳಾದ ಯೋಗೀಶ್ವರರು ಬರೆಯುವುದರಿಂದ ಮುಸ್ಲೀಮ್‌ರಿಗಿಂತ ಹಿಂದೂಗಳೇ ಹೆಚ್ಚಾಗಿ ಓದುವುದು ನಡೆದಿದೆ. ಇಲ್ಲಿಯವರೆಗು ಓದಿದ ಹಿಂದೂಗಳು ಖುರ್‌ಆನ್ ಗ್ರಂಥದಲ್ಲಿ ಇಷ್ಟು ದೊಡ್ಡ ಜ್ಞಾನ ರಹಸ್ಯಗಳಿವೆಯಾ? ಎಂದು ಆಶ್ಚರ್ಯ ಪಡುತ್ತಿದ್ದಾರೆ. ಇಲ್ಲಿಯವರೆಗು ಖುರ್‌ಆನ್ ಗ್ರಂಥವನ್ನು ಕುರಿತು ತಿಳಿಯದ ಹಿಂದುಗಳೆಲ್ಲರಿಗೂ ಖುರ್‌ಆನ್ ಗ್ರಂಥವೊಂದರ ಶ್ರೇಷ್ಠತ್ವ ತಿಳಿದುಹೋಗಿದೆ. ನಿಮ್ಮ ಮುಸ್ಲೀಮ್‌ರು ಖುರ್‌ಆನ್ ಗ್ರಂಥವನ್ನು ಕುರಿತು ಇಲ್ಲಿಯವರೆಗು ಹಿಂದೂಗಳಿಗೆ ತಿಳಿಸಲಾರದೆ ಹೋದರೂ ಸಮಾಚಾರವನ್ನು ಈಗ ನಮ್ಮ ಗುರುಗಳು ತಿಳಿಸುವುದು ನಡೆದಿದೆ. ನಮ್ಮ ಗುರುಗಳು ಮಾಡಿದ ಕೆಲಸಕ್ಕೆ ಎಷ್ಟೋ ಮುಸ್ಲೀಮ್‌ರು ಸಂತೋಷಿಸುತ್ತಾ ಇದ್ದರೇ ಅದಕ್ಕೆ ವಿರುದ್ಧವಾಗಿ ನೀವು ಮಾತನಾಡುತ್ತಿದ್ದೀರ. ನಮ್ಮ ಗುರುಗಳ ಹತ್ತಿರಕ್ಕೆ ಎಲ್ಲ ಮತಗಳವರು ಬಂದು ತಮ್ಮ ಗ್ರಂಥದಲ್ಲಿ ತಿಳಿಯದ ಜ್ಞಾನವನ್ನು ತಿಳಿದುಕೊಳ್ಳುತ್ತಿದ್ದಾರೆ. ನಮ್ಮ ಗುರುಗಳು ಒಂದು ಹಿಂದೂ ಮತದಲ್ಲಿನ ಪ್ರಜೆಗಳಿಗೇ ಅಲ್ಲದೆ ಮೂರು ಮತಗಳವರಿಗೂ ಜ್ಞಾನವನ್ನು ತಿಳಿಸುತ್ತಿದ್ದಾರೆ. ಆತನು ಎಲ್ಲಾ ಮತಗಳೂ ನನಗೆ ಸಮಾನವೇ, ಎಲ್ಲಾ ಮತಗಳು ನನ್ನವೇ ಎಂದು ಅನ್ನುತ್ತಿದ್ದಾನೆ. ಆದ್ದರಿಂದ ಎಲ್ಲ ಮತಗಳವರೂ ಬಂದು ಸಂತೋಷದಿಂದ ಜ್ಞಾನವನ್ನು ಕೇಳಿ ತಿಳಿದುಕೊಳ್ಳುತ್ತಿದ್ದಾರೆ, ನೀವೇನೊ ಅಸೂಯದಿಂದ ಮಾತನಾಡುತ್ತಿದ್ದೀರ.

**ಮುಸ್ಲೀಮ್ :–** ನೀವು ನಿಮ್ಮ ಗುರುಗಳನ್ನು ಕುರಿತು ದೊಡ್ಡದಾಗಿ ಮಾತನಾಡ ಬಹುದು. ಸ್ವಲ್ಪ ತಿಳಿದಷ್ಟು ಮಾತ್ರಕ್ಕೆ ಎಲ್ಲಾ ತಿಳಿದಿದೆಯೆಂದು ಕೊಳ್ಳುವುದು ತಪ್ಪು. ನಿಮ್ಮ ಗುರುಗಳು ಬರೆದ ಖುರ್‌ಆನ್‌ನಲ್ಲಿ ಜ್ಞಾನವಾಕ್ಯಗಳನ್ನು ಗ್ರಂಥದಲ್ಲಿ ದೇವರು ಮನುಷ್ಯನಾಗಿ ಹುಟ್ಟುವನೆಂದು ಬರೆದಿದ್ದೀರ. ದೇವರು ಮನುಷ್ಯನಾಗಿ ಹುಟ್ಟುವನೆಂಬ ಮಾತು ಪೂರ್ತಿ ಅಸತ್ಯ, ಅಜ್ಞಾನ. ನಮ್ಮ ಮುಸ್ಲೀಮ್ ಸಮಾಜ ಈ ಮಾತನ್ನು ಯಾವ ಕಾರಣಕ್ಕೂ ಒಪ್ಪಿಕೊಳ್ಳುವುದಿಲ್ಲ. ಭಗವದ್ಗೀತೆಯಲ್ಲೂ ಸಹ ದೇವರು ಸಾವು ಹುಟ್ಟುಗಳು ಇಲ್ಲದವನೆಂದು ಇದೆ. ನಿಮಗೆ ತಿಳಿಯದೇ ಹೋದರೇ ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ ಆರನೇ ಶ್ಲೋಕದಲ್ಲಿ ಈ ಮಾತು ಹೇಳಿದ್ದಾನೆ.

**ಶ್ಲೋ॥ ಅಜೋೀಪಿ ಸನ್ನವ್ಯಯಾತ್ಮಾ ಭೂತಾನಾ ಮೀಶ್ವರೋೀಪಿ ಸನ್।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಮ್ಭವಾ ಮ್ಯಾತ್ಮಮಾಯಯಾ॥**

ಈ ಶ್ಲೋಕ ಭಾವದಲ್ಲಿ "ಜೀವರಾಶಿಗಳಿಗೆ ದೇವರಾದ ನಾನು ಸಾಯುವವನೂ ಅಲ್ಲ ಹುಟ್ಟುವವನೂ ಅಲ್ಲ. ಪ್ರಕೃತಿಯೊಂದಿಗೆ ಕೂಡಿ ನನ್ನ ಆತ್ಮ ಹುಟ್ಟುತ್ತಿದೆ" ಎಂದು ಹೇಳಿದ್ದಾನೆ. ಈ ಶ್ಲೋಕದಲ್ಲಿ ನನ್ನ ಆತ್ಮ ಹುಟ್ಟುತ್ತಿದೆ ಎಂದಿದ್ದಾನಾಗಲೀ ನಾನು ಹುಟ್ಟುತ್ತಿದ್ದೇನೆಂದು ಹೇಳಲಿಲ್ಲವಲ್ಲವೇ! ನನಗೆ ಹುಟ್ಟುವಿಕೆ ಇಲ್ಲವೆಂದು ಸಹ ಹೇಳಿದ್ದಾನಲ್ಲವೆ! ಹಾಗಿರುವಾಗ ನೀವು ಎಲ್ಲಾ ತಿಳಿದವರಂತೆ ದೇವರು ಬಂದು ಮನುಷ್ಯನಾಗಿ ಅವತರಿಸುತ್ತಾನೆಂದು ಹೇಳಿದ್ದೀರಾ? ಇಷ್ಟು ಘೋರವಾಗಿ ಅಜ್ಞಾನವನ್ನು ಬೋಧಿಸುತ್ತಾ ನಾವು ಎಲ್ಲಾ ಮತಗಳಿಗು ಜ್ಞಾನವನ್ನು ಹೇಳುತ್ತಿದ್ದೇವೆನ್ನುತ್ತೀರಾ? ದೇವರು ಮನುಷ್ಯನಾಗಿ ಹುಟ್ಟುವನೆಂದು ಹೇಳುವುದು ಚಿಕ್ಕ ವಿಷಯವಲ್ಲ. ಈ ವಿಷಯವನ್ನು ನಾವು ಸುಲಭವಾಗಿ ಬಿಡುವುದಿಲ್ಲ, ನಿಮ್ಮನ್ನು ಕೋರ್ಟಿಗೆ ಎಳೆದಾಗಲೀ ನಿಮ್ಮಿಂದ ತಪ್ಪು ಎಂದು ಒಪ್ಪಿಸುತ್ತೇವೆ. ಈ ವಿಷಯದಲ್ಲಿ ನಾವು ಯಾವ ಕಾರಣಕ್ಕೂ ಒಪ್ಪಿಕೊಳ್ಳುವುದಿಲ್ಲ. ನಿಮ್ಮೆಲ್ಲರನ್ನೂ ಹೊರಗೆ ಎಳೆದು ಎಲ್ಲರಿಂದ ನಿಮ್ಮನ್ನು ಅಜ್ಞಾನಿಗಳೆಂದು ನಿರೂಪಿಸುತ್ತೇವೆ.

**ನಮ್ಮವರು :–** ನೀವು ನಿದಾನವಾಗಿ ಮಾತನಾಡಿ, ಏಕೆ ಅಷ್ಟು ಆವೇಶ ಪಡುತ್ತಿದ್ದೀರಾ! ನಾವೂ ನಿಮ್ಮಂತೇ ಜೋರಾಗಿ ಅರಚಬಲ್ಲೆವು. ನಾವು ಇಲ್ಲಿಗೆ ಜೋರಾಗಿ ಅರಚುವುದಕ್ಕೂ, ರೊಚ್ಚಿಗೆದ್ದು ಮಾತನಾಡುವುದಕ್ಕೂ ಬಂದಿಲ್ಲ. ನಿಧಾನವಾಗಿ ನೀವು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳುವುದಕ್ಕೆ ಬಂದಿದ್ದೇವೆ. ನಿಮಗೆ ಉತ್ತರ ಹೇಳಬೇಕಾದ ಅಗತ್ಯವೂ ಸಹ ನಮಗಿಲ್ಲ. ನೀವು ಕೋರ್ಟಿಗೆ ಹೋಗುತ್ತೇವೆಂದರೆ ಹೋಗಿ. ನೀವು ಒಂದು ಕೇಸು ಇಟ್ಟರೇ ನಾವು ನಿಮ್ಮಮೇಲೆ ಇಪ್ಪತ್ತು ಕೇಸುಗಳನ್ನು ಇಡಬಲ್ಲೆವು. ಆಗ ಅಲ್ಲಿರುವ ಉಳಿದ ಮುಸ್ಲೀಮ್‌ರು ಸಹ ಆತನನ್ನು ಮೆಲ್ಲನೆ ಮಾತನಾಡೆಂದು ಹೇಳಿ ಸರಿಮಾಡಿದರು. ಆಗ ಪುನಃ ನಾವೂ ಸಹ ನಿಧಾನವಾಗಿ ಮಾತನಾಡುತ್ತಾ ಬಂದಿದ್ದೇವೆ. ನೀವು ಭಗವದ್ಗೀತೆ ಶ್ಲೋಕವನ್ನು ಹೇಳಿ ಅದಕ್ಕೆ ಅರ್ಥವನ್ನು ಹೇಳಿದ್ದೀರ. ಅದಕ್ಕೆ ನಾವು ಒಪ್ಪಿಕೊಳ್ಳುತ್ತೇವೆ. ನಮಗಿಂತ ನೀವೇ ಶ್ಲೋಕವನ್ನು ಚೆನ್ನಾಗಿ ಹೇಳಿದ್ದೀರ. ಆದರೇ ನಿಮಗೆ ಅನುಕೂಲವಾಗಿ ಶ್ಲೋಕವೊಂದರ ಭಾವವನ್ನು ಹೇಳಿದ್ದೀರ. ದೇವರು ಆತ್ಮ ಜನಿಸುತ್ತಿದೆಯೆಂದು ಹೇಳಿದ್ದಾನಾಗಲೀ ನಾನು ಹುಟ್ಟುತ್ತೇನೆಂದು ಹೇಳಲಿಲ್ಲವಲ್ಲವೆ! ಎಂದು ಕೇಳಿದ್ದೀರ ನೀವು ಹೇಳಿದ ಮಾತನ್ನು ನಾವು ಅಲ್ಲ ಎನ್ನಲಾರೆವು.

ದೇವರು ಹೇಳಿರುವುದನ್ನು ನಾವು ಸರಿಯಾಗಿ ಅರ್ಥಮಾಡಿಕೊಳ್ಳದಿರ ಬಹುದು ಆದರೆ, ದೇವರು ಮಾತ್ರ ಯಾವಾಗ ಹೇಳಿದರೂ ಒಂದೇ ಜ್ಞಾನವನ್ನು ಹೇಳುವನು. ಒಂದೊಂದು ಕಡೆ ಒಂದೊಂದನ್ನು ಮಾತನಾಡುವುದಿಲ್ಲ. ಅದೇ ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗವೆನ್ನುವ ಅಧ್ಯಾಯದಲ್ಲಿ ಹನ್ನೊಂದನೇ ಶ್ಲೋಕದಲ್ಲಿ ಹೇಳಿದ ಮಾತನ್ನು ಒಂದುಬಾರಿ ನೋಡೋಣ.

**ಶ್ಲೋ॥ ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನು ಮಾಶ್ರಿತಮ್।**
**ಪರಂಭಾವ ಮಜಾನನ್ತೋ ಮಮ ಭೂತ ಮಹೇಶ್ವರಮ್ ॥**

**ಭಾವಾರ್ಥ :– "ಸರ್ವ ಜೀವರಾಶಿಗಳಿಗು ದೇವರಾದ ನನ್ನನ್ನು ನನ್ನ ಮಹತ್ವವನ್ನು ತಿಳಿಯದ ಮೂಢರು ಮಾನವ ಶರೀರವನ್ನು ಧರಿಸಿದ ನನ್ನನ್ನು**

**ಅವಮಾನಿಸುತ್ತಿದ್ದಾರೆ."** ಇಲ್ಲಿ ಈ ಶ್ಲೋಕದಲ್ಲಿ **"ಮಾನುಷೀಂ ತನುಮಾಶ್ರಿತಮ್"** ಎಂದು ಮಾನವ ಶರೀರವನ್ನು ಧರಿಸಿದ ಎಂದು ಸ್ಪಷ್ಟವಾಗಿ ಹೇಳಿದರೂ ದೇವರು ಮನುಷ್ಯನಾಗಿ ಬರುವುದಿಲ್ಲ ಎಂದು ಹೇಳುವುದರಲ್ಲಿ ಅರ್ಥವಿಲ್ಲ, ಯಾರಾದರೂ ತಿಳಿಯದ ಅಜ್ಞಾನಿಗಳು ಆ ಮಾತನ್ನು ಅನ್ನಬಹುದಾಗಲೀ ಅಷ್ಟೋ ಇಷ್ಟೋ ಜ್ಞಾನ ತಿಳಿದಿದೆ ಎನ್ನುವವರು ದೇವರು ಮನುಷ್ಯನಾಗಿ ಹುಟ್ಟುವುದಿಲ್ಲ ಎಂದರೆ ಹೇಗೆ ನಮಗೆ ಜ್ಞಾನವಿದ್ದಂತೆ? ದೇವರ ವಾಕ್ಯವನ್ನು ನಾವು ಹೇಗೆ ತಿಳಿದುಕೊಂಡಂತೆ? **"ಮನುಷ್ಯ ದೇವರು ಆಗುವುದಿಲ್ಲ ಆದರೇ, ಮನುಷ್ಯನಾಗಿ ದೇವರು ಬರಬಹುದು"** ಎಂದು ನಮ್ಮ ಗುರುಗಳು ಬಹಳ ಬಾರಿ ಹೇಳಿದ್ದಾರೆ. ಈ ಶ್ಲೋಕದಲ್ಲಿ ದೇವರು ಸ್ವತಃವಾಗಿ **"ನಾನು ದೇವರಾಗಿದ್ದರೂ ಮನುಷ್ಯ ಶರೀರವನ್ನು ಧರಿಸಿದ ನನ್ನನ್ನಾಗಲೀ, ನನ್ನ ಮಹತ್ವವನ್ನಾಗಲೀ ತಿಳಿಯದ ಮೂಢರು ನನ್ನನ್ನು ಅವಮಾನಿಸುತ್ತಿದ್ದಾರೆ"** ಎಂದು ಹೇಳಿದ್ದಾನೆ. ಅದಕ್ಕೂ ಮೊದಲು ನೀವು ಹೇಳಿದ ಜ್ಞಾನಯೋಗದಲ್ಲಿನ ಶ್ಲೋಕದಲ್ಲಿ ನಾನು ಹುಟ್ಟಲಿಲ್ಲ ಆತ್ಮ ಹುಟ್ಟುತ್ತಿದೆಯೆಂದು ದೇವರು ಹೇಳಿದಹಾಗೆ ಹೇಳಿದ್ದಾರೆ. ಇಲ್ಲಿ ಶ್ಲೋಕದಲ್ಲಿನ ಜ್ಞಾನವನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ನೀವು ತಪ್ಪು ಹೆಜ್ಜೆ ಹಾಕಿದ್ದೀರೆಂದು ನಾವು ಹೇಳುತ್ತಿದ್ದೇವೆ. ದೇವರು ಯಾವಾಗಾದರೂ ಒಂದೇ ಮಾತನ್ನು ಹೇಳುತ್ತಾನಾಗಲೀ, ಒಂದೊಂದು ಕಡೆ ಒಂದೊಂದು ಜ್ಞಾನವನ್ನು ಹೇಳುವುದಿಲ್ಲ. ಅಂತಹ ಅಗತ್ಯ ಆತನಿಗೆ ಇಲ್ಲ.

ಶ್ಲೋಕದಲ್ಲಿ 'ಅಜೋಪಿ' ಎಂದಾಗ ದೇವರಿಗೆ ಹುಟ್ಟುವಿಕೆ ಇಲ್ಲವೆಂದು ತಿಳಿದಿದೆ. ಪಕ್ಕದಲ್ಲೇ 'ಸನ್ನವ್ಯಯಾತ್ಮ' ಎಂದಾಗ ದೇವರಿಗೆ ಸಾವು ಸಹ ಇಲ್ಲವೆಂದು ತಿಳಿದಿದೆ. ಅಲ್ಲಿ "ದೇವರಿಗೆ ಮನುಷ್ಯನಂತೆ ಸಾವು ಹುಟ್ಟುಗಳು ಇಲ್ಲ" ಎಂದು ಹೇಳಿದ ಮಾತು ವಾಸ್ತವವೇ ಎಂದು ನಾವೂ ಸಹ ಹೇಳುತ್ತಿದ್ದೇವೆ. ದೇವರು ಅಲ್ಲಿ ಏನು ಹೇಳಿದ್ದಾನೋ ಚೆನ್ನಾಗಿ ಗ್ರಹಿಸಬೇಕಾಗಿದೆ. ಮನುಷ್ಯರಿಗಿದ್ದಂತೆ ತನಗೆ ಸಾವು ಹುಟ್ಟುಗಳು ಇಲ್ಲ ಎಂದು ಹಾಗೆ ಏಕೆ ಇಲ್ಲವೆಂದರೇ ಜೀವರಾಶಿ ಗಳೆಲ್ಲವುಗಳಿಗೂ ನಾನೇ ದೇವರು ಎಂದು ಹೇಳುವುದು ನಡೆದಿದೆ. ಇದು

ಮೇಲಿನ ವಾಕ್ಯದಲ್ಲಿ ಹೇಳಿ ಶ್ಲೋಕವೊಂದರ ಕೆಳಗಿನ ವಾಕ್ಯದಲ್ಲಿ 'ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾ ಆತ್ಮಮಾಯಯಾ' ಎಂದು ಸಹ ಹೇಳಿದ್ದಾನೆ. ಹಾಗೆ ಅನ್ನುವುದರಲ್ಲಿ ನಾನು ನನ್ನ ಪ್ರಕೃತಿಯನ್ನು ಅಧಿಷ್ಠಿಸಿ ಸಂಭವಿಸುತ್ತಿದ್ದೇನೆ ಎಂದು ಹೇಳುವುದು ನಡೆದಿದೆ. ಶ್ಲೋಕದಲ್ಲಿ ಆತ್ಮಯೆಂದು ಹೇಳಲಾಗಿದೆ ಅಲ್ಲವೆ! ಆತ್ಮ ಹುಟ್ಟುತ್ತಿದೆ ಎಂದು ಹೇಳಿದ್ದಾನಾಗಲಿ, ನಾನು ಹುಟ್ಟಿದ್ದೇನೆಂದು ಹೇಳಲಿಲ್ಲ ಅಲ್ಲವೆ! ಎಂದು ನೀವಾಗಲೀ, ನಿಮ್ಮಂತಹ ಮತ್ತೆ ಕೆಲವರಾಗಲೀ ಅನ್ನಬಹುದು. ಅದಕ್ಕೆ ನಾವು ಹೇಳುವ ವಿವರವೇನೆಂದರೇ! **"ದೇವರು ಸರ್ವಸಾಧಾರಣ ಮನುಷ್ಯರ ಹಾಗೆ ಹುಟ್ಟುವುದಿಲ್ಲ ಮತ್ತು ಮರಣಿಸುವುದಿಲ್ಲ"** ಎಂದು ಹೇಳಿದ್ದಾನೆ. ಅಷ್ಟೇ ಹೊರತು ಮನುಷ್ಯ ಶರೀರವನ್ನು ಧರಿಸಿ ಬರುವುದಿಲ್ಲವೆಂದು ಎಲ್ಲೂ ಹೇಳಲಿಲ್ಲ. 'ಮನುಷ್ಯನಿಗಿದ್ದಂತೆ ದೇವರಿಗೆ ಹುಟ್ಟುವಿಕೆ ಇಲ್ಲ' ಎಂದು ನಾವೂ ಸಹ ಪ್ರಾರಂಭದಿಂದ ಹೇಳುತ್ತಿದ್ದೇವೆ. ಆದರೇ **ದೇವರು ಮನುಷ್ಯ ಶರೀರವನ್ನು ಧರಿಸಿ ಬರುತ್ತಿರುವುದು ನೂರಕ್ಕೆ ನೂರು ಪಾಲು ಸತ್ಯ.** ಇಲ್ಲಿ ನಾವು ಎರಡು ವಿಧಗಳಲ್ಲಿ ಮಾತನಾಡಿದಹಾಗೆ ಕಾಣಿಸಿದರೂ ನಿಮಗೆ ಹಾಗೆ ಅನಿಸುತ್ತಿದೆಯಾಗಲೀ, ನೀವು ಅಂದುಕೊಂಡಂತೆ ನಾವು ಎರಡು ವಿಧಗಳಲ್ಲಿ ಮಾತನಾಡಲಿಲ್ಲವೆಂದು ಹೇಳುತ್ತಿದ್ದೇವೆ.

ಇಲ್ಲಿ ಮನುಷ್ಯ ತನ್ನ ಬುದ್ಧಿಯನ್ನು ಉಪಯೋಗಿಸಿ ದೇವರು ಹೇಳಿದ ಜ್ಞಾನವನ್ನು ಗ್ರಹಿಸಬೇಕಾಗಿರುತ್ತದೆ. ದೇವರು ಹೇಳಿದರೂ ಅದನ್ನು ಅರ್ಥ ಮಡಿಕೊಳ್ಳುವ ಸಾಮರ್ಥ್ಯ ಇಲ್ಲದಿದ್ದರೂ, ಇನ್ನೊಬ್ಬರಲ್ಲಿನ ಜ್ಞಾನವನ್ನು ಅಂದಾಜು ಹಾಕಲಾರದೆ ಕುರುಡರಂತೆ ನನಗೇ ತಿಳಿದಿದೆ ನಿಮಗೆ ತಿಳಿದಿಲ್ಲವೆಂದು ಜೋರಾಗಿ ಅರಚಿದರೂ ಏನೂ ಪ್ರಯೋಜನವಿಲ್ಲ. ಜೋರಾಗಿ ಮಾತನಾಡಿದವನು ಹೊರಗಿನ ಪ್ರಜೆಗಳ ದೃಷ್ಟಿಯಲ್ಲಿ ಜ್ಞಾನಿಯಾಗಿ ಚಲಾವಣೆ ಆಗಬಹುದಾಗಲೀ, ದೇವರ ದೃಷ್ಟಿಯಲ್ಲಿ ಅವನು ಅಜ್ಞಾನಿಯಾಗಿಯೇ ಉಳಿದುಕೊಳ್ಳುವನು. ದೇವರು ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ ಹೇಳಿದ ಶ್ಲೋಕದ ಪ್ರಕಾರ ಮನುಷ್ಯ ಶರೀರವನ್ನು ಧರಿಸಿ ಹುಟ್ಟುವುದು ವಾಸ್ತವವೇ. ಆದರೇ 'ದೇವರು ಮನುಷ್ಯ

ಹುಟ್ಟಿದಂತೆ ಹುಟ್ಟುವುದಿಲ್ಲ' ಎಂದು ಮಾತ್ರ ಹೇಳಬಹುದು. ಯಾರಿಗೂ ಅರ್ಥವಾಗದ ಸಮಸ್ಯೆ ಇಲ್ಲೇ ಇದೆ. ಆದ್ದರಿಂದ ಇದನ್ನು **'ದೇವರ ಜ್ಞಾನ'** ಎಂದು ಹೇಳಿದ್ದೇವೆ. ದೇವರು ಸಹ ನನಗೆ ಇಷ್ಟವಾದವನನ್ನು ಸಕ್ರಮವಾದ ಮಾರ್ಗದಲ್ಲಿ ಕಳುಹಿಸುವೆನೆಂದು ಹೇಳಿರುವುದೇ ಅಲ್ಲದೆ, ನನಗೆ ಇಷ್ಟವಿಲ್ಲದವನನ್ನು ತಪ್ಪುದಾರಿಯಲ್ಲಿ ಅಜ್ಞಾನ ದಾರಿಯಲ್ಲಿ ಕಳುಹಿಸುವೆನೆಂದೂ ಸಹ ಹೇಳಿದ್ದಾನೆ. ಇಲ್ಲೇ ಪ್ರತಿ ಮನುಷ್ಯನಿಗೂ ಅಜ್ಞಾನ ದಾರಿಯೋ ಅಥವಾ ಜ್ಞಾನ ದಾರಿಯೋ ನಿರ್ಣಯವಾಗುತ್ತದೆ.

ದೇವರು ಕೆಲವರನ್ನು ಅಜ್ಞಾನ ದಾರಿಯಲ್ಲಿ, ಕೆಲವರನ್ನು ಜ್ಞಾನ ದಾರಿಯಲ್ಲಿ ಏಕೆ ಕಳುಹಿಸುತ್ತಿದ್ದಾನೆ? ದೇವರಿಗೂ ಸಹ ಇಷ್ಟಾಯಿಷ್ಟಗಳಿರುತ್ತವಾ, ದೇವರಿಗೆ ಎಲ್ಲರೂ ಸಮಾನರಲ್ಲವೆ! ಎಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೇ! ದೇವರು ಸರ್ವಜೀವರಾಶಿಗಳಿಗು ಸಮಾನವಾಗಿದ್ದಾನೆ. ಸರ್ವ ಮನುಷ್ಯರಿಗೂ ಸಮಾನವಾಗಿರುವ ದೇವರು ತನಗೆ ಸ್ವಂತವಾಗಿ ಇಷ್ಟಾಅಯಿಷ್ಟಗಳಂತೂ ಯಾವುವೂ ಇಲ್ಲ. ಆದರೇ ಮನುಷ್ಯ ಭಾವವನ್ನನುಸರಿಸಿ ಆತನಲ್ಲಿ ಇಷ್ಟ ಅಯಿಷ್ಟ ಇರುತ್ತದೆ. ಮನುಷ್ಯ ದೇವರು ಹೇಳಿದ ಜ್ಞಾನವನ್ನು ಅರ್ಥ ಮಾಡಿಕೊಳ್ಳುವುದಾದರೇ ಆತನು ದೇವರಿಗೆ ಇಷ್ಟವಿರುವವನಾಗುತ್ತಾನೆ. ಒಂದುವೇಳೆ ಮನುಷ್ಯ ದೇವರು ಹೇಳಿದ ಜ್ಞಾನವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲಾರದೆ ಹೋದರೇ ಆತನು ದೇವರಿಗೆ ಅಯಿಷ್ಟನಾಗಿ ಹೋಗುತ್ತಾನೆ. ದೇವರು ಹೇಳಿದ ಜ್ಞಾನ ಬೇರೇ ಭಾಷೆಯಲ್ಲಿದ್ದರೇ ಅದು ಅರ್ಥವಾಗಲಿಲ್ಲವೆಂದು ಯಾರೂ ಎನ್ನುವುದಕ್ಕೆ ಅವಕಾಶವಿಲ್ಲದಂತೆ, ಅವರಿಗೆ ತಿಳಿದ ಭಾಷೆಯಲ್ಲಿಯೇ ಹೇಳುವಂತೆ ಅದೇ ಭಾಷೆ ಪ್ರವಕ್ತರನ್ನು ಕಳುಹಿಸಿದ್ದೇನೆ ಎಂದು ದೇವರು ಖುರ್ಆನ್ ಗ್ರಂಥದಲ್ಲಿ (14–4)ನೇ ವಾಕ್ಯದಲ್ಲಿ ಹೇಳಿದ್ದಾನೆ. ನಿಮಗೆ ತಿಳಿದ ಭಾಷೆಯಲ್ಲಿ ಹೇಳಿದರೂ ದೇವರ ಭಾವವನ್ನು ತಿಳಿಯದೇ ಹೋದವನಿಗೆ ಅಜ್ಞಾನ ಮಾರ್ಗವನ್ನೂ, ದೇವರ ಜ್ಞಾನವನ್ನು ತಿಳಿದುಕೊಂಡವನಿಗೆ ದೈವಮಾರ್ಗವನ್ನು (ಜ್ಞಾನ ಮಾರ್ಗವನ್ನು) ತೋರಿಸುತ್ತೇನೆಂದು ಹೇಳಿದ್ದಾನೆ. ಈ ಆಯತ್

ನನ್ನನುಸರಿಸಿ ದೇವರು ನಮಗೆ ಹತ್ತಿರವಾಗಿ ನಮಗೆ ಅರ್ಥವಾಗುವ ಭಾಷೆಯಲ್ಲಿಯೇ ಜ್ಞಾನವನ್ನು ಹೇಳಿದರೂ, ಮತವನ್ನು ಅಡ್ಡ ಇಟ್ಟುಕೊಂಡು, ನಮ್ಮ ಮತದ ಪ್ರಕಾರ ಜ್ಞಾನ ಹೀಗೇ ಇರುತ್ತದೆ ಎಂದು ದೇವರು ಹೇಳಿದ ಮಾತನ್ನು ಅಲ್ಲವೆಂದವನನ್ನು ದೇವರು ಇಷ್ಟಪಡುವುದಿಲ್ಲ. ತನ್ನ ಮಾತನ್ನು ಅಲ್ಲವೆನ್ನುವವನನ್ನು ದೇವರು ಹೇಗೆ ಇಷ್ಟಪಡುವನು? ದೇವರು ಹೇಳಿದ ಜ್ಞಾನವನ್ನು ದೊಡ್ಡದಾಗಿ ತಿಳಿದು ಒಪ್ಪಿಕೊಳ್ಳುವವನನ್ನು ತನ್ನ ಮನುಷ್ಯನಾಗಿ ದೇವರು ಲೆಕ್ಕಿಸಿ ಅವನನ್ನು ಇಷ್ಟಪಡುತ್ತಾನೆ. ಇದನ್ನನುಸರಿಸಿ ಮನುಷ್ಯ ಭಾವವನ್ನನುಸರಿಸಿ ದೇವರಿದ್ದಾನೆ ಎಂದು ತಿಳಿಯುತ್ತಿದೆ.

ಈಗ ಅಸಲು ವಿಷಯಕ್ಕೆ ಬರೋಣ. ದೇವರು ಹೇಳಿದ ಜ್ಞಾನದ ಪ್ರಕಾರ ಮನುಷ್ಯರಿಗಿರುವಂತೆ ಸಾವು ಹುಟ್ಟುಗಳು ದೇವರಿಗೆ ಇಲ್ಲ. ದೆವರು ಮನುಷ್ಯ ಹುಟ್ಟಿದಂತೆ ಹುಟ್ಟುವವನಲ್ಲ, ಹಾಗೇ ಸಾಯುವವನೂ ಅಲ್ಲ. ಈ ವಿಷಯ ನನಗೆ ಚೆನ್ನಾಗಿ ಅರ್ಥವಾಗಿದೆ, ಆದ್ದರಿಂದ ನನ್ನ ಭಾವವನ್ನನುಸರಿಸಿ, ನನಗೆ ದೇವರ ಜ್ಞಾನ ಅರ್ಥವಾಗಿರುವುದನ್ನನುಸರಿಸಿ, ನಾನು ದೇವರಿಗೆ ಇಷ್ಟನಾಗಿ ಬದಲಾಗಿದ್ದೇನೆ. ದೇವರಿಗೆ ಸ್ವತಃವಾಗಿ ಇಷ್ಟಾಇಷ್ಟಗಳು ಇಲ್ಲ ಅದೆಲ್ಲವೂ ಮನುಷ್ಯ ಭಾವವನ್ನನುಸರಿಸಿ ಇರುತ್ತದೆಂದು ಮರೆಯಬಾರದು. ಮೇಲೆ ದೇವರಿಗೆ ಸಾವು ಹುಟ್ಟುಗಳು ಇಲ್ಲ ಎಂಬ ವಿಷಯ ನನಗೆ ಅರ್ಥವಾಗಿದೆ, ನನ್ನ ಜೊತೆಗಿರುವ ಮುಸ್ಲೀಮ್‌ರಿಗೂ ಸಹ ಅರ್ಥವಾಗಿದೆ. ಆದ್ದರಿಂದ ನಾನಾಗಲೀ, ನನ್ನ ಜೊತೆಗಿರುವ ಮುಸ್ಲೀಮ್‌ರಾಗಲೀ ಇಲ್ಲಿಯವರೆಗು ಈ ವಿಷಯದಲ್ಲಿ ದೇವರಿಗೆ ಅಯಿಷ್ಟರಲ್ಲ. ಆದರೇ ದೇವರು ಸಾವು ಹುಟ್ಟುಗಳ ವಿಷಯವನ್ನು ಅಷ್ಟಕ್ಕೆ ನಿಲ್ಲಿಸದೆ ಇನ್ನೂ ಸ್ವಲ್ಪ ಹೊಸ ವಿಷಯವನ್ನು ಹೇಳಿದ್ದಾನೆ. ಅದೇನೆಂದರೆ! ನಾನೂ ಸಹ ಶರೀರವನ್ನು ಧರಿಸಿ ಭೂಮಿ ಮೇಲೆ ಹುಟ್ಟುತ್ತಿದ್ದೇನೆ ಎಂದು ಹೇಳಿದ್ದಾನೆ. ಇನ್ನೂ ವಿವರವಾಗಿ ಹೇಳಿದರೇ, ನಾನೂ ಸಹ ಮನುಷ್ಯ ಶರೀರವನ್ನು ಧರಿಸಿ ಭೂಮಿ ಮೇಲೆ ಅವತರಿಸುತ್ತಿದ್ದೀನೆಂದೋ ಅಥವಾ ಹುಟ್ಟುತ್ತಿದ್ದೀನೆಂದೋ ಹೇಳಿದ್ದಾನೆ. ಮೇಲೆ **"ನನಗೆ ಮನುಷ್ಯರ ಹಾಗೆ ಸಾವು ಹುಟ್ಟುಗಳು ಇಲ್ಲ"**

ಎಂದು ಹೇಳಿದ ದೇವರು ನಂತರ ಸ್ವಲ್ಪ ಹೊತ್ತಿಗೆ **"ನಾನು ಮನುಷ್ಯ ದೇಹವನ್ನು ಧರಿಸಿ ಭೂಮಿಮೇಲೆ ತಾಯಿಗರ್ಭದಿಂದಲೇ ಹುಟ್ಟುತ್ತಿದ್ದೇನೆ"** ಎಂದು ಹೇಳಿದ್ದಾನೆ. ಈ ಮಾತು ಕೇಳಿದ ಪ್ರತಿಯೊಬ್ಬನಿಗೂ ದೇವರು ಎರಡು ನಾಲಿಗೆಗಳಿಂದ ಮಾತನಾಡುತ್ತಿದ್ದಾನೆನ್ನುವಂತೆ ಕಾಣಿಸುತ್ತದೆ. ಮೊದಲು ನನಗೆ ಸಾವು ಹುಟ್ಟುಗಳು ಇಲ್ಲ ಎಂದಾಗ ನಾನು, ನನ್ನೊಂದಿಗಿರುವ ಮುಸ್ಲೀಮ್‌ರು ಕೇಳಿ ದೇವರಿಗೆ ಮನುಷ್ಯರ ಹಾಗೆ ಸಾವು ಹುಟ್ಟುಗಳು ಇಲ್ಲ ಎಂದು ದೇವರು ಹೇಳಿದ ಮಾತನ್ನು ಅರ್ಥ ಮಾಡಿಕೊಂಡಿದ್ದೇವೆ. ಆದ್ದರಿಂದ ದೇವರಿಗೆ ನಾವು ಅಯಿಷ್ಟರು ಆಗಲಿಲ್ಲವೆಂದು ಹೇಳಿದ್ದೇವಲ್ಲವೆ! ಆದರೇ ಈಗ ದೇವರು ಹೇಳಿದ ಮಾತು ನನಗೆ ಚೆನ್ನಾಗಿ ಅರ್ಥವಾಗಿದೆ. ನನ್ನ ಪಕ್ಕದಲ್ಲಿರುವ ಮುಸ್ಲೀಮ್‌ರಿಗೆ ಈ ಮಾತು ಅರ್ಥವಾಗಲಿಲ್ಲ. ದೇವರು ಅಲ್ಲಿ ನಿಜವನ್ನು ಹೇಳಿ, ಇಲ್ಲಿ ಅಸತ್ಯವನ್ನು ಹೇಳುತ್ತಿದ್ದಾನೆಂದುಕೊಂಡಿದ್ದಾರೆ. ಬುದ್ಧಿವೊಂದರ ಗ್ರಾಹಿತಶಕ್ತಿ ಇರುವವರು, ಶ್ರದ್ಧೆ ಇರುವವರು ನನ್ನ ಜ್ಞಾನವನ್ನು ಗ್ರಹಿಸಬಲ್ಲರೆಂದು ಖುರ್‌ಆನ್ (3–7)ರಲ್ಲಿ ಹೇಳಿದಂತೆ ನನ್ನ ಬುದ್ಧಿಗೆ ದೇವರು ಎರಡನೆ ಬಾರಿ ಹೇಳಿದ ಜ್ಞಾನ ಅರ್ಥವಾಗಿದೆ. ದೇವರು ತಾಯಿಗರ್ಭದಿಂದ ಮನುಷ್ಯನಾಗಿ ಶರೀರವನ್ನು ಧರಿಸಿ ಹುಟ್ಟುತ್ತಾನೆಂದು ನನಗೆ ತಿಳಿದುಹೋಗಿದೆ. ಮೊದಲನೆಯ ಮಾತು ದೇವರು ನಾನು ಮನುಷ್ಯರಹಾಗೆ ಹುಟ್ಟುವುದಿಲ್ಲ ಎಂದು ಹೇಳಿದಾಗ, ಆತನ ಮಾತಿನ ಪ್ರಕಾರ ದೇವರು ಹುಟ್ಟುವುದಿಲ್ಲವೆಂದು ಹೇಗೆ ಅರ್ಥವಾಗಿದೆಯೋ, ಹಾಗೇ ದೇವರು ಎರಡನೆಯ ಬಾರಿ ಹೇಳಿದ ಜ್ಞಾನವೂ ಸಹ ಚೆನ್ನಾಗಿ ಅರ್ಥವಾಗಿದೆ. ಎರಡನೆಯ ಬಾರಿ ನನಗೆ ಅರ್ಥವಾದ ಮಾತು ನೋಡುವವರಿಗೆ ಮೊದಲನೆಯ ಮಾತಿಗೆ ವಿರುದ್ಧವಾಗಿ ಹೇಳಿದಂತೆ ಕಾಣಿಸಿ, ಅವರಿಗೆ ಏನೂ ಅರ್ಥವಾಗದಂತೆ ಹೋಗಿ, ದೇವರೇ ತಪ್ಪಾಗಿ ಎರಡು ವಿಧಗಳಲ್ಲಿ ಹೇಳಿದ್ದಾನೆಂದು ಅವರು ಅನ್ನುತ್ತಿದ್ದಾರೆ. ಆದರೇ ನಾನು ಹಾಗೆ ಅನ್ನಲಿಲ್ಲ. ದೇವರು ಹೇಳಿದ ಎರಡು ವಿಧಗಳ ಜ್ಞಾನ ಅರ್ಥವಾಗಿದೆಯೆಂದೇ ಹೇಳುತ್ತಿದ್ದೇವೆ. ದೇವರ ಎರಡು ಮಾತುಗಳನ್ನು ಅರ್ಥ ಮಾಡಿಕೊಂಡಿರುವುದಕ್ಕೆ ನಾನು ದೇವರಿಗೆ ಇಷ್ಟನಾಗಿ ಬದಲಾಗಿದ್ದೇನೆ. ದೇವರ ಎರಡನೆಯ ಮಾತನ್ನು ಅರ್ಥ ಮಾಡಿಕೊಳ್ಳದೇ

ದೇವರು ಹುಟ್ಟುವುದಿಲ್ಲ ಎಂದು ಮೊದಲ ಮಾತಿನ ಪ್ರಕಾರ ಮಾತನಾಡುವ ನನ್ನೊಂದಿಗಿರುವ ಮುಸ್ಲೀಮ್‌ರು ದೇವರಿಗೆ ಅಯಿಷ್ಟರಾಗಿ ಬದಲಾಗಿದ್ದಾರೆ.

ಇಲ್ಲಿ ಮುಸ್ಲೀಮ್‌ರು ಕೆಲವರು **"ಖುರ್‌ಆನ್ ಗ್ರಂಥದಲ್ಲಿ ದೇವರು ಮನುಷ್ಯನಾಗಿ ಹುಟ್ಟುವಂತೆ ಎಲ್ಲೂ ಹೇಳಲಿಲ್ಲ, ಆದ್ದರಿಂದ ನಮ್ಮ ಗ್ರಂಥದ ಪ್ರಕಾರ ದೇವರು ಹುಟ್ಟುವುದಿಲ್ಲ"** ಎಂದು ಹೇಳುತ್ತಿದ್ದೇವೆಂದು ಹೇಳಬಹುದು. ಅದಕ್ಕೆ ನಾವು ಏನು ಹೇಳುತ್ತಿದ್ದೇವೆಂದರೆ! ದೇವರು ಹೇಳಿರುವುದು ದೈವಗ್ರಂಥ. ದೇವರು ಸೃಷ್ಟ್ಯಾದಿಯಲ್ಲಿ ಒಂದು ಬಾರಿ ಹೇಳಿದ ಜ್ಞಾನವೇ ನಂತರ ಕಾಲಗಳಲ್ಲಿ ಮತ್ತೆ ಮತ್ತೆ ಹೇಳಲಾಗಿದೆ. ಹಾಗೆ ಹೇಳಲಾಗಿರುವುದನ್ನು ಮೂರು ಗ್ರಂಥಗಳಾಗಿ ಬರೆಯಲ್ಪಟ್ಟಿವೆ. ಮೂರು ಗ್ರಂಥಗಳು ಬೇರೆಬೇರೆಯಾಗಿದ್ದರೂ ಮೂರರಲ್ಲಿಯೂ ಇರುವುದು ಒಂದೇ ಜ್ಞಾನ ಆಗಿರುವುದರಿಂದ ಮೂರನ್ನೂ ಸೇರಿಸಿ ಒಂದೇ ದೈವಗ್ರಂಥವಾಗಿ ಹೇಳುತ್ತಿದ್ದೇವೆ. ಒಂದೇ ದೈವಗ್ರಂಥ ಎಂಬ ಮಾತನ್ನು ಮನುಷ್ಯರು ತಿಳಿಯದಂತೆ ಹೋಗಿದ್ದಾರೆಂದು ದೇವರೇ ಮೂರನೆಯ ಭಾಗವಾಗಿರುವ ಗ್ರಂಥವನ್ನು "ಅಂತಿಮ ದೈವಗ್ರಂಥ" ಎಂದು ಹೆಸರು ಇಟ್ಟಿದ್ದಾನೆ. ಹಾಗೆ ಖುರ್‌ಆನ್ ಗ್ರಂಥದಲ್ಲಿ ಆ ಗ್ರಂಥವನ್ನು ಅಂತಿಮ ದೈವಗ್ರಂಥವೆನ್ನುವುದರಿಂದ ಅದಕ್ಕಿಂತ ಮೊದಲು ಬಂದಿರುವ ಎರಡು ಗ್ರಂಥಗಳನ್ನು ಪ್ರಥಮ, ಮಧ್ಯಮ ದೈವಗ್ರಂಥಗಳೆಂದು ಹೇಳುವುದಕ್ಕೆ ಅವಕಾಶವೇರ್ಪಟ್ಟಿದೆ. ಮೂರು ಗ್ರಂಥಗಳ ಸಾರಾಂಶ ಒಂದೇ ಆಗಿರುವುದರಿಂದ ಖುರ್‌ಆನ್‌ನಲ್ಲಿ ಇರುವುದೇ ಪ್ರಥಮ ದೈವಗ್ರಂಥದಲ್ಲಿ ಮೊದಲೇ ಇದೆ. ಪ್ರಥಮ ದೈವಗ್ರಂಥವಾದ ತೌರಾತು ಎನ್ನುವ ಭಗವದ್ಗೀತೆ ಗ್ರಂಥದಲ್ಲಿ ಹೇಳಿದ ಜ್ಞಾನವೇ ಅಂತಿಮ ದೈವಗ್ರಂಥದಲ್ಲಿ ಇರುವುದರಿಂದ ಖುರ್‌ಆನ್‌ನಲ್ಲಿಯೂ ಸಹ ದೇವರು ಮನುಷ್ಯನಾಗಿಯೇ ಅವತರಿಸುತ್ತಾನೆಂದು ಹೇಳಿರುವನು. ಆದರೇ ಅದನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಮನುಷ್ಯರಾದ ನಾವೇ ತಪ್ಪಾಗಿ ತಿಳಿದಿರಬಹುದು. ಈಗ ಖುರ್‌ಆನ್ ಗ್ರಂತದಲ್ಲಿ ದೇವರ ಹುಟ್ಟುವಿಕೆಯನ್ನು ಕುರಿತು ಏನು ಹೇಳಿದ್ದಾರೋ ನೋಡೋಣ.

89ನೇ ಸೂರಾ, 21,22 ಆಯತ್‌ಗಳಲ್ಲಿ 'ದೇವರು ಅವತರಿಸುತ್ತಾನೆ' ಎಂದು ಇದೆ. **(21) "ಭೂಮಿಯನ್ನು ನಿರಂತರ ಗುದ್ದಿ ಪುಡಿಕುಟ್ಟಲ್ಪಟ್ಟಾಗ ನಿಮ್ಮ ಪ್ರಭುವು ಅವತರಿಸುತ್ತಾನೆ." (22) ದೇವದೂತರು ಸಾಲುಸಾಲಾಗಿ ನಿಂತಿರುವ ಸ್ಥಿತಿಯಲ್ಲಿ ದೇವರು ಅವತರಿಸುತ್ತಾನೆ."** ಎಂದು ಹೇಳಲಾಗಿದೆ. ಅಷ್ಟೇ ಅಲ್ಲದೆ 15ನೇ ಸೂರಾ, 29ನೇ ಆಯತ್‌ನಿಂದ 30, 31ನೇ ಆಯತ್‌ವರೆಗೆ ಇರುವ ಸಮಾಚಾರವನ್ನು ನೋಡೋಣ. **(29) ನಾನು ಆತನನ್ನು ಪೂರ್ತಿಯಾಗಿ ತಯಾರು ಮಾಡಿ ಆತನಲ್ಲಿ ನನ್ನ ಆತ್ಮನನ್ನು ಊದಿದಾಗ ನೀವೆಲ್ಲಾ ಆತನ ಮುಂದೆ ಸಾಷ್ಟಾಂಗ ಬೀಳಿರಿ. (30) ದೇವದೂತರೆಲ್ಲರೂ ಸಾಷ್ಟಾಂಗ ಮಾಡಿದ್ದಾರೆ.** (31) ಇಲ್ಲಿ ಸಾಷ್ಟಾಂಗ ಬೀಳುವವರಲ್ಲಿ ಇಬ್ಲೀಸು ಹೊರತು ಎಲ್ಲರೂ ಸಾಷ್ಟಾಂಗ ಬಿದ್ದಿದ್ದಾರೆ. ಇಲ್ಲಿ ಈ ವಾಕ್ಯಗಳನ್ನು ನೋಡಿದ ನಂತರ ದೇವರು ಹುಟ್ಟುವುದಿಲ್ಲ ಎನ್ನುವುದಕ್ಕೆ ಯಾವ ಮುಸ್ಲೀಮ್ ಸಹ ಸಾಹಸಿಸುವುದಿಲ್ಲ ಎಂದುಕೊಳ್ಳುತ್ತೇವೆ. ಆದರೇ ಕೆಲವರು, ಆಧ್ಯಾತ್ಮಿಕ ಸಂಘಗಳನ್ನು ನಡೆಸುತ್ತಿರುವ ಮುಸ್ಲೀಮ್‌ರು "ದೇವರು ಅವತರಿಸುತ್ತೇನೆಂದು ಹೇಳಿದ್ದಾನಾಗಲೀ, ಮನುಷ್ಯನಾಗಿ ಅವತರಿಸುತ್ತೇನೆಂದು ಹೇಳಲಿಲ್ಲವಲ್ಲವೆ!" ಎಂದು ಅನ್ನುತ್ತಿದ್ದಾರೆ. ಅದಕ್ಕೆ ನಮ್ಮ ಉತ್ತರ ಹೀಗೆ ಇದೆ. ದೇವರು ಅವತರಿಸುತ್ತಾನೆಂದು ಒಪ್ಪಿಕೊಂಡವರು ಮನುಷ್ಯನಾಗಿ ಅವತರಿ ಸುತ್ತಾನೆಂದು ಒಪ್ಪಿಕೊಳ್ಳದೇ ಹೋಗುವುದು ಹಾಸ್ಯಾಸ್ಪದ. ದೇವರು ಮನುಷ್ಯರಿಗೆ ಜ್ಞಾನ ಹೇಳುವುದಕ್ಕೆ ಮನುಷ್ಯನಾಗಿಯೇ ಹುಟ್ಟಬೇಕಾಗಿದೆ. ಮನುಷ್ಯನಾಗಿ ಅಲ್ಲದೆ ಹೇಗೆ ಹುಟ್ಟುವನೆಂದು ನಾವು ಪುನಃ ಕೇಳಿದಾಗ, ಅದಕ್ಕೆ ಉತ್ತರ ಹೇಳಲಾರದೆ, ಹೇಗೋ ಒಂದು ವಿಧವಾಗಿ ಹುಟ್ಟುತ್ತಾನೆ ಅದರೊಂದಿಗೆ ನಿಮಗೇನು ಕೆಲಸ? ಎಂದು ಅಡ್ಡವಾಗಿ ಮಾತನಾಡುತ್ತಿದ್ದಾರೆ. ಮನುಷ್ಯನಾಗಿ ಹುಟ್ಟದೇ ಹೋದರೆ ಜ್ಞಾನ ಹೇಗೆ ಮನುಷ್ಯರಿಗೆ ತಿಳಿಯುತ್ತದೆಂದು ಕೇಳಿದರೆ, ಹೇಗೋ ಒಂದು ವಿಧವಾಗಿ ತಿಳಿಸುತ್ತಾನೆ ಹೇಗೆ ತಿಳಿಸಿದರೇ ನಿಮಗೇನು? ಎಂದು ಸಾಲುತಪ್ಪಿ ಮಾತನಾಡುತ್ತಿದ್ದಾರೆ. ಆ ಮಾತುಗಳು ಕೇಳುವವರಿಗೆ ಅವರ ಹತ್ತಿರ ಉತ್ತರವಿಲ್ಲದೆ ಹಾಗೆ ಮಾತನಾಡುತ್ತಿದ್ದಾರೆಂದು ಅರ್ಥವಾಗಿಹೋಗುತ್ತಿದೆ. ನೀವು ಹೇಳಿರಿ ಎಂದರೇ ಅವರು ಹೇಳಲಾರರು,

ನಾವು ಹೇಳುತ್ತೇವೆ ಕೇಳಿ ಎಂದರೆ ಹಾಗೂ ಕೇಳಲಾರರು ಅಂತಹವರಿಗೆ ಜ್ಞಾನ ಹೇಗೆ ತಿಳಿಯುತ್ತದೆ?

ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ "ದೇವರು ಅವತರಿಸುತ್ತಾನೆ" ಎಂಬ ವಿಷಯುವನ್ನು ಹೇಳುವುದೇ ಅಲ್ಲದೆ, ಅಂತಿಮ ದೈವಗ್ರಂಥದಲ್ಲಿಯೂ ಸಹ ದೇವರ ಹುಟ್ಟುವಿಕೆಯನ್ನು ಕುರಿತು 89–21,22 ವಾಕ್ಯಗಳಲ್ಲಿಯೂ, 15–29, 30,31 ವಾಕ್ಯಗಳಲ್ಲಿಯೂ ಹೇಳಲಾಗಿದೆ. ಈಗ ಪುನಃ ಭಗವದ್ಗೀತೆ ಹತ್ತಿರಕ್ಕೆ ಬರೋಣ. ಇಲ್ಲಿ ಜ್ಞಾನಯೋಗದಲ್ಲಿ ಆರನೇ ಶ್ಲೋಕದಲ್ಲಿ ನನಗೆ ಸಾವು ಹುಟ್ಟುಗಳು ಇಲ್ಲ ಎಂದು ಹೇಳಿದ ಮಾತಿಗೆ ವಿರುದ್ಧವಾಗಿ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ ಹನ್ನೊಂದನೇ ಶ್ಲೋಕದಲ್ಲಿ ಹೇಳಿದಂತೆ ಎಲ್ಲರೂ ಅಂದುಕೊಂಡರೂ, ಹಾಗಲ್ಲ ದೇವರು ಮೊದಲು ಹೇಳಿದ ಮಾತಿಗೆ ವಿರುದ್ಧವಾಗಿ ಹೇಳಲಿಲ್ಲ. ದೇವರು ಮನುಷ್ಯನಹಾಗೆ ಹುಟ್ಟುವುದಾಗಲೀ, ಸಾಯುವುದಾಗಲೀ ಇಲ್ಲ ಎಂಬ ಮಾತು ವಾಸ್ತವವೇ. ಜ್ಞಾನಯೋಗದಲ್ಲಿ ಹೇಳಿದ ಮಾತು ವಾಸ್ತವವೇ, ಹಾಗೇ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ ಹೇಳಿದ ಶ್ಲೋಕದ ಪ್ರಕಾರ ದೇವರು ಮನುಷ್ಯ ಶರೀರವನ್ನು ಧರಿಸಿ ತಾಯಿಗರ್ಭದಿಂದ ಹುಟ್ಟುವ ಮಾತು ನಿಜವೇ ಎಂದು ನಾವು ಹೇಳಿದರೇ, ದೇವರ ಜ್ಞಾನವನ್ನು ಅರ್ಥ ಮಾಡಿಕೊಳ್ಳದವರು ನಮ್ಮನ್ನು ಪೂರ್ತಿ ಅಸತ್ಯ ಹೇಳುವವರಾಗಿಯೊ, ಎರಡು ವಿಧಗಳಾಗಿ ಮಾತನಾಡು ವವರಾಗಿಯೋ ಲೆಕ್ಕಿಸಿ ನಮ್ಮನ್ನು ನೀವು ಜ್ಞಾನಿಗಳಾ? ಎಂದು ಪ್ರಶ್ನಿಸುತ್ತಿದ್ದಾರೆ. ಅದಕ್ಕೆ ನಾವು ಹೌದು ನಾವು ದೇವರ ಮಾತನ್ನು, ದೇವರ ಜ್ಞಾನವನ್ನು ಪೂರ್ತಿ ಗ್ರಹಿಸಿದ ಜ್ಞಾನಿಗಳೇಯೆಂದು ಹೇಳುತ್ತಿದ್ದೇವೆ. ಅಷ್ಟೇ ಅಲ್ಲದೆ ದೇವರ ಜ್ಞಾನವನ್ನು ಅರ್ಥ ಮಾಡಿಕೊಂಡಿದ್ದೇವಾದ್ದರಿಂದ ನಾವು ದೇವರಿಗೆ ಇಷ್ಟರಾಗಿದ್ದೇವೆಂದು ಸಹ ಹೇಳುತ್ತಿದ್ದೇವೆ. ದೇವರ ಜ್ಞಾನದಲ್ಲಿ ಈ ಎರಡು ಶ್ಲೋಕಗಳೇ ಅರ್ಥವಾಗದಿರುವಾಗ ನಿಮಗೆ ದೇವರ ಜ್ಞಾನ ಪೂರ್ತಿ ಹೇಗೆ ತಿಳಿಯಬಲ್ಲದೆಂದು ಪ್ರಶ್ನಿಸುತ್ತಿದ್ದೇವೆ. ಇಲ್ಲಿ ದೇವರು ಹೇಳಿದ ಮಾತು ಅರ್ಥವಾಗದೇ ಹೋದರೇ, ಮುಸ್ಲೀಮ್‌ರಿಗೆ

ಖುರ್‌ಆನ್ ಗ್ರಂಥದಲ್ಲಿ ಹೇಳಿದ ಸೂರಾ 6 ಆಯತ್ 95, ಸೂರಾ 3 ಆಯತ್ 27 ವಾಕ್ಯಗಳು ಎಂದಿಗೂ ಅರ್ಥವಾಗುವುದಿಲ್ಲ.

ಸೂರಾ 6 ಆಯತ್ 95ರಲ್ಲಿ ಹೇಳಲಾಗಿರುವ ಜ್ಞಾನ ಮತ್ತು ಸೂರಾ 3 ಆಯತ್ 27ರಲ್ಲಿರುವ ಜ್ಞಾನ ಯಾವ ಮುಸ್ಲೀಮ್‌ಗಾದರೂ ಅರ್ಥವಾಗಬೇಕೆಂದರೇ ದೇವರು ಮತ್ತು ಮನುಷ್ಯನ ಹುಟ್ಟುವಿಕೆಯನ್ನು ಕುರಿತು, ಅವರ ಹುಟ್ಟುವಿಕೆಯಲ್ಲಿ ಇರುವ ವ್ಯತ್ಯಾಸಗಳನ್ನು ಕುರಿತು ತಿಳಿದಿರಬೇಕು. "ದೇವರು ಶರೀರವನ್ನು ಧರಿಸಿ ತಾಯಿಗರ್ಭದಿಂದ ಹುಟ್ಟುತ್ತಿದ್ದಾನೆ" ಎಂಬ ಮಾತು ನೂರಕ್ಕೆ ನೂರುಪಾಲು ಸತ್ಯ ಎಂದು ಹೇಳುತ್ತಿರುವ ನಾವು, 'ಮನುಷ್ಯನಹಾಗೆ ದೇವರು ಹುಟ್ಟಲಿಲ್ಲ' ಎಂದೂ ಮತ್ತು 'ಮನುಷ್ಯನಹಾಗೆ ಸಾಯಲಿಲ್ಲ' ಎಂದೂ ಸಹ ಹೇಳುತ್ತಿದ್ದೇವೆಂದರೇ ನಮಗೆ ಅರ್ಥವಾಗಿರುವುದು ಏನೋ ಇತರರಿಗೆ ಅರ್ಥವಾಗಲಿಲ್ಲವೆಂದೇ ಅರ್ಥ. **"ಮನುಷ್ಯನಹಾಗೆ ದೇವರು ಹುಟ್ಟುವವನು ಅಲ್ಲ"** ಎಂದು ಹೇಳುತ್ತಾ **'ದೇವರು ತಾಯಿಗರ್ಭದಿಂದ ಮನುಷ್ಯ ಶರೀರವನ್ನು ಧರಿಸಿ ಹುಟ್ಟುತ್ತಿದ್ದಾನೆ'** ಎಂದು ಹೇಳುತ್ತಿದ್ದೇವೆಂದರೇ ಇದರಲ್ಲಿ ಯಾವುದೋ ತಿಳಿಯದ ರಹಸ್ಯ ಅಡಗಿದೆ ಎಂದುಕೊಳ್ಳದೇ, ಅದನ್ನು ತಿಳಿದುಕೊಳ್ಳಬೇಕೆಂದು ಪ್ರಯತ್ನ ಮಾಡದೇ, ನೀವು ಜ್ಞಾನಿಗಳಾ? ನಿಮಗೆ ಜ್ಞಾನ ತಿಳಿದಿದೆಯಾ? ಎಂದು ಅಂದರೇ, ಎದುರಲ್ಲಿ ದೇವರು ಕಾಣಿಸಿದರೂ ಯಾವ ನಾಟಕದಿಂದ ಓಡಿ ಬಂದಿದ್ದೀಯೆಂದು ಕೇಳಿದಂತಿರುತ್ತದೆ. ನನ್ನನ್ನು ಮನುಷ್ಯರಲ್ಲಿ ಅಜ್ಞಾನಿಯಾಗಿ, ಜ್ಞಾನ ತಿಳಿಯದ ಮನುಷ್ಯನಾಗಿ ಲೆಕ್ಕಿಸಿದ್ದಾರೆಂದುಕೊಳ್ಳೋಣ. ಈ ಎರಡು ಮಾತುಗಳನ್ನು ಪ್ರಥಮ ದೈವಗ್ರಂಥದಲ್ಲಿ ದೇವರೇ ಹೇಳಿದ್ದಾನೆ ಅಲ್ಲವೆ! ಅಷ್ಟೇಕೆ ಖುರ್‌ಆನ್ ಗ್ರಂಥದಲ್ಲಿ 89–21,22 ರಲ್ಲಿಯೂ ಹಾಗೇ 15–29,30,31 ರಲ್ಲಿಯೂ ಸಹ ದೇವರು ಹುಟ್ಟುವನೆಂದೇ ಹೇಳಿದ್ದಾನೆ. ದೇವರು ಹುಟ್ಟುವುದಿಲ್ಲ ಎಂದರೇ ಯಾರಾದರಾಗಲೀ 6–95ರಲ್ಲಿ ದೇವರು ಹೇಳಿದ ವಾಕ್ಯಕ್ಕೆ ವಿವರವನ್ನು ಹೇಳಬಲ್ಲಿರಾ? ದೇವರು ಮನುಷ್ಯನಹಾಗೆ ಹುಟ್ಟುವುದಿಲ್ಲ ಎಂದು ತಿಳಿದಿದ್ದರೆ, ದೇವರು ಮನುಷ್ಯ ಶರೀರವನ್ನು ಧರಿಸಿ ಹುಟ್ಟುವನೆಂದು ಸಹ ತಿಳಿದಿದ್ದರೇ

(6–95) ಆಯತ್‌ಗೆ ಸರಿಯಾದ ವಿವರವನ್ನು ಹೇಳಬಲ್ಲರು. ನಾವು ಒಬ್ಬ ಹಿಂದುವಾಗಿದ್ದು ಇಷ್ಟು ಆಳವಾಗಿ ಹೇಳುತ್ತಿದ್ದರೂ ಕೇಳದವರಿಗೆ ನಂತರ ಕಾಲದಲ್ಲಿ ಎಂದಿಗೂ ಇಷ್ಟು ರಹಸ್ಯವನ್ನು ಸುಲಭವಾಗಿ ಹೇಳುವವನು ಬರುವುದಿಲ್ಲವೆಂದೇ ಹೇಳುತ್ತಿದ್ದೇವೆ.

ಇಲ್ಲಿಯವರೆಗು ಯಾರಿಗೂ ಅರ್ಥವಾಗದ ದೇವರ ಜನ್ಮಗಳ ವಿಷಯಗಳನ್ನು ಮನುಷ್ಯ ಜನ್ಮಗಳ ವಿಷಯಗಳನ್ನು ಸ್ವಲ್ಪ ಮಟ್ಟಿಗೆ ಅರ್ಥಮಾಡಿಕೊಳ್ಳುತ್ತೀರೆಂದು ತಿಳಿದು ಇಲ್ಲಿ ಹೇಳುತ್ತಿದ್ದೇವೆ. ಮನುಷ್ಯನಿಗೆ ದೇವರ ಜನ್ಮ ವಿಷಯವೇ ಅರ್ಥವಾಗಲಿಲ್ಲ ಎಂದು ಹೇಳುತ್ತಾ, ಮನುಷ್ಯ ಜನ್ಮಗಳ ರಹಸ್ಯವೂ ಸಹ ತಿಳಿದಿಲ್ಲವೆಂದು ಹೇಳುತ್ತಿದ್ದೇವೆ. ಮನುಷ್ಯ ಹೇಗೆ ಹುಟ್ಟುತ್ತಿರುವುದು ಪ್ರತಿ ದಿನ ಎಲ್ಲರೂ ನೋಡುತ್ತಿದ್ದೇವೆ. ಅದರಲ್ಲಿ ರಹಸ್ಯವೇನಿದೆಯೆಂದು, ಅದು ಎಲ್ಲರಿಗೂ ತಿಳಿದ ವಿಷಯವೇ ಅಲ್ಲವೇ! ಎಂದು ಎಲ್ಲರೂ ಅಂದುಕೊಳ್ಳಬಹುದು. ಆದರೇ ಮನುಷ್ಯನ ಜನ್ಮ ವಿವರ ಯಾರಿಗೂ ಇಲ್ಲಿಯವರೆಗು ತಿಳಿಯದೆಂದೇ ಹೇಳುತ್ತಾ, ಅದನ್ನು ಕುರಿತು ಒಂದು ಮುಖ್ಯವಾದ ಮಾತನ್ನು ಹೇಳುತ್ತಿದ್ದೇವೆ. ಪ್ರಪಂಚದಲ್ಲಿ **ಮನುಷ್ಯ ಎನ್ನುವವನು ಯಾರೂ ತಾಯಿ ಗರ್ಭದಿಂದ ಹುಟ್ಟಲಿಲ್ಲ** ಎಂದು ಹೇಳುತ್ತಿದ್ದೇವೆ. ಈ ಮಾತು ಎಲ್ಲ ಮತಗಳವರಿಗೂ ವಿಚಿತ್ರವಾಗಿಯೇ ಕಾಣಿಸುತ್ತದೆ. ಅಷ್ಟೇ ಅಲ್ಲದೆ **ತಾಯಿ ಗರ್ಭದಿಂದ ಯಾವ ಮನುಷ್ಯ ಹುಟ್ಟುತ್ತಿದ್ದಾನೋ ಅವನೇ ಮನುಷ್ಯನಾಗಿ ಬಂದಿರುವ ದೇವರು**. ಈ ಎರಡು ಮಾತುಗಳು ಪಂಡಿತರಿಗೂ, ಪಾಮರರಿಗೂ, ಮುಸ್ಲೀಮ್‌ರಿಗೂ, ಹಿಂದೂಗಳಿಗೂ ಆಶ್ಚರ್ಯವಾಗಿಯೇ ಕಾಣಿಸುತ್ತದೆ. ಹಾಗೇ ಅಸತ್ಯವಾಗಿಯೂ ಕಾಣಿಸುತ್ತದೆ. ಆದರೂ ನಮ್ಮ ಮಾತು ಸತ್ಯವೇ. ಇಲ್ಲಿ ಬಹಳ ಜನ ನನ್ನನ್ನು ಒಂದು ಪ್ರಶ್ನೆ ಕೇಳಬಹುದು, ಅದೇನೆಂದರೇ! ತಾಯಿ ಗರ್ಭದಿಂದ ಮನುಷ್ಯರೆಲ್ಲರೂ ಒಂದು ದಿನಕ್ಕೆ ಕೆಲವು ಸಾವಿರ ಮಂದಿ ಹುಟ್ಟುತ್ತಿರುವುದನ್ನು ನೋಡುತ್ತಿದ್ದೇವೆ. ಆ ರೀತಿ ನೋಡಿದ ನಂತರವೂ ಸಹ ಯಾವ ಮನುಷ್ಯ ತಾಯಿ ಗರ್ಭದಿಂದ ಹುಟ್ಟಲಿಲ್ಲವೆಂದರೆ ಹೇಗೆ ನಂಬಬೇಕು?

ಎಂದು ಪ್ರಶ್ನಿಸಬಹುದು. ಈ ವಿಷಯಗಳೆಲ್ಲವೂ ಇಲ್ಲಿ ಪ್ರಸ್ತಾಪಿಸುವುದು ಅಸಂಧರ್ಭವಾಗುತ್ತದೆ. ನಾವು ಸತ್ಯವಾದ ಸೂಚನೆಗಳನ್ನು ಪ್ರಶ್ನಿಸಿ ಬಿಟ್ಟು ಹಾಕುತ್ತಿದ್ದೇವೆ. ಈ ವಿಷಯಗಳೆಲ್ಲವೂ ಪೂರ್ತಿ ವಿವರವಾಗಿ ತಿಳಿಯಬೇಕೆಂದರೇ ಯೋಗೀಶ್ವರರವರು ಬರೆದ **"ಜನನ ಮರಣ ಸಿದ್ಧಾಂತ"** ಎಂಬ ಚಿಕ್ಕ ಗ್ರಂಥವನ್ನು ನೋಡಿರಿ. ಆ ಗ್ರಂಥದಲ್ಲಿ ಮನುಷ್ಯ ಜನ್ಮ ವಿಷಯವಿದೆ, ಅದನ್ನು ತಿಳಿಯುವುದಾದರೇ, ಅದಕ್ಕೆ ಭಿನ್ನವಾಗಿರುವುದು ದೇವರ ಜನ್ಮ ಎಂದು ತಿಳಿಯಬಲ್ಲದು.

**ಮುಸ್ಲೀಮ್ :–** ನೀವು ಮಾತುಗಳ ಚಾಕಚಕ್ಯದಿಂದ ನಮ್ಮನ್ನು ಗೊಂದಲದಲ್ಲಿ ಸಿಲುಕಿಸಬೇಕೆಂದು ನೋಡುತ್ತಿದ್ದೀರ. ನೀವು ಬಾರೆಹಣ್ಣಿಗೆ ಮಸಿ ಹಚ್ಚಿ ನೇರಳೆಹಣ್ಣು ಎಂದು ನಂಬಿಸಬೇಕೆಂದು ಪ್ರಯತ್ನಿಸುತ್ತಿದ್ದೀರ. ನಿಮ್ಮ ಮಾತುಗಳಿಗೆ ಮೋಸ ಹೋಗುವವರಲ್ಲ. ನಮ್ಮ ಮತದಲ್ಲಿ ಹಿರಿಯರು ಇಟ್ಟಿರುವ ಷರಿಯತ್ ಪ್ರಕಾರ ನಾವು ಇತರರು ಬರೆದ ಗ್ರಂಥಗಳನ್ನು ಓದುವುದಿಲ್ಲ. ನಮ್ಮ ಖುರ್‌ಆನ್ ಗ್ರಂಥವನ್ನು ಮತ್ತು ಹದೀಸು ಗ್ರಂಥಗಳನ್ನು ಮಾತ್ರ ಓದುತ್ತೇವೆ. ಈ ಎರಡು ಗ್ರಂಥಗಳಲ್ಲಿ ಇಲ್ಲದ ಜ್ಞಾನ ವಿಷಯಗಳಂತು ಯಾವುವು ಇಲ್ಲ. ನಮ್ಮ ಹಿರಿಯರು ನಿರ್ಣಯಿಸಿದ ಷರಿಯತ್ ಪ್ರಕಾರ ಅರಬ್ಬೀ ಭಾಷೆಯಲ್ಲಿದ್ದ ಖುರ್‌ಆನ್ ಗ್ರಂಥವನ್ನೇ ಓದುತ್ತೇವೆ. ನೀವು ಖುರ್‌ಆನ್ ಗ್ರಂಥವನ್ನು ಕನ್ನಡದಲ್ಲಿ ಬರೆದು ಓದು ಎಂದರೆ ನಾವು ಓದುವುದಿಲ್ಲ. ಅರಬ್ಬೀ ಭಾಷೆ ತಿಳಿದಿದ್ದರೇನೆ ಖುರ್‌ಆನ್ ಗ್ರಂಥ ಭಾವದಲ್ಲಿ ತಪ್ಪಿಲ್ಲದೇ ಅರ್ಥವಾಗುತ್ತದೆ. ಹಾಗಲ್ಲದೇ ಬೇರೆ ಭಾಷೆಯಲ್ಲಿ ಬರೆದರೆ ಅರ್ಥ ಬದಲಾಗುತ್ತದೆ. ಮೊದಲೇ ನಿಮಗೆ ಅರಬ್ಬೀ ಭಾಷೆಯೇ ಬರುವುದಿಲ್ಲ. ಹಾಗಿರುವಾಗ ನಿಮ್ಮ ಗುರುಗಳು ಬರೆದ ಖುರ್‌ಆನ್ ಗ್ರಂಥದಲ್ಲಿ ಎಷ್ಟೋ ತಪ್ಪುಗಳಿರುತ್ತವೆ. ನೀವು ಖುರ್‌ಆನ್‌ನಲ್ಲಿ ಪ್ರಾಂತೀಯ ಭಾಷೆ ತಿಳಿದ ಪ್ರವಕ್ತನನ್ನೇ ಕಳುಹಿಸುತ್ತೇನೆಂದು ದೇವರು ಹೇಳಿದಹಾಗೆ ಇದೆಯೆಂದು ಹೇಳಿದ್ದೀರ. ಈಗ ಕೊನೆಯ ಪ್ರವಕ್ತರಾದ ಮಹಮ್ಮದ್ ಪ್ರವಕ್ತರವರು 1400 ಸಂವತ್ಸರಗಳ ಕೆಳಗೇ ಬಂದು ಹೋಗಿದ್ದಾನೆ. ಆತನೇ ಕೊನೆಯ ಪ್ರವಕ್ತ ಎಂದು ಅಲ್ಲಾಹ್

(ದೇವರು) ಖುರ್‌ಆನ್ ಗ್ರಂಥದಲ್ಲಿಯೇ ಹೇಳಿದ್ದಾನೆ. ಕೊನೆಯ ಪ್ರವಕ್ತ ಬರುವುದಕ್ಕಿಂತ ಮೊದಲು ಬಂದಿರುವ ಪ್ರವಕ್ತರನ್ನು ಕುರಿತು ದೇವರು ಹೇಳಿದ್ದಾನಾಗಲೀ, ಕೊನೆಯ ಪ್ರವಕ್ತ ಬಂದ ನಂತರ ಮತ್ತೊಬ್ಬ ಪ್ರವಕ್ತ ಬರುವುದಕ್ಕೆ ಅವಕಾಶವಿಲ್ಲವೆಂದು ನೆನಪಿಟ್ಟುಕೊಳ್ಳಬೇಕು.

**ನಮ್ಮವರು :–** ನೀವು ಮಾತು ಮಾತಿಗೂ ನಮ್ಮ ಖುರ್‌ಆನ್ ಎನ್ನುತ್ತಿದ್ದೀರ. ಹಾಗೆ ಅನ್ನಬೇಡಿ ಖುರ್‌ಆನ್ ದೇವರು ಸರ್ವ ಮಾನವರಿಗೂ ಕಳುಹಿಸಿದ ದೈವ ಸಂದೇಶ. ಅದು ದೈವ ಗ್ರಂಥ. ನಿಮ್ಮದು, ನಮ್ಮದು ಎಂದು ದೈವ ಗ್ರಂಥಗಳನ್ನು ಅನ್ನಬಾರದು. ಮನುಷ್ಯನಾದ ಪ್ರತಿಯೊಬ್ಬನಿಗೂ ದೈವ ಗ್ರಂಥದಲ್ಲಿನ ದೇವರ ವಾಕ್ಯಗಳು ಇವೆ. ಖುರ್‌ಆನ್ ಗ್ರಂಥದಲ್ಲಿನ ಜ್ಞಾನ ಮುಸ್ಲೀಮ್‌ರೊಬ್ಬರಿಗೇ ಎಂದು ಅಂದುಕೊಳ್ಳುವುದು, ಭಗವದ್ಗೀತೆ ಹಿಂದೂಗಳಿಗೊಬ್ಬರಿಗೇ ಎಂದು ಅಂದುಕೊಳ್ಳುವುದು ತಪ್ಪಾಗುತ್ತದೆ. ನಂತರ ನಮ್ಮ ಮತದಲ್ಲಿನ ಷರಿಯತ್ ಪ್ರಕಾರ ಇತರರು ಬರೆದಿರುವುದಾಗಲೀ, ಅರಬ್ಬೀ ಭಾಷೆಯಲ್ಲಿ ಇಲ್ಲದಿರುವುದಾಗಲೀ ಓದುವುದಿಲ್ಲ ಎಂದಿದ್ದೀರ. ಅರಬ್ಬೀ ಭಾಷೆಯನ್ನು ಕುರಿತು ಇದಕ್ಕೂ ಮೊದಲೇ ಹೇಳಿದ್ದೇವೆ. ಖುರ್‌ಆನ್ ಗ್ರಂಥವನ್ನು ಅರಬ್ಬೀ ಭಾಷೆಯಲ್ಲಿ ಹೊರತು ಇತರ ಭಾಷೆಯಲ್ಲಿ ಓದಬಾರದೆಂದು ಹೇಳಿದ್ದಾರೆ. ಅದು ನಮ್ಮ ಷರಿಯತ್ ಎಂದು ಹೇಳಿದ್ದೀರ. ಷರಿಯತ್ ಎನ್ನುವುದು ಪ್ರತಿ ಮತದಲ್ಲಿಯೂ ಇದೆ. ಕೆಲವು ಮತಗಳಲ್ಲಿ ಅದನ್ನೇ ಸಂಪ್ರದಾಯಗಳು ಎಂಬ ಪದದಿಂದಲೂ ಸಹ ಹೇಳಿಕೊಳ್ಳುತ್ತಿದ್ದಾರೆ. ದೇವರು ಮನುಷ್ಯರಿಗೆ ಜ್ಞಾನವನ್ನು ಮೂರು ಗ್ರಂಥಗಳಿಂದ ಕೊಟ್ಟಿದ್ದಾನೆ. ಹಾಗೆ ಕೊಡುವುದಕ್ಕೆ ಕಾರಣವನ್ನೂ ಸಹ ಮೊದಲೇ ಹೇಳಿದ್ದೇವೆ. ಮನುಷ್ಯನ ಸಾಮರ್ಥ್ಯವನ್ನನುಸರಿಸಿ ಆಯಾ ಪ್ರಾಂತಗಳ ಪ್ರಜೆಗಳ ಮನೋಭಾವಗಳನ್ನನುಸರಿಸಿ, ಅವರು ಗ್ರಹಿಸಿಕೊಳ್ಳುವುದಕ್ಕೆ ಸುಲಭವಾಗಿ ಇರುವ ಹಾಗೆ ಮೂರು ಗ್ರಂಥಗಳಾಗಿ ದೇವರ ಜ್ಞಾನವನ್ನು ಒದಗಿಸಲಾಗಿದೆ. ಅದು ಅರ್ಥವಾಗುವಂತೆ ಒಂದೇ ಕುಟುಂಬದಲ್ಲಿ, ಒಂದೇ ಪಾತ್ರೆಯಲ್ಲಿ ತಯಾರಿಸಿದ, ಒಂದೇ ರುಚಿ ಇರುವ ಪಾನಕವನ್ನು ಕುಡಿಯುವುದಕ್ಕೆ ಅವರವರ

ಶರೀರಗಳನ್ನನುಸರಿಸಿ, ದೊಡ್ಡಗ್ಲಾಸು, ಚಿಕ್ಕಗ್ಲಾಸು, ಚಿಕ್ಕ ಚೌಟಿನಿಂದ ಕುಡಿಯೆಂದು ಹೇಳಿ ಕೊಟ್ಟರೆ ಕುಡಿದಿರುವುದು ಪಾನಕವೇ ಆದರೂ ಕುಡಿದ ಮೂರು ವಿಧಗಳವರೂ ನನ್ನದು ದೊಡ್ಡಗ್ಲಾಸು ಪಾರ್ಟೀ, ನನ್ನದು ಚಿಕ್ಕಗ್ಲಾಸು ಪಾರ್ಟೀ, ನನ್ನದು ಚೆಂಚಾಪಾರ್ಟೀ ಎಂದು ಕುಡಿದಿರುವುದರ ದೊಡ್ಡತನವನ್ನು ಬಿಟ್ಟು, ಕುಡಿದ ಪರಿಕರಗಳನ್ನನುಸರಿಸಿ ಹೇಳಿಕೊಂಡಹಾಗೆ, ದೇವರು ಕೊಟ್ಟಿರುವ ಜ್ಞಾನವನ್ನು ದೊಡ್ಡದಾಗಿ ಹೇಳಿಕೊಳ್ಳದೇ ದೇವರ ಜ್ಞಾನವನ್ನು ಗ್ರಹಿಸುವುದಕ್ಕೆ ಕೊಟ್ಟಿರುವ ಗ್ರಂಥಗಳನ್ನನುಸರಿಸಿ ನನ್ನದು ಇಂತಹ ಮತವೆಂದು ಬೇರೆಬೇರೆ ಮತಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಗ್ರಂಥವನ್ನು ಕೊಟ್ಟರೇ, ಅದರಲ್ಲಿನ ಜ್ಞಾನವನ್ನು ಬಿಟ್ಟು ಗ್ರಂಥವನ್ನನುಸರಿಸಿ ಮತವನ್ನು ತಯಾರಿಸಿ ಕೊಂಡಿದ್ದಾರೆ. ಮತವೇ ಮನುಷ್ಯರಿಗೆ ದೊಡ್ಡ ಮಾಯೆಯಾದಾಗ, ಅದಕ್ಕೆ ಜೊತೆಯಾಗಿ ಸಂಪ್ರದಾಯಗಳು ಎಂಬ ಷರಿಯತ್‌ನ್ನು ಪ್ರತಿ ಮತದಲ್ಲಿ ತಯಾರಿಸಿಕೊಂಡಿದ್ದಾರೆ.

ದೇವರು ಕೊಟ್ಟಿರುವ ಗ್ರಂಥಗಳಲ್ಲಿ ಇಲ್ಲದ ಸಂಪ್ರದಾಯಗಳನ್ನು ಮನುಷ್ಯ ತಾನು ಆಯ್ಕೆ ಮಾಡಿಕೊಂಡ ಮತದಲ್ಲಿ ಇಟ್ಟುಕೊಂಡಿದ್ದಾನೆ. ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ಎಲ್ಲಾದರೂ ಹಿಂದೂಗಳನ್ನು ಗಡ್ಡ ಬೆಳಸಿಕೊಳ್ಳಿರೆಂದು ಹೇಳಿದ್ದಾನಾ? ಕಾಷಾಯ ವಸ್ತ್ರಗಳು ಧರಿಸಿರೆಂದು ಹೇಳಿದ್ದಾನಾ? ಎಲ್ಲೂ ಹೇಳಲಿಲ್ಲ. ಆದರೇ ನಾನು ಸ್ವಲ್ಪ ಜ್ಞಾನಿ ಎನ್ನುವ ಪ್ರತಿಯೊಬ್ಬನು ಗಡ್ಡ ಬೆಳಸಿಕೊಂಡಿದ್ದಾನೆ, ಕಾಷಾಯ ವಸ್ತ್ರಗಳನ್ನು ಧರಿಸುತ್ತಿದ್ದಾನೆ. ಕೆಲವರಾದರೆ ಪೂರ್ವದಿಂದ ಬಂದಿರುವ ಸಂಪ್ರದಾಯ ಎಂದು, ಭಗವದ್ಗೀತೆಯನ್ನು ಹೇಳುವುದಕ್ಕಿಂತ ಮೊದಲು ಐದುಸಾವಿರ ಸಂವತ್ಸರಗಳಿಗಿಂತ ಮೊದಲೂ ಸಹ ಮಹರ್ಷಿಗಳು ಗಡ್ಡ ಬೆಳಸಿಕೊಂಡು ಇರುತ್ತಿದ್ದರೆಂದು ಕೆಲವರು ಹಿಂದೂಗಳು ಅನ್ನುತ್ತಿದ್ದಾರೆ. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಪೂರ್ವದಲ್ಲಿ ಈಗಿರುವಂತೆ ರೇಜರ್‌ಗಳು, ಬ್ಲೇಡುಗಳು ಇಲ್ಲ. ಕ್ಷೌರಿಕರು ಮಾತ್ರವೇ ಆಗಾಗ ಕ್ಷೌರ ಮಾಡುತ್ತಿದ್ದರು. ಊರಲ್ಲಾದರೇ ಕ್ಷೌರಿಕರು ಇರುತ್ತಾರೆ. ಊರುಬಿಟ್ಟು ಕಾಡಿನೊಳಗೆ

ಹೋಗಿ, ಕಾಡಿನಲ್ಲಿದ್ದು ತಪಸ್ಸು ಮಾಡಿಕೊಳ್ಳುವವರಿಗೆ ಅಲ್ಲಿ ಕ್ಷೌರಿಕರು ಇಲ್ಲದಿರುವುದರಿಂದ ಸ್ವತಃವಾಗಿ ಗಡ್ಡವನ್ನು ತೆಗೆಯುವುದಕ್ಕೆ ರೇಜರ್‌ಗಳು, ಬ್ಲೇಡುಗಳು ಇಲ್ಲದಿರುವುದರಿಂದ ಅವರಿಗೆ ಗಡ್ಡಗಳು ಬೆಳೆದುಹೋಗುತ್ತಿದ್ದವು. ಈಗ ಎಲ್ಲಿಗೆ ಹೋದರೂ ಹಿಂದೆ ತೆಗೆದುಕೊಂಡು ಹೋಗುವ ರೇಜರ್‌ಗಳು, ಬ್ಲೇಡುಗಳು ಇವೆ. ಅದನ್ನನುಸರಿಸಿ ಕಾಡಿನಲ್ಲಿರುವವನೂ ಸಹ ಗಡ್ಡವನ್ನು ಸ್ವತಃವಾಗಿ ಇಲ್ಲದಂತೆ ಮಾಡಿಕೊಳ್ಳಬಹುದು. ಆದರೇ ವಿಚಿತ್ರವಾಗಿ ಊರಲ್ಲಿರುವವರೂ ಸಹ ಕ್ಷೌರಿಕರು ಅನುಕೂಲವಾಗಿದ್ದರೂ, ಗಡ್ಡಗಳು ಬೆಳಸಿ ಇದು ಹಿಂದೂ ಸಂಪ್ರದಾಯ ಎಂದು ಹೇಳಿತ್ತಿದ್ದಾರೆ. ಮುಸ್ಲೀಮ್‌ರ ವಿಷಯಕ್ಕೆ ಬಂದರೆ ಖುರ್‌ಆನ್ ಗ್ರಂಥದಲ್ಲಿ ಹೇಳದ ಸಂಪ್ರದಾಯಗಳೆಲ್ಲವೂ ಆಚರಿಸುತ್ತಾ ಇದು ನಮ್ಮ ಷರಿಯತ್ (ಸಂಪ್ರದಾಯ) ಎನ್ನುತ್ತಿದ್ದಾರೆ. ಷರಿಯತ್‌ಗಳ ಹೆಸರುಗಳಿಂದ ಯಾರು ಹೇಗಿದ್ದರೂ ಪರವಾಗಿಲ್ಲ ಆದರೆ, ದೈವ ಗ್ರಂಥಗಳಲ್ಲಿನ ಜ್ಞಾನಕ್ಕೆ ವಿರುದ್ಧವಾಗಿ ನಡೆದುಕೊಳ್ಳಬಾರದೆಂದು ಹೇಳುತ್ತಿದ್ದೇವೆ.

ಹಾಗೆ ದೈವ ಗ್ರಂಥದಲ್ಲಿನ ದೇವರ ಜ್ಞಾನಕ್ಕೆ ವಿರುದ್ಧವಾಗಿ ಅಸತ್ಯಗಳನ್ನು ಹೇಳಿದರೆ ಅಂತಹವನಿಗೆ ದೇವರು ನರಕಯಾತನೆ ಬೀಳುವಂತೆ ಮಾಡುತ್ತಾನೆ. ಈ ವಿಷಯವಾಗಿ ಅಂತಿಮ ದೈವ ಗ್ರಂಥದಲ್ಲಿ ಸೂರಾ 41, ಆಯತ್ 40ರಲ್ಲಿ ಹೀಗೆ ಇದೆ. **(41–40) "ನಮ್ಮ ವಾಕ್ಯಗಳ ವಿಷಯದಲ್ಲಿ ವಕ್ರ ವೈಖರಿಯನ್ನು ಅವಲಂಬಿಸಿ ಅಸತ್ಯಗಳಾಗಿ ಬದಲಾಯಿಸಿ ಹೇಳುವವನನ್ನು ನಾವು ನೋಡುತ್ತಲೇ ಇದ್ದೇವೆ. ಅಗ್ನಿಯಲ್ಲಿ ಬೀಳುವವನು ಮೇಲಾ ಅಥವಾ ಪ್ರಳಯದಿನದಂದು ಸುರಕ್ಷಿತವಾಗಿ ಪ್ರಶಾಂತ ಸ್ಥಿತಿಯಲ್ಲಿ ಬರುವವನು ಮೇಲಾ? ನೀವು ಇಷ್ಟ ಬಂದಿರುವುದು ಮಾಡಿಕೊಳ್ಳುತ್ತಾ ಹೋದರೇ ಹೋಗಿ. ಆತನು ನೀವು ಮಾಡುವ ಕೆಲಸಗಳೆಲ್ಲವನ್ನೂ ನೋಡುತ್ತಲೇ ಇದ್ದಾನೆ."** ದೇವರು ಹೇಳಿದ ಜ್ಞಾನವನ್ನು ಬಚ್ಚಿಟ್ಟು ಬದಲಾಯಿಸಿ ಹೇಳಿದರೇ ಶಾಪಗಳು ತಪ್ಪುವುದಿಲ್ಲವೆಂದು ಖುರ್‌ಆನ್ ಗ್ರಂಥದಲ್ಲಿಯೇ ಸೂರಾ 2, ಆಯತ್ 159ರಲ್ಲಿ ಹೇಳಿದ್ದಾರೆ. **(2–159) "ಅಲ್ಲಾಹ್ ಅವತರಿಸುವಂತೆ ಮಾಡಿದ ನಿದರ್ಶನಗಳನ್ನು ಮತ್ತು ಸನ್ಮಾರ್ಗಗಳನ್ನು ಪ್ರಜೆಗಳಿಗಾಗಿ**

**ಗ್ರಂಥದಲ್ಲಿ ವಿಶದಪಡಿಸಿದ ನಂತರವೂ ಸಹ ಅವುಗಳನ್ನು ಬಚ್ಚಿಡುವವರನ್ನು ದೇವರು (ಅಲ್ಲಾಹ್) ಶಪಿಸುತ್ತಾನೆ. ಇನ್ನೂ ಬೇರೆ ಶಪಿಸುವವರೂ ಸಹ ಅವರನ್ನು ಶಪಿಸುತ್ತಾರೆ."** ಇದೆಲ್ಲವೂ ನೋಡಿದ ನಂತರ ದೇವರು ಹೇಳಿದ ಜ್ಞಾನವನ್ನು ಅಲ್ಲವೆಂದು ಮತ, ಮತದಲ್ಲಿನ ಮನುಷ್ಯರು ಹೇಳಿದ ಸಂಪ್ರದಾಯಗಳ ಹೆಸರಿನಿಂದ ನಡೆಯಬಾರದು.

ದೇವರು ತನ್ನ ಪಾಲನೆಯಲ್ಲಿರುವ ಸೂರ್ಯಗ್ರಹದಿಂದ ಸೃಷ್ಟ್ಯಾದಿ ಯಲ್ಲಿಯೇ ಮನುವು ಎಂಬ ವ್ಯಕ್ತಿಗೆ ಜ್ಞಾನವನ್ನು ಹೇಳಿಸಿದ್ದಾನೆ. ಭೂಮಿ ಮೇಲೆ ಒಬ್ಬ ಮನುಷ್ಯನಿಗೆ ಜ್ಞಾನವನ್ನು ತಿಳಿಸುವುದಕ್ಕೆ ಎಷ್ಟೋ ಉತ್ತಮ ಲಕ್ಷಣಗಳಿರುವ ಮನುಷ್ಯನನ್ನು ಆಯ್ಕೆಮಾಡಿಕೊಂಡು ಆತನಿಗೆ ಜ್ಞಾನವನ್ನು ಹೇಳುವುದು ನಡೆಯುತ್ತದೆ. ಸೃಷ್ಟ್ಯಾದಿಯಲ್ಲಿ ಅಂತಹ ಉತ್ತಮನು ಮನುವಾಗಿ ಕಾಣಿಸಿದ್ದಾನೆ. ನಂತರ ಈಗ ಕಲಿಯುಗದಲ್ಲಿ ಮಹಮ್ಮದ್ ಪ್ರವಕ್ತರವರು ಮನುಷ್ಯರಲ್ಲಿ ಉತ್ತಮವಾದವನಾಗಿ ದೇವರಿಗೆ ತಿಳಿದು ತನ್ನ ಜ್ಞಾನವನ್ನು ಜಿಬ್ರಯೇಲ್‌ನಿಂದ ಪ್ರವಕ್ತರಿಗೆ ಜ್ಞಾನವನ್ನು ಸೇರುವಂತೆ ಮಾಡಿದ್ದಾನೆ. ಜಿಬ್ರಯೇಲ್ ಹೇಳಿದ ಜ್ಞಾನ ಅಂತಿಮ ದೈವ ಗ್ರಂಥವಾಗಿ ತಯಾರಾಗಿದೆ. ಪ್ರಜೆಗಳೊಂದಿಗೆ ಮಾತನಾಡುವವನನ್ನು 'ವಕ್ತ' ಎನ್ನುತ್ತಾರೆ. ಮುಖ್ಯವಾದ ಜ್ಞಾನವಿಷಯಗಳನ್ನು ಹೇಳುವವನನ್ನು 'ಪ್ರವಕ್ತ' ಎನ್ನುತ್ತಾರೆ. ಮಹಮ್ಮದ್ ಪ್ರವಕ್ತರವರು ಪ್ರಜೆಗಳಿಗೆ ಜ್ಞಾನವನ್ನು ತಿಳಿಸಿದ್ದಾನಾದ್ದರಿಂದ ಪ್ರವಕ್ತ ಆಗಿದ್ದಾನೆ. ಮಹಮ್ಮದ್ ಪ್ರವಕ್ತರವರು ತಿಳಿಸಿದ ಜ್ಞಾನ ಅಂತಿಮ ದೈವಗ್ರಂಥದಲ್ಲಿನ ಜ್ಞಾನ ಆಗುವುದರಿಂದ ಮಹಮ್ಮದ್ ಪ್ರವಕ್ತರವರನ್ನು 'ಅಂತಿಮ ದೈವಪ್ರವಕ್ತ' ಎಂದು ಹೇಳಬೇಕಾಗಿ ಬಂದಿದೆ. ಒಂದೇ ದೈವಜ್ಞಾನ ಪ್ರಥಮ, ಮಧ್ಯಮ, ಅಂತಿಮ ದೈವಗ್ರಂಥಗಳಾಗಿ ಹೇಳುವುದರಿಂದ ಪ್ರತಿ ಗ್ರಂಥದಲ್ಲಿನ ಜ್ಞಾನಕ್ಕೂ ಒಬ್ಬ ಪ್ರವಕ್ತ ಇದ್ದಾನೆ. "ನೇರವಾಗಿ ಪ್ರಜೆಗಳೊಂದಿಗೆ ಜ್ಞಾನವನ್ನು ಹೇಳಿದವರು ಪ್ರವಕ್ತರು." ಎಂಬ ಸೂತ್ರವನ್ನನುಸರಿಸಿ ಭಗವದ್ಗೀತೆಗೆ ವ್ಯಾಸನು ಪ್ರವಕ್ತನಾದಾಗ, ಆತನನ್ನು ಪ್ರಥಮ ಪ್ರವಕ್ತನಾಗಿ ಹೇಳಬಹುದು. ಹಾಗೇ ಎರಡನೆಯ ಗ್ರಂಥ ಜ್ಞಾನವನ್ನು ಏಸು ಪ್ರಜೆಗಳಿಗೆ

ನೇರವಾಗಿ ಹೇಳುವುದರಿಂದ ಏಸನ್ನು ದ್ವಿತೀಯ ಪ್ರವಕ್ತ ಎಂದು ಹೇಳಬಹುದು. ಕೊನೆಯ ಗ್ರಂಥವಾಗಿ ಅಂತಿಮ ದೈವಗ್ರಂಥ ಜ್ಞಾನವನ್ನು ಮಹಮ್ಮದ್ ಪ್ರವಕ್ತರವರು ಪ್ರಜೆಗಳಿಗೆ ಹೇಳುವುದರಿಂದ ಆತನನ್ನು ಕೊನೆಯ ಪ್ರವಕ್ತ ಎಂದೂ ಅಥವಾ ಕಡೆಯ ಪ್ರವಕ್ತ ಎಂದು ಹೇಳುವುದು ನಡೆದಿದೆ.

ಕೊನೆಯ ಪ್ರವಕ್ತ ಹೇಳಿದ ನಂತರ ಪ್ರಥಮ ಪ್ರವಕ್ತ ಹೇಳಿದ ಮಾತುಗಳನ್ನು ಬಿಟ್ಟುಹಾಕಬೇಕೆಂದು ಯಾರೂ ಅಂದುಕೊಳ್ಳಬಾರದು. ದೇವರು ತನ್ನ ಗ್ರಂಥದಲ್ಲಿ ಹೇಳಿದ ಮಾತುಗಳನ್ನೇ ಪ್ರವಕ್ತರು ಪ್ರಜೆಗಳಿಗೆ ಹೇಳಿದ್ದಾರಾಗಲೀ, ಪ್ರವಕ್ತರು ಪ್ರತ್ಯೇಕಿಸಿ ಸ್ವತಃವಾಗಿ ಜ್ಞಾನವನ್ನು ಹೇಳಲಿಲ್ಲ. ದೇವರು ಹೇಳಿದ ಜ್ಞಾನವನ್ನು ಪ್ರವಕ್ತರು ಯಾರೂ ಅಲ್ಲಗಳೆಯರು. ಖುರ್‌ಆನ್ ಗ್ರಂಥದಲ್ಲಿ (14–4) ವಾಕ್ಯದಲ್ಲಿ ಇರುವ ಭಾಷೆಯನ್ನು ಕುರಿತು ಹೇಳಿದ ಮಾತುಗಳನ್ನು ಯಾರೂ ಖಂಡಿಸುವುದಕ್ಕೆ ಅವಕಾಶವಿಲ್ಲ. ಮಹಮ್ಮದ್ ಪ್ರವಕ್ತರವರೇ ಆ ವಿಷಯವನ್ನು ಸ್ವತಹವಾಗಿ ಪ್ರಜೆಗಳಿಗೆ ಹೇಳಿದ್ದಾನೆ. ಆದ್ದರಿಂದ ಆತನನಂತರವೂ ಸಹ ಆ ಮಾತು ಶಾಶ್ವತವಾಗಿ ಇರಬಲ್ಲದು. ಮೂರು ಗ್ರಂಥಗಳಲ್ಲಿನ ವಿಷಯಗಳಿಗಿಂತಲೂ ಮಿಗಿಲಾದ ಜ್ಞಾನ ಎಲ್ಲಿಯೂ ಇಲ್ಲ. ಆ ಮೂರು ಗ್ರಂಥಗಳಿಗೂ ಮೂವರು ಪ್ರವಕ್ತರು ಇದ್ದಾರೆ. ನಂತರ ಜ್ಞಾನವೂ ಇಲ್ಲ, ಪ್ರವಕ್ತಯೂ ಇಲ್ಲ. ಆದ್ದರಿಂದ ಮುಹಮ್ಮದ್ ಪ್ರವಕ್ತರವರೇ ಆಖರೀ ಪ್ರವಕ್ತಯೆಂದು ಹೇಳಬಹುದು. ಆತನ ನಂತರ ಇರುವ ಜ್ಞಾನವನ್ನು ಬೇರೆಮಾಡಿ ವಿವರವಾಗಿ ಹೇಳಿಕೊಳ್ಳುವವರು ಬರಬಹುದಾಗಲೀ, ಹೊಸ ಜ್ಞಾನವನ್ನು ಹೇಳುವವರು ಬರುವುದಿಲ್ಲ. ಆದ್ದರಿಂದ ಮಹಮ್ಮದ್ ಪ್ರವಕ್ತರವರಿಗೆ ಶಾಶ್ವತವಾಗಿ ಆಖರೀ ಪ್ರವಕ್ತ ಎಂಬ ಹೆಸರು ಶಾಶ್ವತವಾಗಿ ನಿಂತುಹೋಗಿದೆ.

ನೀವು ಈ ಪ್ರಶ್ನೆಯಲ್ಲಿ ಅರಬ್ಬೀ ಭಾಷೆಯಲ್ಲಿನ ಖುರ್‌ಆನ್‌ನನ್ನೇ ಓದಬೇಕೆಂದು ಇತರ ಭಾಷೆಯಲ್ಲಿ ಬರೆದ ಖುರ್‌ಆನ್‌ನಲ್ಲಿ ಭಾವಲೋಪವಿರುತ್ತದೆಂದು ಹೇಳುತ್ತಾ ನೀವು ಕನ್ನಡದಲ್ಲಿ ಬರೆದ ಖುರ್‌ಆನ್‌ನನ್ನು ಓದುವುದಿಲ್ಲ ಎಂದಿದ್ದೀರ. ಅದನ್ನು ಕುರಿತು ನಾವು ಮಾತನಾಡುವುದು ಏನೆಂದರೇ! ಅರಬ್ಬೀ

ಭಾಷೆ ನಿಮಗೆ ಮಾತ್ರ ತಿಳಿದಿದೆ. 162 ಕೋಟಿ ಜನರು ಮುಸ್ಲೀಮ್‌ರಲ್ಲಿ ಕೇವಲ 30 ಕೋಟಿ ಜನರಿಗೆ ಮಾತ್ರವೇ ಅರಬ್ಬೀ ಭಾಷೆ ತಿಳಿದಿದೆ. ಅದರಲ್ಲಿ ಭಾಷೆ ತಿಳಿದರೂ ಲಿಪಿ ತಿಳಿಯದವರು ಬರೆಯಲು ಬಾರದವರು ಬಹಳ ಜನರು ನಿರಕ್ಷರಸ್ತರಿದ್ದಾರೆ. 30 ಕೋಟಿ ಜನರು ಅರಬ್ಬೀ ಭಾಷೆ ಮಾತನಾಡಿದರೂ ಅವರಲ್ಲಿ ಅರಬ್ಬೀ ಲಿಪಿಯನ್ನು ಓದನ್ನು ಓದಿದವರು ಕೇವಲ ಹತ್ತು (10) ಕೋಟಿ ಜನರು ಮಾತ್ರವೇಯೆಂದು ಹೇಳಬಹುದು. ಅರಬ್ಬೀ ಓದು ಬಂದಿರುವವರಲ್ಲಿ ಎಷ್ಟು ಕೋಟಿ ಜನರಿದ್ದರೂ ಅವರಲ್ಲಿ ಪಂಡಿತರು ಕೆಲವುಜನರು ಮಾತ್ರವೇ ಇರುತ್ತಾರೆ. ಆ ಪಂಡಿತರಲ್ಲಿ ರಚನಾಶಕ್ತಿ ಇರುವವರು ಕೇವಲ ಸ್ವಲ್ಪ ಜನರು ಮಾತ್ರವೇ ಇರುತ್ತಾರೆ. ಅಂತಹ ಉದ್ದಂಡ ಪಂಡಿತರಲ್ಲಿ ಅರಬ್ಬೀ ಭಾಷೆಯೊಂದಿಗೆ ಕನ್ನಡ ಭಾಷೆಯನ್ನು ತಿಳಿದವರು ಕೇವಲ ಹತ್ತ (10) ಅಥವಾ 15 ಜನರು ಮಾತ್ರ ಇರಬಹುದು. ಅಂತಹ ಪಂಡಿತರು ಅರಬ್ಬೀ ಭಾಷೆಯಲ್ಲಿರುವ ಖುರ್‌ಆನ್ ಗ್ರಂಥವನ್ನು ಕನ್ನಡದೊಳಗೆ ಅನುವಾದಿಸಿದ್ದಾರೆ. ಕೆಲವರು ಉರ್ದೂದಲ್ಲಿ ಅನುವಾದಿಸಿದ್ದಾರೆ. ಉರ್ದೂನಿಂದ ಕನ್ನಡದೊಳಗೆ ಕೆಲವರು, ಅರಬ್ಬೀ ಭಾಷೆಯಿಂದ ಕನ್ನಡ ಭಾಷೆಯೊಳಗೆ ಕೆಲವರು, ಖುರ್‌ಆನ್ ಗ್ರಂಥವನ್ನು ಬರೆಯುವುದು ನಡೆದಿದೆ. ಹಾಗೆ ಪಂಡಿತರು ಬರೆದಿರುವುದರಲ್ಲಿ ಭಾವ ಲೋಪವಿರುವುದಿಲ್ಲ ಅಲ್ಲವೆ! ಪಂಡಿತರು ಕನ್ನಡದಲ್ಲಿ ಬರೆದ ಖುರ್‌ಆನ್ ಗ್ರಂಥವನ್ನು ನಾವು ನೋಡಿ, ಅದರಲ್ಲಿ ಅರ್ಥವಾಗದ ವಾಕ್ಯಗಳಿಗೆ ಜ್ಞಾನ ವಿವರವನ್ನು ಬರೆದಿದ್ದೇವೆ. ಅಷ್ಟೇ ಹೊರತು ನೇರವಾಗಿ ಅರಬ್ಬೀ ಭಾಷೆಯಲ್ಲಿರುವ ಖುರ್‌ಆನ್ ಗ್ರಂಥಕ್ಕೆ ನಾವು ವಿವರವನ್ನು ಬರೆಯಲಿಲ್ಲ ಅಲ್ಲವೆ! ಅಷ್ಟೇ ಅಲ್ಲದೆ ಖುರ್‌ಆನ್‌ನನ್ನು ಅರಬ್ಬೀ ಭಾಷೆಯಲ್ಲೇ ಓದಬೇಕು. ಕನ್ನಡದಲ್ಲಾಗಲೀ ಇತರ ಭಾಷೆಗಳಲ್ಲಾಗಲೀ ಓದಬಾರದೆಂದು ನೀವು ಹೇಳಿದ್ದೀರಲ್ಲವೆ! ನಿಮಗೆ ತಿಳಿದ ವಿಷಯ ಅರಬ್ಬೀ ಭಾಷೆಯಿಂದ ಖುರಾನನ್ನು ಕನ್ನಡ ಭಾಷೆಯೊಳಗೆ ಬರೆದ ಪಂಡಿತರಿಗೆ ತಿಳಿಯದಾ!

ಕನ್ನಡ ಪ್ರಜೆಗಳು ಹಿಂದುಮತಸ್ಥರೆಂದು ತಿಳಿದು ಅವರಿಗೆ ಖುರ್‌ಆನ್ ಗ್ರಂಥವನ್ನು ಪರಿಚಯ ಮಾಡಬೇಕೆನ್ನುವ ಉದ್ದೇಶದಿಂದಲೇ ಅರಬ್ಬೀ

ಖುರ್‌ಆನ್‌ನನ್ನು ಕನ್ನಡದೊಳಗೆ ಬರೆದಿದ್ದಾರೆ. ಅಂತಿಮ ದೈವಗ್ರಂಥವನ್ನು ನಮಗೆ ಕನ್ನಡದಲ್ಲಿ ಪರಿಚಯ ಮಾಡಿರುವುದಕ್ಕೆ ಬಹಳ ಸಂತೋಷ. ನೀವು ಕನ್ನಡದಲ್ಲಿ ಬರೆಯದೇ ಹೋದರೇ ನಮಗೆ ಖುರ್‌ಆನ್‌ನಲ್ಲಿನ ಜ್ಞಾನ ತಿಳಿಯದಂತಾಗುತ್ತಿತ್ತು. ಅರಬ್ಬೀ ಭಾಷೆ ಬಂದಿರುವ ಪಂಡಿತರು ಕನ್ನಡದಲ್ಲಿ ಬರೆದು ಬಹಳ ಒಳ್ಳೆಯ ಕೆಲಸ ಮಾಡಿದರೂ, ಬರೆಯಿಸಿರುವ ಹಿರಿಯರಲ್ಲಿ ಮಾತ್ರ ಹಿಂದುಗಳು "ಖುರ್‌ಆನ್" ಓದಿ ಇಸ್ಲಾಮ್ ಮತದಕಡೆಗೆ ಬರಬೇಕೆನ್ನುವ ಉದ್ದೇಶದಿಂದಲೇ ಬರೆಯಿಸಿದ್ದಾರೆಂದು ತಿಳಿಯುತ್ತಿದೆ. ಅಂತಿಮ ದೈವಗ್ರಂಥವಾದ ಖುರ್‌ಆನ್‌ನನ್ನು ಹಿಂದೂಗಳಿಗೆ ತಿಳಿಸುವುದು ನಮಗೆ ಸಂತೋಷಕರವಾದ ಕೆಲಸವಾಗಿ ಕಾಣಿಸಿದರೂ, ಅದರಲ್ಲಿ ಬರೆಯಿಸಿದವರ ಉದ್ದೇಶ ಬೇರೆಯಾಗಿರುವಂತೆ ಅವರು ಬರೆದ ಆಯತ್ ವಿವರದಲ್ಲಿ ಅರ್ಥವಾಗುತ್ತಿದೆ. ಖುರ್‌ಆನ್ ಗ್ರಂಥದಲ್ಲಿನ ಸೂರಾಗಳು, ಅದರಲ್ಲಿ ವಾಕ್ಯಗಳಾಗಿ ಇರುವ ಆಯತ್‌ಗಳು ದೇವರು ಹೇಳಿರುವವಾಗುವುದರಿಂದ ಅವುಗಳನ್ನು ಕನ್ನಡದಲ್ಲಿ ಅನುವಾದಿಸಿದರೂ, ಆಯತ್‌ನಲ್ಲಿ ಜ್ಞಾನ ಸ್ವಲ್ಪವೂ ಕೆಡದಂತೆ ಇರುವುದು ಇದ್ದಂತೆ ಕಾಣಿಸುತ್ತಿದೆ. ಆಯುತ್‌ನ್ನು (ವಾಕ್ಯವನ್ನು) ಯಾರೂ ಬದಲಾಯಿಸಲಾರರು. ಆದರೇ ವಾಕ್ಯಕ್ಕೆ ಕೆಳಗೆ ವಿವರವನ್ನು ಬರೆದಾಗ ಆ ವಿವರ ಬರೆದ ಮನುಷ್ಯರ ಭಾವದಿಂದ ಕೂಡಿಕೊಂಡಿರುತ್ತದೆ. ಆದ್ದರಿಂದ ಅದರಲ್ಲಿನ ಬರವಣಿಗೆಯಲ್ಲಿ ಹೇಗೂ ಖುರ್‌ಆನ್ ಗ್ರಂಥ ಉಳಿದ ಗ್ರಂಥಗಳಿಗಿಂತ ದೊಡ್ಡದೆಂದು, ಮುಸ್ಲೀಮ್ ಮತವೇ ದೊಡ್ಡದೆಂದು, ಮುಸ್ಲೀಮ್‌ರ ಜೀವನ ವಿಧಾನವೇ ದೊಡ್ಡದೆನ್ನುವ ಭಾವ ಕಾಣಿಸುತ್ತಿದೆ. ದೇವರು ಹೇಳಿದ ಆಯತ್‌ಗಳಲ್ಲಿ ಅಂತಹ ಉದ್ದೇಶ ಇಲ್ಲ. ಖುರ್‌ಆನ್ ಗ್ರಂಥವನ್ನು ಸ್ವಲ್ಪ ಓದಿದಕೂಡಲೇ ಅದರ ವಾಕ್ಯಗಳಲ್ಲಿ ಮತವು ಎಂದಾಗಲೀ, ಮತಾಚಾರಗಳೆಂದಾಗಲೀ, ಇದು ಮುಸ್ಲೀಮ್‌ರದೇ ಎಂದಾಗಲೀ ಎಲ್ಲೂ ಇಲ್ಲ. ಖುರ್‌ಆನ್ ಗ್ರಂಥ ದೈವಗ್ರಂಥವಾಗಿಯೇ ಕಾಣಿಸುತ್ತದೆ. ಅದು ಸರ್ವ ಮಾನವರಿಗೂ ಕಳುಹಿಸಿದ ಜ್ಞಾನ ಸಂದೇಶವೆಂದು ಇದೆ. ದೇವರ ಜ್ಞಾನ ಒಂದು ಭಾಷೆಗಾಗಲೀ, ಒಂದು ಮತಕ್ಕಾಗಲೀ ಪರಿಮಿತವಾಗಿರುವುದಲ್ಲ. ಆದ್ದರಿಂದ ಯಾವ ಮತಸ್ಥನಾದರೂ,

ಯಾವ ಭಾಷೆಯಲ್ಲಾದರೂ ಅದನ್ನು ಓದಿಕೊಳ್ಳಬಹುದು. ಆದ್ದರಿಂದ ಖುರ್‌ಆನ್ ಗ್ರಂಥವನ್ನು ಅರಬ್ಬೀ ಭಾಷೆಯಲ್ಲಿಯೇ ಓದಬೇಕೆನ್ನುವ ಉದ್ದೇಶ ಮನುಷ್ಯರದೇ ಆಗಲೀ, ದೇವರು ಹೇಳಿರುವುದು ಅಲ್ಲ.

**ಮುಸ್ಲೀಮ್** :– ನೀವು ಮುಹಮ್ಮದ್ ಪ್ರವಕ್ತರವರನ್ನು ಕೊನೆಯ ಪ್ರವಕ್ತರೆಂದು ಒಪ್ಪಿಕೊಳ್ಳುತ್ತಿದ್ದೀರ. ಖುರ್‌ಆನ್ ಗ್ರಂಥವನ್ನು ಅಂತಿಮ ದೈವಗ್ರಂಥವೆಂದು ಸಹ ಒಪ್ಪಿಕೊಳ್ಳುತ್ತಿದ್ದೀರ. ಅಷ್ಟು ಮಾತ್ರಕ್ಕೆ ನಿಮ್ಮನ್ನು ನಾವು ಒಪ್ಪಿಕೊಳ್ಳುವುದಿಲ್ಲ. ನೀವು ಎಷ್ಟು ಮಾತನಾಡಿದರೂ ಅಲ್ಲಾಹ್ ಒಬ್ಬನೇ ದೇವರೆಂದು ಒಪ್ಪಿಕೊಳ್ಳದೇ ಕೃಷ್ಣನನ್ನು ಸಹ ದೇವರೆಂದು ಅನ್ನುತ್ತಿದ್ದೀರ. ಹಿಂದೂಗಳು ಎಷ್ಟು ಜ್ಞಾನಿಗಳೆಂದು ಹೇಳಿದರೂ ಅನ್ಯದೇವತಾರಾಧನೆಯಲ್ಲಿ ಮುಳುಗಿಹೋಗಿದ್ದಾರೆ. ಒಂದೇ ದೇವರನ್ನು ಕುರಿತು ಬೋಧಿಸಿರುವುದು, ಅನ್ಯದೇವತೆಗಳ ಆರಾಧನೆಯನ್ನು ಖಂಡಿಸುವ ಏಕೈಕ ಗ್ರಂಥ ಖುರ್‌ಆನ್ ಒಂದೇ ಇದೆ. ನೀವು ಎಷ್ಟು ಹೇಳಿದರೂ, ನಿಮ್ಮನ್ನಾಗಲೀ ನಿಮ್ಮ ಗ್ರಂಥವನ್ನಾಗಲೀ ನಾವು ಒಪ್ಪಿಕೊಳ್ಳುವುದಿಲ್ಲ.

**ನಮ್ಮವರು** :– ನೀನು ಒಪ್ಪಿಕೊಳ್ಳಬೇಕೆಂದು ನಾವು ನಿನ್ನೊಂದಿಗೆ ಮಾತನಾಡುತ್ತಿಲ್ಲ. ನಿನಗೆ ಅರ್ಥವಾಗಬೆಕೆಂದು ಹೇಳುತ್ತಿದ್ದೇವೆ. ನಾವು ಎಷ್ಟು ಹೇಳಿದರೂ ಅರ್ಥ ಮಾಡಿಕೊಳ್ಳದೇ ಹೋಗುತ್ತಿದ್ದೀಯ. ಪದೇಪದೇ ನಮ್ಮ ಗ್ರಂಥ ಖುರ್‌ಆನ್ ಎಂದೂ, ನಿಮ್ಮ ಗ್ರಂಥ ಭಗವದ್ಗೀತೆಯೆಂದೂ ಅನ್ನುತ್ತಿದ್ದೀಯ. ಎರಡು ಬೇರೆಬೇರೆ ಗ್ರಂಥಗಳೆಂದು ಹೇಳುವುದು ದೊಡ್ಡ ಅಜ್ಞಾನವಾಗುತ್ತದೆ. ಖುರ್‌ಆನ್ ಗ್ರಂಥದಲ್ಲಿ ಸೂರಾ 5, ಆಯತ್ 44,46,48,68 ಮತ್ತು ಸೂರಾ 62, ಆಯತ್ 5ರಲ್ಲಿ ಈ ವಿಧವಾಗಿ ಇದೆ.

**(5–44) "ನಾವು ತೌರಾತು ಗ್ರಂಥವನ್ನು ಅವತರಿಸುವಂತೆ ಮಾಡಿದ್ದೇವೆ. ಅದರಲ್ಲಿ ಮಾರ್ಗದರ್ಶಕತ್ವ, ಜ್ಯೋತಿ ಇವೆ. ಈ ತೌರಾತು ಗ್ರಂಥ ಆಧಾರವಾಗಿಯೇ ಮುಸ್ಲೀಮ್‌ರಾದ ಪ್ರವಕ್ತರು, ರಬ್ಬಾನೀಗಳು ಧರ್ಮವೇತ್ತರು, ಯೂದರ ಸಮಸ್ಯೆಗಳನ್ನು ಪರಿಷ್ಕರಿಸುವರು"**

**(5–46) "ಆ ಪ್ರವಕ್ತರ ನಂತರ ನಾವು ಮರ್ಯಮ್ (ಮರಿಯಮ್ಮ) ಕುಮಾರನು ಈಸಾನ್ನು (ಏಸನ್ನು) ಕಳುಹಿಸಿದ್ದೇವೆ. ಆತನು ತನಗೆ ಪೂರ್ವದಲ್ಲಿ ಕೊಟ್ಟಿರುವ ತೌರಾತು ಗ್ರಂಥವನ್ನು ಸತ್ಯವೆಂದು ಧೃಢೀಕರಿಸುವವನು. ನಾವು ಆತನಿಗೆ ಇಂಜೀಲು (ಬೈಬಿಲ್) ಗ್ರಂಥವನ್ನು ಕೊಟ್ಟಿದ್ದೇವೆ. ಅದರಲ್ಲಿ (ಬೈಬಿಲ್‌ನಲ್ಲಿ) ಮಾರ್ಗದರ್ಶಕವೂ, ಜ್ಯೋತಿ ಇವೆ. ಅದು ತನಗೆ ಮೊದಲಿರುವ ತೌರಾತು ಗ್ರಂಥವನ್ನು ಧೃಢೀಕರಿಸುವುದು. ಅಷ್ಟೇ ಅಲ್ಲದೆ ಅದು ದೈವಭೀತಿ ಇರುವವರಿಗೆ ಮಾರ್ಗದರ್ಶಿನಿಯಾಗಿ, ಹಿತ ಬೋಧಿನಿಯಾಗಿ ಇರುತ್ತಿತ್ತು."**

**(5–48) "ನಾವು ನಿನ್ನ ಕಡೆಗೆ ಈ ಗ್ರಂಥವನ್ನು (ಖುರ್‌ಆನ್‌ನನ್ನು) ಸತ್ಯ ಸಮೇತವಾಗಿ ಅವತರಿಸುವಂತೆ ಮಾಡಿದ್ದೇವೆ. ಇದು ತಮಗಿಂತ ಮೊದಲು ಬಂದಿರುವ ಗ್ರಂಥಗಳನ್ನು ಸತ್ಯವೆಂದು ಧೃಢೀಕರಿಸುತ್ತಿದೆ. ನಿನ್ನ ಹತ್ತಿರಕ್ಕೆ ಬಂದಿರುವ ಸತ್ಯವನ್ನು ಬಿಟ್ಟು ಅವರ ಮನೋವಾಂಛಗಳನ್ನು ಅನುಸರಿಸಬೇಡ"**

**(5–68) "ಓ ಗ್ರಂಥವಹುಗಳೇ! ನಿವು ತೌರಾತನ್ನೂ, ಇಂಜೀಲನ್ನೂ (ಭಗವದ್ಗೀತ, ಬೈಬಿಲ್‌ನ್ನು) ನಿಮ್ಮ ಪ್ರಭುವು ಪರವಾಗಿ ನಿಮ್ಮ ಹತ್ತಿರಕ್ಕೆ ಕಳುಹಿಸಿರುವುದನ್ನು (ಖುರ್‌ಆನ್ ಗ್ರಂಥವನ್ನು) ನಿಮ್ಮ ಜೀವನಗಳಲ್ಲಿ ನೆಲೆಗೊಳಿಸುವವರೆಗು ನೀವು ಯಾವ ಧರ್ಮದಮೇಲೂ ಇಲ್ಲದ ಹಾಗೇ"**

**(62–5) "ತೌರಾತು ಗ್ರಂಥದ ಪ್ರಕಾರ ಆಚರಿಸಬೇಕೆಂದು ಆದೇಶಿಸಿದರೂ, ಅದಕ್ಕೆ ಅನುಗುಣವಾಗಿ ಆಚರಿಸದವರು ಎಷ್ಟು ಗ್ರಂಥಗಳನ್ನು ಅನುಸರಿಸಿದರೂ, ಅಂತಹವರನ್ನು ಎಷ್ಟೋ ಗ್ರಂಥಗಳನ್ನು ಬೆನ್ನಿನ ಮೇಲೆ ಹೊರುವ ಕತ್ತೆಯಂತಹವರೆಂದು ಉಪಮಾನವಾಗಿ ಹೇಳಬಹುದು. ದೇವರ ವಾಕ್ಯಗಳನ್ನು ಧಿಕ್ಕರಿಸಿದವರ ದೃಷ್ಟಾಂತ ಬಹಳ ಕೆಟ್ಟದು. ದುರ್ಮಾರ್ಗದ ಜನರಿಗೆ ಅಲ್ಲಾ ಸನ್ಮಾರ್ಗವನ್ನು ತೋರಿಸುವುದಿಲ್ಲ"**

ಇವುಗಳಲ್ಲಿ ತೌರಾತ್ ಗ್ರಂಥದಲ್ಲಿನ ಜ್ಞಾನವೇ ಖುರ್‌ಆನ್ ಗ್ರಂಥದಲ್ಲಿ ಇದೆಯೆಂದು ಹೇಳಿದ್ದಾರೆ. ಅಷ್ಟೇ ಅಲ್ಲದೆ ಆ ವಾಕ್ಯಗಳಲ್ಲಿ ಖುರ್‌ಆನ್ ಗ್ರಂಥ

ತೌರಾತ್ ಗ್ರಂಥವನ್ನು ಧೃಢೀಕರಿಸುತ್ತಿದ್ದೇನೆಂದು ಹೇಳಿರುವಹಾಗೆ ಇದೆ. ತೌರಾತ್, ಇಂಜೀಲು ಎಂಬ ಎರಡು ಗ್ರಂಥಗಳಲ್ಲಿನ ಜ್ಞಾನವನ್ನು ಅನುಸರಿಸುತ್ತಿದ್ದೇನೆಂದು, ಅದೇ ಜ್ಞಾನವೇ ಖುರ್‌ಆನ್ ಗ್ರಂಥದಲ್ಲಿ ಸಹ ಇರುವಂತೆ ಹೇಳುವುದು ನಡೆದಿದೆ. ತೌರಾತು ಗ್ರಂಥದಲ್ಲಿನ ಜ್ಞಾನ ತಿಳಿಯದೇ ಹೋದರೇ, ಅವನು ಯಾವ ಮತ ಧರ್ಮದಲ್ಲಿಯೂ ಇಲ್ಲದಂತೇ ಎಂದು ಸಹ ಖುರಾನ್‌ನಲ್ಲಿ ಇದೆ. ಖುರ್‌ಆನ್ ಗ್ರಂಥವೇ ತೌರಾತು ಗ್ರಂಥವನ್ನು ದೊಡ್ಡದಾಗಿ ಹೇಳಿದ್ದರೇ, ನೀವು ಸ್ವಲ್ಪವೂ ಅರ್ಥ ಮಾಡಿಕೊಳ್ಳದೇ ನಿಮ್ಮ ಗ್ರಂಥಕ್ಕಿಂತ ನಮ್ಮ ಗ್ರಂಥವೇ ದೊಡ್ಡದೆನ್ನುವುದು ವಿಚಿತ್ರವಾಗಿ ಇದೆ. ಇದನ್ನೆಲ್ಲವನ್ನು ಗಮನಿಸಿದರೇ ನೀವು ಸಕ್ರಮವಾಗಿ ಮಾತನಾಡದೇ ಸಾಲು ಮುಲೆ ಇಲ್ಲದಂತೆ ಅಡ್ಡವಾಗಿ ಮಾತನಾಡುತ್ತಿದ್ದೀರೆಂದು ತಿಳಿಯುತ್ತಿದೆ. ನೀವು ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯನ್ನು ಏಕೆ ಒಪ್ಪಿಕೊಳ್ಳುತ್ತಿಲ್ಲ?

**ಮುಸ್ಲೀಮ್** :– ನೀವು ತೌರಾತ್ ಎಂದು ಹೇಳಿದ ಗ್ರಂಥವನ್ನು ಭಗವದ್ಗೀತೆ ಗ್ರಂಥವೆಂದು ಹೇಗೆ ಹೇಳುತ್ತಿದ್ದೀರ? ನಿಮ್ಮ ಇಷ್ಟ ಬಂದಹಾಗೆ ನೀವು ಹೇಳಿಕೊಂಡರೆ ಸರಿಹೋಗುತ್ತದಾ? ನಮ್ಮ ಮಾತಿಗೆ ಸಮಾಧಾನವನ್ನು ಹೇಳಿರಿ.

**ನಮ್ಮವರು :–** ಈಗ ನಾವು ನಿಮ್ಮನ್ನು ಒಂದು ಮಾತು ಕೇಳುತ್ತೇವೆ, ನೀವು ಅದಕ್ಕೆ ಸಮಾಧಾನ ಹೇಳಿ, ನಂತರ ನೀವು ಕೇಳಿದಕ್ಕೆ ನಾವು ಉತ್ತರ ಹೇಳುತ್ತೇವೆ. ತೌರಾತ್ ಗ್ರಂಥವೆಂದರೆ ಏನೋ ನಮಗೆ ತಿಳಿದಿಲ್ಲ ಎಂದು ನಾವು ಒಪ್ಪಿಕೊಳ್ಳುತ್ತೇವೆ. ಆ ಗ್ರಂಥಯಾವುದೋ ನೀವು ಹೇಳಬಲ್ಲಿರಾ? ಆ ಹೆಸರಿರುವ ಗ್ರಂಥವನ್ನು ನೀವು ನೋಡಿದ್ದೀರಾ? ತೌರಾತ್ ಗ್ರಂಥ ಯಾವ ಭಾಷೆಯಲ್ಲಿ ಬರೆಯಲಾಗಿದೆಯೋ ಹೇಳಬಲ್ಲಿರಾ? ಅದನ್ನು ರಚಿಸಿದ ರಚಯಿತ ಹೆಸರು ತಿಳಿದಿದೆಯಾ? ಅದರ ಹೆಸರನ್ನು ಕೇಳುವುದು ಹೊರತು ಅದನ್ನು ನೋಡಿದವರಿದ್ದಾರಾ? ಎಂದು ಕೇಳುತ್ತಿದ್ದೇನೆ. ಈ ಪ್ರಶ್ನೆಗಳಿಗೆ ನೀವು ಉತ್ತರ ಹೇಳಲಾರರು. ಏಕೆಂದರೇ! ತೌರಾತ್ ಗ್ರಂಥಯಾವುದೋ ಯಾರಿಗೂ ಇಲ್ಲಿಯವರೆಗು ತಿಳಿದಿಲ್ಲ. ಆ ಹೆಸರಿರುವ ಗ್ರಂಥವನ್ನು ಯಾರೂ ನೋಡಲಿಲ್ಲ.

ಅಂತಿಮ ದೈವ ಗ್ರಂಥವಾದ ಖುರ್‌ಆನ್‌ನಲ್ಲಿ ತೌರಾತ್, ಇಂಜೀಲು ಎಂದು ಎರಡು ಹೆಸರುಗಳಿರುವ ಗ್ರಂಥಗಳನ್ನು ಹೇಳಿದ್ದಾರೆ. ಅವು ಎರಡೂ ಎರಡು ಗ್ರಂಥಗಳೇ ಆದರೂ ಅವು ಅವುಗಳ ನಿಜವಾದ ಹೆಸರುಗಳು ಅಲ್ಲ. ಆ ಎರಡು ಗ್ರಂಥಗಳೊಂದರ ಬಿರುದುಗಳನ್ನು ತೌರಾತು, ಇಂಜೀಲು ಎಂದು ಹೇಳಿದ್ದಾರೆ. ಇಂಜೀಲು ಗ್ರಂಥವನ್ನು ಹೇಳಿದವನು ಈಸಾಯೆಂದು, ತೌರಾತು ಗ್ರಂಥವನ್ನು ಹೇಳಿದವನು ಮೂಸಾಯೆಂದು ಖುರ್‌ಆನ್ ಗ್ರಂಥದಲ್ಲಿ ಸೂರಾ5, ಆಯತ್ 68ರಲ್ಲಿ ಇದೆ ನೋಡಿರಿ. **(5–68) ಓ ಪ್ರವಕ್ತಾ! ಅವರಿಗೆ (ಪ್ರಜೆಗಳಿಗೆ) ಹೇಳು, ನೀವು ತೌರಾತನ್ನೂ (ಭಗವದ್ಗೀತೆಯನ್ನೂ), ಇಂಜೀಲನ್ನೂ (ಬೈಬುಲ್‌ನ್ನೂ) ನಿಮ್ಮ ಪ್ರಭು ಪರವಾಗಿ ನಿಮ್ಮ ಹತ್ತಿರಕ್ಕೆ ಬಂದಿರುವ ಅಂತಿಮ ದೈವಗ್ರಂಥ ಖುರ್‌ಆನ್‌ನನ್ನು ನಿಮ್ಮ ಜೀವನಗಳಲ್ಲಿ ನೆಲೆಗೊಳಿಸದ ವರೆಗು ನೀವು ಯಾವ ಧರ್ಮದ ಮೇಲೂ ಇಲ್ಲದಂತೇ, ನಿನ್ನ ಪ್ರಭುವು ಪರವಾಗಿ ಬಂದಿರುವ ಖುರ್‌ಆನ್‌ನನ್ನು ನೋಡಿ ಅವರಲ್ಲಿನ ಅನೇಕರಿಗೆ ಗರ್ವ, ತಿರಸ್ಕಾರ ವೈಖರಿ ಮತ್ತಷ್ಟು ಅಧಿಕವಾಗಿದೆ. ಆದರೇ ನೀನು ಈ ತಿರಸ್ಕಾರರನ್ನು ಲೆಕ್ಕ ಮಾಡಬೇಡ"**

ಸೂರಾ 6, ಆಯತ್ 91ರಲ್ಲಿ ಹೀಗೆ ಇದೆ. **(6–91) "ದೇವರು ಯಾವ ಮನುಷ್ಯನ ಮೇಲೆಯೂ ಎಂತಹ ಜ್ಞಾನವನ್ನು ಅವತರಿಸುವಂತೆ ಮಾಡಲಿಲ್ಲ ಎಂದು ಹೇಳಿದಾಗ ಈ ಅವಿಶ್ವಾಸ ಜನರು ದೇವರನ್ನು ಅರ್ಥ ಮಾಡಿಕೊಳ್ಳಬೇಕಾದ ವಿಧದಲ್ಲಿ ಅರ್ಥ ಮಾಡಿಕೊಳ್ಳಲಿಲ್ಲ. ಅವರನ್ನು ಕೇಳು, ಮೂಸಾ ತಂದಿರುವ ಆ (ತೌರಾತು) ಗ್ರಂಥವನ್ನು ಯಾರು ಅವತರಿಸುವಂತೆ ಮಾಡಿದಹಾಗೆ? ಆ ಗ್ರಂಥ ಒಂದು ಜ್ಯೋತಿ, ಮನುಷ್ಯರಿಗಾಗಿ ಮಾರ್ಗ ದರ್ಶಕತ್ವ. ನೀವು ಅದನ್ನು ಬೇರೆಬೇರೆ ಕಾಗದಗಳಾಗಿ (ಬೇರೆಬೇರೆ ಗ್ರಂಥಗಳಾಗಿ) ವಿಭಜಿಸಿ ತೋರಿಸುತ್ತಿದ್ದೀರ. ಎಷ್ಟೋ ವಿಷಯಗಳನ್ನು ಬಚ್ಚಿಡುತ್ತಿದ್ದೀರ. ನೀವಾಗಲೀ, ನಿಮ್ಮ ಹಿರಯರಿಗಾಗಲೀ ತಿಳಿಯದ ಎಷ್ಟೋ ವಿಷಯಗಳು ಇದರ ಮೂಲವಾಗಿ ನಿಮಗೆ ಕಲಿಸಲಾಗಿವೆ. ತೌರಾತನ್ನು ಅವತರಿಸುವಂತೆ ಮಾಡಿದವನು ಅಲ್ಲಾಹ್‌ಯೇ ಎಂದು ಹೇಳು, ನಂತರ ಅವರನ್ನು ಅವರ ವ್ಯರ್ಥ ವಿಷಯಗಳಲ್ಲೇ ಆಡಿಕೊಳ್ಳಲು ಬಿಡು".**

ಈ ವಾಕ್ಯಗಳನ್ನು ನೋಡಿದ ನಂತರ ತೌರಾತು ಗ್ರಂಥವನ್ನೇ ಭಗವದ್ಗೀತೆ ಗ್ರಂಥವೆಂದು, ಇಂಜೀಲು ಗ್ರಂಥವನ್ನೇ ಬೈಬಿಲ್ ಗ್ರಂಥವೆಂದು ನಾವು ಅನ್ನುತ್ತಿದ್ದೇವೆ. (5–68) ರಲ್ಲಿ ಕ್ರಮವಾಗಿ ಮೂರು ಗ್ರಂಥಗಳನ್ನು ಹೇಳುವಾಗ ತೌರಾತು ಗ್ರಂಥವನ್ನು, ಇಂಜೀಲು ಗ್ರಂಥವನ್ನು, ನಿಮ್ಮ ಪ್ರಭು ನಿಮಗೆ ಕೊಟ್ಟಿರುವ ಖುರ್ಆನ್ ಗ್ರಂಥ ಎಂದು ಮೂರು ಹೆಸರುಗಳು ಹೇಳಿದಾಗ ತೌರಾತ್ ಎಂದರೇ ಭಗವದ್ಗೀತೆಯೆಂದು, ಇಂಜೀಲು ಎಂದರೇ ಬೈಬಲ್ ಎಂದು ಸುಲಭವಾಗಿ ತಿಳಿದುಹೋಗಿದೆ. ಅಷ್ಟೇ ಅಲ್ಲದೆ ಈಸಾ ಎಂದರೇ ಏಸು ಎಂದೂ, ಮೂಸಾ ಎಂದರೇ ಕೃಷ್ಣನೆಂದು ಸಹ ಹೇಳುತ್ತಿದ್ದೇವೆ. ಇನ್ನೂ ಎಲ್ಲರಿಗೂ ತಿಳಿಯದ ರಹಸ್ಯವೇನೆಂದರೇ ಮೂಸಾ ಎಂಬ ಶಬ್ದದಿಂದಲೇ ಈಸಾ ಎಂಬ ಶಬ್ದ ಹುಟ್ಟಿದ ಹಾಗೆ, ಕೃಷ್ಣನಿಂದ ಕ್ರೀಸ್ತು ಬಂದಿದ್ದಾನೆಂದು ತಿಳಿಯುತ್ತಿದೆ. ನಾವು ಪದಗಳಿಗೆ ಅರ್ಥಗಳೊಂದಿಗೆ ಸಹ ಹೇಳಿ ತೌರಾತ್ ಎಂದರೆ ಮೂರು ರಾತ್ರಿಗಳೆಂದು ಮೂರು ರಾತ್ರಿಗಳಂತೆ ಮೂರು ಕಾಣಿಸದ ಆತ್ಮಗಳಿರುವ ಗ್ರಂಥವನ್ನು ತೌರಾತ್ ಎಂದು ಹೆಸರು ಇಡಲಾಗಿದೆಯೆಂದು ಸಹ ಹೇಳುತ್ತಿದ್ದೇವೆ. ಈ ವಿಧವಾಗಿ ನಾವು ಧೈರ್ಯವಾಗಿ ತೌರಾತು, ಇಂಜೀಲನ್ನು ಕುರಿತು ಹೇಳುತ್ತಿದ್ದೇವೆ. ತೌರಾತು, ಇಂಜೀಲು ಎನ್ನುವವು ಹೆಸರುಗಳಲ್ಲ ಆ ಗ್ರಂಥಗಳಿಗಿರುವ ಬಿರುದುಗಳು ಎಂದು ಹೇಳುತ್ತಿದ್ದೇವೆ. ಈ ವಿಷಯ ವಿವರವಾಗಿ ತಿಳಿಯಬೇಕೆಂದರೆ ಯೋಗೀಶ್ವರರವರು ಬರೆದ **“ಅಂತಿಮ ದೈವಗ್ರಂಥದಲ್ಲಿ ಜ್ಞಾನ ವಾಕ್ಯಗಳು”** ಎಂಬ ಗ್ರಂಥವನ್ನು ಜ್ಞಾನ ದೃಷ್ಟಿಯಿಂದ ನೋಡಿರಿ.

ತೌರಾತು ಗ್ರಂಥದಲ್ಲಿರುವ ಜ್ಞಾನವೇ ಇಂಜೀಲುನಲ್ಲಿಯೂ, ಖುರಾನ್ ಗ್ರಂಥದಲ್ಲಿಯೂ ಇದೆ. ಈ ವಿಷಯವನ್ನು ಖುರ್ಆನ್ ಗ್ರಂಥವೇ ಅನೇಕ ಬಾರಿ ಹೇಳಿದೆ. ಆದರೇ ಅದನ್ನು ಅರ್ಥ ಮಾಡಿಕೊಳ್ಳದ ಮುಸ್ಲೀಮ್‌ರು ಕೆಲವರು ಒಂದು ಖುರ್ಆನ್ ಗ್ರಂಥ ಮಾತ್ರವೇ ಅನ್ಯದೇವತಾರಾಧನೆ ಇಲ್ಲದ ಏಕೈಕ ಗ್ರಂಥ ಎನ್ನುತ್ತಿದ್ದಾರೆ. ಹಾಗೆ ಅಂದರೇ ಅದಕ್ಕಿಂತ ಮೊದಲು ಹೇಳಿದ ತೌರಾತು ಗ್ರಂಥದಲ್ಲಿ ಅನ್ಯದೇವತಾರಾಧನೆ ಇದೆಯೆಂದು ಹೇಳಿದಂತೆ

ಆಗುತ್ತದಲ್ಲವೆ! ಆಗ ತೌರಾತು ಗ್ರಂಥವನ್ನು ನಾನು ಧೃಢೀಕರಿಸುತ್ತಿದ್ದೇನೆಂದು ಖುರ್‌ಆನ್ ಹೇಳಿದ ಮಾತು ಅಸತ್ಯವಾಗುತ್ತದೆ. ಆಗ ಖುರ್‌ಆನ್ ಗ್ರಂಥಕ್ಕೆ ಅಸತ್ಯವನ್ನು ಅತ್ತಗಟ್ಟಿದವರಾಗುತ್ತೇವೆ. ಆದ್ದರಿಂದ **ಅನ್ಯದೇವತಾರಾಧನೆ ಇಲ್ಲದ ಏಕೈಕ ಗ್ರಂಥ ಖುರ್‌ಆನ್ ಎಂದು ಹೇಳದೇ ಅದಕ್ಕಿಂತ ಮೊದಲು ಬಂದ ತೌರಾತು, ಇಂಜೀಲು ಗ್ರಂಥಗಳು ಸಹ ಅನ್ಯದೇವತಾರಾಧನೆಯನ್ನು ಖಂಡಿಸುತ್ತಿವೆಯೆಂದು, ಅವುಗಳ ಹಾದಿಯಲ್ಲೇ ಖುರ್‌ಆನ್ ಕೂಡಾ ಅನ್ಯದೇವತಾರಾಧನೆಯನ್ನು ಖಂಡಿಸುತ್ತಿದೆಯೆಂದು ಹೇಳಬೇಕು.** ಆಗ ಖುರ್‌ಆನ್ ಗ್ರಂಥ ಧೃಢೀಕರಿಸುತ್ತಿರುವ ತೌರಾತು, ಇಂಜೀಲು ಗ್ರಂಥಗಳನ್ನು ನಾವೂ ಸಹ ಧೃಢೀಕರಿಸಿದಂತಾಗುತ್ತದೆ. ಹಾಗಲ್ಲದೆ ಖುರ್‌ಆನ್ ಒಂದೇ ಅನ್ಯದೇವತಾರಾಧನೆಯನ್ನು ಖಂಡಿಸುತ್ತಿದೆ ಎಂಬ ಮಾತು ದೇವರ ದೃಷ್ಠಿಯಲ್ಲಿ ಅಸತ್ಯವಾಗುತ್ತದೆ.

ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಅನ್ಯದೇವತಾರಾಧನೆ ಮಾಡಬಾರದೆಂದೇ ಇದೆಯಾಗಲೀ, ಅನ್ಯದೇವತಾರಾಧನೆಯನ್ನು ಪ್ರೋತ್ಸಾಹಿಸಿರುವುದು ಇಲ್ಲ. ಇನ್ನು ಕೃಷ್ಣಾಷ್ಟಮಿ ದಿನದಂದು ಬಂಗ್ಲಾದೇಶದಲ್ಲೂ, ಪಾಕಿಸ್ಥಾನ್‌ದಲ್ಲೂ, ಬೀಹಾರ್‌ದಲ್ಲೂ, ಚೆನ್ನೈದಲ್ಲೂ, ಬಾಂಬೇದಲ್ಲೂ ಉಳಿದ ಕೆಲವು ಮುಖ್ಯ ನಗರಗಳಲ್ಲಿನ ಮುಸ್ಲೀಮ್‌ರು ತಮ್ಮ ಮಕ್ಕಳಿಗೆ ಕೃಷ್ಣನ ವೇಷಧಾರಣೆ ಮಾಡಿ ಉತ್ಸವದಲ್ಲಿ ಭಾಗವಹಿಸಿದ ಫೋಟೋಗಳು ಇಂಟರ್‌ನೆಟ್‌ನಲ್ಲಿ ಲಭಿಸಿದಾಗ ಅವುಗಳನ್ನು ನಾವು ಬರೆದ "ಅಂತಿಮ ದೈವಗ್ರಂಥದಲ್ಲಿ ಜ್ಞಾನ ವಾಕ್ಯಗಳು" ಎಂಬ ಗ್ರಂಥದಲ್ಲಿ ಮುದ್ರಿಸಿ ತೋರಿಸಿದ್ದೇವೆ. ಅಲ್ಲಿ ಹಾಗೆ ತೋರಿಸುವುದರಲ್ಲಿ ನಾವು ಅನ್ಯದೇವತಾರಾಧನೆ ಮಾಡುತ್ತಿದ್ದೇವೆ. ನೀವೂ ಸಹ ಮಾಡಿ ಎಂದು ನಾವು ಹೇಳಲಿಲ್ಲ. ಕೆಲವು ಮಂದಿ ಮುಸ್ಲಿಮ್‌ರು ಸಹ "ಕೃಷ್ಣನು ಯಾರೆನ್ನುವ ವಿಷಯ ಗ್ರಹಿಸಿದ್ದಾರೆ." ಎಂದು ಮಾತ್ರವೇ ಹೇಳಿದ್ದೇವೆ. ನಾವು ನಮ್ಮ ದೃಷ್ಠಿಯಲ್ಲೇ ಅಲ್ಲದೆ ಇತರರ ದೃಷ್ಠಿಯಲ್ಲಿಯೂ ಸಹ ಜ್ಞಾನಿಗಳಾಗಿ ಇದ್ದೇವೆ. ಭಗವದ್ಗೀತೆಯಲ್ಲಾಗಲೀ, ಖುರ್‌ಆನ್ ಗ್ರಂಥದಲ್ಲಾಗಲೀ ಇಲ್ಲಿಯವರೆಗೂ ಯಾರೂ ಹೇಳದ ವಿವರವನ್ನು ಹೇಳಿದ್ದೇವೆ. ದೇವರೆಂದರೆ ಯಾರು? ದೇವತೆಗಳೆಂದರೆ ಯಾರು? ಎಂದು ತಿಳಿದು ದೇವರು ಎಂಬ ಹೆಸರು ಒಬ್ಬನಿಗೇ

ಇದೆ, ಉಳಿದ ದೇವತೆಗಳೆನ್ನುವವರೆಲ್ಲರೂ ದೆವ್ವಗಳು ಎಂದು ಹೇಳಿದ್ದೇವೆ. ಒಬ್ಬ ದೇವರನ್ನು ಹೊರತು ನಮ್ಮಿಂದ ದೆವ್ವಗಳೆನ್ನಲ್ಪಡುವ ಯಾವ ದೇವತೆಗಳನ್ನು ನಾವು ಮುಗಿಯಲಿಲ್ಲ. ನಾವು ದೇವರಿಗೆ ವಿಧೇಯನಾಗಿ ಇರುತ್ತೇವೆ, ದೇವತೆಗಳಿಗೆ ನಾವು ಯಮಧರ್ಮರಾಜನಂತೆ ಕಾಣಿಸುತ್ತಿರುತ್ತೇವೆ. ಎಷ್ಟೋ ಸಂದರ್ಭಗಳಲ್ಲಿ ದೇವತೆಗಳನ್ನು ನೀವು ತಪ್ಪು ಮಾಡುತ್ತಿದ್ದೀರೆಂದು ಹೇಳುತ್ತಿದ್ದೇವೆ. ಎಲ್ಲರನ್ನೂ ಹೆದರಿಸಿ ಪೂಜೆಗಳು ಮಾಡಿಸಿಕೊಳ್ಳುವ ದೇವತೆಗಳು ನಮ್ಮನ್ನು ನೋಡಿದರೇ ಅಷ್ಟು ದೂರ ಓಡಿಹೋಗುತ್ತಾರೆ. ಎಷ್ಟೋ ಜ್ಞಾನ ವಿಷಯಗಳನ್ನು ತಿಳಿದ ನಾವು, ದೇವರು ಮನುಷ್ಯನ ಹಾಗೆ ಬಂದು ಯಾವಾಗ ಜ್ಞಾನವನ್ನು ಹೇಳಿಹೋಗಿದ್ದಾನೋ ಕೂಡಾ ಹೇಳುತ್ತಿದ್ದೇವೆ. ತೌರಾತನ್ನು ಬೋಧಿಸಿದ ಮೂಸಾ, ಇಂಜೀಲನ್ನು ಬೋಧಿಸಿದ ಈಸಾ ಇಬ್ಬರೂ ಸಾಧಾರಣ ಮನುಷ್ಯರು ಅಲ್ಲವೆಂದು, ಅವರು ಮನುಷ್ಯ ರೂಪದಲ್ಲಿ ಬಂದಿರುವ ದೇವರ ಅವತಾರಗಳೆಂದು ಸಹ ಹೇಳಿದ್ದೇವೆ.

**ನಾವು ಹೇಳಿದ ಮಾತು ಖುರ್‌ಆನ್‌ನಲ್ಲಿನ ಸೂರಾ 6, ಆಯತ್ 91 ರಲ್ಲಿಯೂ ಸಹ ನಿಜವೆಂದು ಅಲ್ಲಾ ತಿಳಿಸಿದಹಾಗೆ ಇದೆ. ಅಲ್ಲಿ ಮೂಸಾ ತಿಳಿಸಿದ ಗ್ರಂಥವನ್ನು ಯಾರು ತಿಳಿಸಿದಹಾಗೆ ಪ್ರಶ್ನೆಹಾಕಿ ಕೇಳಿ, ನಂತರ ಆ ಗ್ರಂಥವೊಂದರ ವಿಶೇಷತೆಯನ್ನು ಕುರಿತು ಹೇಳುತ್ತಾ ಹೀಗೆ ಹೇಳಿದ್ದಾನೆ. ಆ ಗ್ರಂಥ ಒಂದು ಜ್ಯೋತಿ, ಮನುಷ್ಯರಿಗೆ ಮಾರ್ಗದರ್ಶಿ, ನಿಮಿಗಾಗಲೀ, ನಿಮ್ಮ ಹಿರಿಯರಿಗಾಗಲೀ ತಿಳಿಯದ ಎಷ್ಟೋ ವಿಷಯಗಳು ಈ ಗ್ರಂಥದಿಂದ ಹೇಳಲಾಗಿವೆ. ಎಂದು ಹೇಳಿ ಆ ವಾಕ್ಯದಲ್ಲಿ ಕೊನೆಗೆ ಆ ಗ್ರಂಥವನ್ನು ಅವತರಿಸುವಂತೆ ಮಾಡಿದವನು ಅಲ್ಲಾಹ್‌ಯೇ ಎಂದು ಹೇಳಿದ್ದಾನೆ. ಖುರ್‌ಆನ್ ಗ್ರಂಥದಲ್ಲಿ (6–91) ವಾಕ್ಯವನ್ನು ನೋಡಿದರೇ ಈ ವಿಷಯ ತಿಳಿಯುತ್ತದೆ. ಮೂಸಾ ಆಗಲೀ, ಈಸಾ ಆಗಲೀ ಇಬ್ಬರೂ ಮನುಷ್ಯರೇ. ಅವರನ್ನು ಪ್ರವಕ್ತರೆಂದು ಕರೆದಿದ್ದೇವೆ. ಅಷ್ಟೇ ಅಲ್ಲದೆ ಮೂಸಾ ತೌರಾತ್ ಗ್ರಂಥವನ್ನೂ, ಈಸಾ ಇಂಜೀಲು ಗ್ರಂಥವನ್ನು ಕೊಟ್ಟಿದ್ದಾರೆಂದು ಸಹ ಇದೇ ಖುರ್‌ಆನ್ ಗ್ರಂಥದಲ್ಲಿಯೇ ಇರುವಂತೆ ತಿಳಿದಿದೆ. ಮುಖ್ಯವಾಗಿ ಇಲ್ಲಿ**

ಗಮನಿಸಿದರೆ ಒಬ್ಬ ಮನುಷ್ಯನಾಗಿರುವ ಮೂಸಾ ತಿಳಿಸಿದ ಗ್ರಂಥವನ್ನು ಯಾರು ತಿಳಿಸಿದ ಗ್ರಂಥವೆಂದು ಪ್ರಶ್ನಿಸಿ, ಆ ಪ್ರಶ್ನೆಗೆ ಉತ್ತರವಾಗಿ ಅದನ್ನು ಅಲ್ಲಾಯೇ ತಿಳಿಸಿದ್ದಾನೆಂದು ಹೇಳಿದಹಾಗೆ ವಾಕ್ಯದಲ್ಲಿ ಇದೆ. ಆಗ ಖುರಾನ್ ಗ್ರಂಥವಿರುವ ಒಬ್ಬ ಮನುಷ್ಯನನ್ನು ಅಂದರೆ ಮೂಸಾಯನ್ನು ಏನೆಂದು ಹೇಳಿದಹಾಗೋ ನೀವೇ ಅರ್ಥ ಮಾಡಿಕೊಳ್ಳಿ. ಇದೇ ವಾಕ್ಯದಲ್ಲಿ ಆದಿಯಲ್ಲೇ ದೇವರು ಯಾವ ಮನುಷ್ಯನ ಮೇಲೆಯೂ ಎಂತಹ ಜ್ಞಾನವಿಷಯವನ್ನು ಅವತರಿಸುವಂತೆ ಮಾಡಲಿಲ್ಲ ಎಂದು ನುಡಿದಾಗ, ಅವಿಶ್ವಾಸ ಜನರು ದೇವರನ್ನು ಅರ್ಥ ಮಾಡಿಕೊಳ್ಳಬೇಕಾದ ರೀತಿಯಲ್ಲಿ ಅರ್ಥ ಮಾಡಿಕೊಂಡಿಲ್ಲ ಎಂದು ಸಹ ಹೇಳಿದ್ದಾನೆ. ಅವಿಶ್ವಾಸ ಜನರು ಅಂದರೆ ದೇವರ ಜ್ಞಾನವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದವರೆಂದು ಅರ್ಥ. ಖುರ್ಆನ್ ಗ್ರಂಥದಲ್ಲಿ ಈ ಒಂದು ಆಯತ್‌ನ್ನು ಗ್ರಹಿಸಿಕೊಳ್ಳುವುದಾದರೇ ಮೂಸಾ ಪ್ರವಕ್ತ ಯಾರೋ ತಿಳಿದುಹೋಗುತ್ತದೆ. ಮೂಸಾ ಒಬ್ಬ ಮನುಷ್ಯನೆಂದು ಎಲ್ಲರಿಗೂ ತಿಳಿದಿದೆ. ಆ ಮನುಷ್ಯ ಕೊಟ್ಟಿರುವ ಗ್ರಂಥದಲ್ಲಿ ಜ್ಯೋತಿ ಇದೆಯೆಂದು ಹೇಳಿದ (6–91) ವಾಕ್ಯದ ಕೊನೆಗೆ "ಆ ಗ್ರಂಥವನ್ನು ಕೊಟ್ಟಿರುವುದು ಯಾರೋ ತಿಳಿದಿದೆಯಾ?" ಎಂದು ಕೇಳಿ "ಅಲ್ಲಾಹ್‌ಯೇ" ಎಂದು ಉತ್ತರ ಹೇಳುವುದು ನಡೆದಿದೆ. ಇದನ್ನನುಸರಿಸಿ ಒಬ್ಬ ಮನುಷ್ಯನನ್ನು ದೇವರೆಂದು ಹೇಳಿದ ಘಟನೆ ಸಾಕ್ಷಾತ್ತು ಖುರ್ಆನ್ ಗ್ರಂಥದಲ್ಲಿ ಇದ್ದರೇ, ಅದನ್ನು ಅರ್ಥ ಮಾಡಿಕೊಳ್ಳದವನು ದೇವರ ದೃಷ್ಟಿಯಲ್ಲಿ ಜ್ಞಾನಿಯಾಗುತ್ತಾನಾ? ಅಲ್ಲೇ ಅದೇ ವಾಕ್ಯದಲ್ಲಿಯೇ ಆದಿಯಲ್ಲೇ ದೇವರು ಯಾವ ಮನುಷ್ಯನ ಮೇಲೆಯೂ ಎಂತಹ ಜ್ಞಾನವಿಷಯಗಳನ್ನು ಅವತರಿಸುವಂತೆ ಮಾಡಲಿಲ್ಲ. ದೇವರನ್ನು ಅರ್ಥ ಮಾಡಿಕೊಳ್ಳಬೇಕಾದ ರೀತಿಯಲ್ಲಿ ಅವಿಶ್ವಾಸರು ಅರ್ಥ ಮಾಡಿಕೊಂಡಿಲ್ಲವೆಂದು ಹೇಳಿ, ಕೂಡಲೇ ಮೂಸಾ ತಂದಿರುವ ಗ್ರಂಥವನ್ನು ಯಾರು ಅವತರಿಸುವಂತೆ ಮಾಡಿದಹಾಗೆ ಎಂದು ಕೇಳಿ, ಕೊನೆಗೆ ಅಲ್ಲಾಹ್‌ಯೇ ಎಂದು ಹೇಳಿದರೇ, ಮೂಸಾ ನಂತೆ ಕಾಣಿಸುವವನು ಸಾಧಾರಣ ಮನುಷ್ಯನಲ್ಲ ಎಂದು ಅರ್ಥ ಅಲ್ಲವೆ! ಕೆಲವರು ಮೂಸಾ ರೂಪದಿಂದ ಇರುವವನನ್ನು ಅರ್ಥ ಮಾಡಿಕೊಂಡಿಲ್ಲ, ಆದ್ದರಿಂದ ಅರ್ಥ ಮಾಡಿಕೊಳ್ಳಬೇಕಾದ ರೀತಿಯಲ್ಲಿ ಅವಿಶ್ವಾಸರು ಅರ್ಥ ಮಾಡಿಕೊಂಡಿಲ್ಲ ಎಂದಿದ್ದಾನೆ.

ಭೂಮಿಮೇಲೆ ಹೆಸರುಗಳು ಬದಲಾಯಿಸಲ್ಪಟ್ಟು ಹೇಳಲಾಗಿರುವವರು ಈಸಾ, ಮೂಸಾ ಎಂದು ಇಬ್ಬರು ಇದ್ದಾರೆ. ಬೈಬಲ್ ಗ್ರಂಥದಲ್ಲಿ ಏಸು ಎಂದು ಹೇಳಲಾಗಿರುವ ವ್ಯಕ್ತಿಯೇ, ಈಸಾ ಪ್ರವಕ್ತನಾಗಿ ಖುರ್‌ಆನ್‌ನಲ್ಲಿ ಹೇಳಲಾಗಿದ್ದಾರೆಂದು ತಿಳಿಯುತ್ತಿದೆ. ಈಸಾ ಇಂಜೀಲು ಗ್ರಂಥವನ್ನು ಕೊಟ್ಟಿದ್ದಾನೆಂದು ತಿಳಿದುಹೋಗಿದೆ. ಈಸಾ ಮರಿಯಮ್ಮ ಮಗನೆಂದು ಖುರ್‌ಆನ್ ಗ್ರಂಥದಲ್ಲಿ ಪ್ರಸ್ತಾವನೆ ಬಂದಾಗ ಈಸಾ ಎಂದರೆ ಏಸು ಎಂದು, ಇಂಜೀಲು ಗ್ರಂಥವೆಂದರೇ ಬೈಬಲ್ ಗ್ರಂಥವೆಂದೂ ಅರ್ಥವಾಗುತ್ತಿದೆ. ಈಸಾ, ಇಂಜೀಲು ಎರಡರ ಹೆಸರುಗಳು ಬದಲಾಯಿಸಿ ಹೇಳಲಾಗಿದ್ದರೂ, ಕೊನೆಗೆ ಈಸಾ ಎಂದರೆ ಇಂತಹ ವ್ಯಕ್ತಿ ಎಂದು, ಇಂಜೀಲು ಎಂದರೆ ಇಂತಹ ಗ್ರಂಥವೆಂದೂ ಖುರ್‌ಆನ್ ಆಧಾರದಿಂದಲೇ ತಿಳಿದುಹೋದಂತೆ, ಖುರ್‌ಆನ್‌ನಲ್ಲಿ (6–91) ನಲ್ಲಿ ಹೇಳಿದ ವಾಕ್ಯವನ್ನು ಚೆನ್ನಾಗಿ ಪರೀಕ್ಷಿಸಿ ನೋಡುವುದಾದರೇ, ಬುದ್ಧಿಯನ್ನುಪಯೋಗಿಸಿ ಅರ್ಥ ಮಾಡಿಕೊಳ್ಳುವುದಾದರೇ, ದೇವರ ಮೇಲೆ ನಿಜವಾದ ವಿಶ್ವಾಸಿಗಳಾಗಿದ್ದರೇ ಯಾರಿಗಾದರೂ ಮೂಸಾ ಎಂದರೆ ಯಾರಾಗಿರುವುದೂ, ಆತನು ತಿಳಿಸಿದ ಗ್ರಂಥ ಯಾವುದು ಎಂದು ಸುಲಭವಾಗಿ ತಿಳಿದುಹೋಗುತ್ತದೆ. ಈ ವಿಷಯವನ್ನು ಅರ್ಥ ಮಾಡಿಕೊಳ್ಳದವರಿದ್ದಾರಾದ್ದರಿಂದ, ಅದೇ ವಾಕ್ಯದಲ್ಲಿಯೇ ಅಜ್ಞಾನಿಗಳು ದೇವರನ್ನು ಅರ್ಥ ಮಾಡಿಕೊಳ್ಳಬೇಕಾದ ರೀತಿಯಲ್ಲಿ ಅರ್ಥ ಮಾಡಿಕೊಂಡಿಲ್ಲವೆಂದು ಹೇಳಿದ್ದಾನೆ.

ಅಕ್ಬರ್ ಚಕ್ರವರ್ತಿ ತನ್ನ ರಾಜ್ಯದಲ್ಲಿ ಪ್ರಜೆಗಳು ಹೇಗಿದ್ದಾರೆಂದು ತಿಳಿಯುವುದಕ್ಕೆ ಸ್ವತಹವಾಗಿ ಮಾರುವೇಷದಲ್ಲಿ ಹೊರಟುಹೋಗಿ, ಊರೂರು ತಿರುಗಿ ನೋಡಿದ್ದಾನೆ. ಹಾಗೆ ತನ್ನ ರಾಜ್ಯದಲ್ಲಿ ತಿರುಗುವಾಗ ಆತನು ಚಕ್ರವರ್ತಿಯಾಗಿ ಇದ್ದರೂ ಯಾರೂ ಗುರುತಿಸದಂತೆ ಮಾರುವೇಷದಲ್ಲಿ ಸಾಧಾರಣ ಪೌರನ ವೇಷದಲ್ಲಿ ಇದ್ದಾನೆ. ಒಂದು ಬಾರಿ ಮಾರು ವೇಷದಲ್ಲಿ ಹೊರಟು ಹೋದರೆ ಕನಿಷ್ಟ ಎರಡು ಮೂರು ತಿಂಗಳು ತನ್ನನ್ನು ಯಾರೂ ಗುರ್ತಿಸದಂತಿದ್ದು, ಎಲ್ಲರೂ ತಿನ್ನುವ ಆಹಾರವನ್ನು ತಿಂದು, ಎಲ್ಲರೂ ಕುಡಿಯುವ

ನೀರನ್ನು ಕುಡಿದು, ದಾರಿಹೋಕನಂತೆ ಛತ್ರಗಳಲ್ಲಿಯೂ, ಚೌಟ್ರಿಗಳಲ್ಲಿಯೂ ಮಲಗಿಕೊಂಡು ಅಲ್ಲಿರುವವರೊಂದಿಗೆ ಬೆರತು ಹೋಗಿ ತನ್ನ ರಾಜ್ಯದಲ್ಲಿ ಪ್ರಜೆಗಳ ಕಷ್ಟ ಸುಖಗಳನ್ನು, ನಡೆಯುತ್ತಿರುವ ವಾಸ್ತವ ಪರಿಸ್ಥಿತಿಯನ್ನು ತಿಳಿದು ಕೊಳ್ಳುತ್ತಿದ್ದನು. ಹಾಗೆ ಮಾರುವೇಷದಲ್ಲಿರುವಾಗ ಪ್ರಜೆಗಳಲ್ಲಿ ಬೆರೆತಿರುವುದರಿಂದ ಮೀರಾಬಾಯಿ ಭಜನೆ ನಂತರ ಎಲ್ಲರೂ ಮೀರಾಬಾಯಿಗೆ ಪಾದ ನಮಸ್ಕಾರವನ್ನು ಮಾಡುತ್ತಿರುವಾಗ ಚಕ್ರವರ್ತಿಯಾದ ಅಕ್ಬರ್ ಕೂಡಾ ಸಾಧಾರಣ ಮನುಷ್ಯನಂತೆ ಮೀರಾ ಪಾದಗಳಿಗೆ ನಮಸ್ಕರಿಸಿದ್ದಾನೆ. ಚಕ್ರವರ್ತಿಯಾದ ಅತನಿಗೇ ಎಲ್ಲರೂ ನಮಸ್ಕರಿಸುವ ಸ್ಥಿತಿಯಲ್ಲಿದ್ದೂ ಸಹ ಅತನೇ ಮೀರಾಗೆ ನಮಸ್ಕರಿಸುವುದರಿಂದ ಆತನನ್ನು ಅಕ್ಬರ್ ಚಕ್ರವರ್ತಿ ಎಂದು ಗುರುತು ಹಿಡಿಯುವುದಕ್ಕೆ ಅವಕಾಶವೇ ಇಲ್ಲ. ಹಾಗೇ ದೇವರು ತನ್ನ ಸೃಷ್ಠಿ ಎಲ್ಲದಕ್ಕೂ ದೊಡ್ಡದಾಗಿದ್ದು, ಸರ್ವ ಸಾಧಾರಣ ಮನುಷ್ಯನಂತೆ ಭೂಮಿ ಮೇಲೆ ಪ್ರಜೆಗಳ ಮಧ್ಯದೊಳಗೆ ಬಂದು, ಯಾರೂ ಗುರುತಿಸದಂತೆ ಮನುಷ್ಯರ ಮಧ್ಯದಲ್ಲಿದ್ದು, ಮನುಷ್ಯರು ತಿನ್ನುವ ಆಹಾರವನ್ನು ತಿಂದು, ಮನುಷ್ಯರು ಕುಡಿಯುವ ನೀರನ್ನು ಕುಡಿದು, ದುರ್ಮಾರ್ಗರ ಮಧ್ಯದಲ್ಲಿ, ಅಜ್ಞಾನಿಗಳ ಮಧ್ಯದಲ್ಲಿ ಮಲಗಿ ಎದ್ದು ಮನುಷ್ಯ ರಲ್ಲಿರುವ ಅಜ್ಞಾನವನ್ನು ತಿಳಿದು, ಯಾರಿಗೆ ಜ್ಞಾನವನ್ನು ಹೇಳಬೇಕೋ ಅವರಿಗೇ ಜ್ಞಾನವನ್ನು ಹೇಳಿದರೂ, ಅವರಿಗೂ ಸಹ ತಾನು ಯಾರಾಗಿರುವುದು ತಿಳಿಯದಂತೆ ಹೇಳಿ ಬರುವುದು ನಡೆದಿದೆ.

ಅಕ್ಬರ್ ಚಕ್ರವರ್ತಿ ಪ್ರಜೆಗಳ ಮಧ್ಯದೊಳಗೆ ಬಂದು ಹೋದ ನಂತರ ಆತನು ಮೀರಾಗೆ ಕೊಟ್ಟಿರುವ ವಜ್ರಗಳ ಹಾರವನ್ನನುಸರಿಸಿ ಕೆಲವರು ಅಕ್ಬರ್ ಚಕ್ರವರ್ತಿ ಬಂದು ಹೋಗಿದ್ದಾನೆಂದು ಗ್ರಹಿಸಿದ್ದಾರೆ. ಆದರೇ ಆ ಮಾತನ್ನು ಕೆಲವರು ಖಂಡಿಸಿದ್ದಾರೆ. ಅಕ್ಬರ್ ಚಕ್ರವರ್ತಿ ಇಲ್ಲಿಗೇಕೆ ಬರುತ್ತಾನೆ? ಆತನಿಗೆ ಯಾವ ಸಮಾಚಾರ ಬೇಕಾದರೂ ಅದನ್ನು ತಿಳಿಸುವ ಗೂಢಚಾರಿಗಳು ಎಷ್ಟೋ ಇರುವಾಗ, ಆತನು ಬರಬೇಕಾದ ಅಗತ್ಯವಿಲ್ಲ ಎಂದು ಕೆಲವರು ವಾದಿಸಿದ್ದಾರೆ. ಈದಿನ ಅದೇ ರೀತಿ ದೇವರು ಮನುಷ್ಯನ ಹಾಗೆ ಏಕೆ ಹುಟ್ಟುತ್ತಾನೆ? ಆತನು ಹುಟ್ಟಬೇಕಾದ ಅಗತ್ಯವಿಲ್ಲ. ಆತನು ಅಂದುಕೊಂಡರೇ ಏನಾದರೂ

ನಡೆದುಹೋಗುತ್ತದೆ. ಹಾಗಿರುವಾಗ ಆತನು (ದೇವರು) ಭೂಮಿ ಮೇಲೆ ಹುಟ್ಟುವನು ಎನ್ನುವುದು ಅಸತ್ಯ ಎನ್ನುತ್ತಿದ್ದಾರೆ. ಅಕ್ಬರ್ ಚಕ್ರವರ್ತಿ ಮಾರು ವೇಷದಲ್ಲಿ ಬರುವುದಿಲ್ಲ ಎನ್ನುವವರಿದ್ದರೂ, ಆತನು ಪ್ರಜೆಗಳ ಮಧ್ಯದೊಳಗೆ ಬಂದು ವಜ್ರಗಳ ಹಾರ ಕೊಟ್ಟುಹೋದಂತೆ, ದೇವರು ಮನುಷ್ಯನಾಗಿ ಬರುವುದಿಲ್ಲ ಎನ್ನುವವರಿದ್ದರೂ, ಆತನು ಮನುಷ್ಯನ ಹಾಗೆ ಮಾರು ವೇಷದಲ್ಲಿ ಬಂದು ಜ್ಞಾನ ಬೋಧನೆಯನ್ನು ಕೊಟ್ಟು ಹೋಗಿದ್ದಾನೆ. ಎಷ್ಟೋ ಬೆಳೆಯುಳ್ಳ ದೈವ ಗ್ರಂಥಗಳನ್ನು ಕೊಟ್ಟು ಹೋಗಿದ್ದಾನೆ. ವಜ್ರಗಳ ಹಾರವನ್ನನುಸರಿಸಿ ಅಕ್ಬರ್ ಬಂದಿದ್ದಾನೆನ್ನುವವರಿದ್ದರೂ, ಆ ಮಾತನ್ನು ನಂಬದವರು ಬಹಳಮಂದಿ ಇದ್ದಾರೆ. ಹಾಗೇ ದೇವರು ಹೇಳಿದ ದೈವಗ್ರಂಥಗಳೊಳಗಿನ ಜ್ಞಾನವನ್ನನುಸರಿಸಿ ದೇವರು ಬಂದಿದ್ದಾನೆಂದು ನಮ್ಮಂತಹವರು ಹೇಳುತ್ತಿದ್ದರೂ, ಆ ಮಾತನ್ನು ನಂಬದವರು ಸಹ ಬಹಳಮಂದಿ ಇದ್ದಾರೆ. ಆದ್ದರಿಂದ ವಿಶ್ವಾಸಿಗಳು ಬೇರೆ, ಅವಿಶ್ವಾಸಿಗಳು ಬೇರೆಯೆಂದು ದೇವರು ಹೇಳುತ್ತಾ, ದೇವರನ್ನು ಅವಿಶ್ವಾಸಿಗರು ಅರ್ಥ ಮಾಡಿಕೊಳ್ಳಲಾರರೆಂದು ಹೇಳಿದ್ದಾನೆ.

ದೇವರು ಯಾವ ಮನುಷ್ಯನ ಮೇಲೆಯೂ ತನ್ನ ಜ್ಞಾನವನ್ನು ಅವತರಿಸುವಂತೆ ಮಾಡದಿರುವಾಗ, ಮನುಷ್ಯನಾಗಿ ಬಂದು ಹೇಳಿದವನು ದೇವರೇ ಎಂದು, ಆತನು ಮನುಷ್ಯನಲ್ಲವೆಂದು ಗುರುತಿಸಬಹುದು. ಆದರೇ ಕೆಲವರು ಭೂಮಿ ಮೇಲೆ “ನಾನು ಹಿಡಿದುಕೊಂಡಿರುವ ಮೊಲಕ್ಕೆ ಮೂರೇ ಕಾಲು” ಎಂದು ವಾದಿಸುತ್ತಾ, ನನಗೆ ತಿಳಿದಮಟ್ಟಿಗೆ ದೇವರು ಹುಟ್ಟುವುದಿಲ್ಲ ಎನ್ನುತ್ತಿದ್ದಾರೆ. ಅವನು ಹಿಡಿದುಕೊಂಡಿರುವ ಮೊಲಕ್ಕೆ ಮೂರೇ ಕಾಲು ಇರಬಹುದು. ಆತನಿಗೆ ಮೂರು ಕಾಲಿರುವ ಕುಂಟ ಮೊಲ ಸಿಕ್ಕಿರಬಹುದು. ಆತನಿಗೆ ಸಿಕ್ಕಿರುವಮೊಲಕ್ಕೆ ಮೂರು ಕಾಲಿದ್ದಷ್ಟು ಮಾತ್ರಕ್ಕೆ, ಭೂಮಿ ಮೇಲೆ ಇರುವ ಮೊಲಗಳಿಗೆಲ್ಲಾ ಮೂರೇ ಕಾಲಿರುತ್ತವೆಂದುಕೊಳ್ಳುವುದು ತಪ್ಪಾಗುತ್ತದಲ್ಲವೆ! ಹಾಗೇ ತನಗೆ ತಿಳಿದ ಜ್ಞಾನದ ಪ್ರಕಾರ ದೇವರು ಮನುಷ್ಯನಾಗಿ ಹುಟ್ಟುವುದಿಲ್ಲ ಎನ್ನುವುದಕ್ಕೆ ಆತನಿಗೆ ತಿಳಿದ ಜ್ಞಾನದಲ್ಲಿ ಹಾಗೇ ಇರಬಹುದು. ಆತನಿಗೆ ತಿಳಿದ ಜ್ಞಾನ ಸರಿಯಾಗಿ ಅರ್ಥವಾಗದೇ ಇರಬಹುದು. ಅಷ್ಟು ಮಾತ್ರಕ್ಕೆ

ದೇವರು ಮನುಷ್ಯನಾಗಿ ಬರುವುದಿಲ್ಲ ಎನ್ನುವುದು ತಪ್ಪಾಗುತ್ತದಲ್ಲವೆ! ಆತನಿಗೆ ತಿಳಿದ ಜ್ಞಾನದಲ್ಲಿ ಏನಾದರೂ ಲೋಪವಿದೆಯೇನೋ ಎಂದು ಏಕೆ ಆಲೋಚಿಸ ಬಾರದು. "ದೇವರೇ ಸ್ವತಃವಾಗಿ ನಾನು ಮನುಷ್ಯನ ಮೇಲೆ ನನ್ನ ಜ್ಞಾನವನ್ನು ಪ್ರಸರಿಸಲಿಲ್ಲ ಎಂದು ಒಂದು ಕಡೆ, ದೇವರ ಜ್ಞಾನ ದೇವರಿಗೆ ಹೊರತು ಯಾವ ಮನುಷ್ಯನಿಗೂ ತಿಳಿಯದೆಂದು ಮತ್ತೊಂದು ಕಡೆ ಹೇಳಿದ್ದರೂ", **ಮೂಸಾ ತಂದಿರುವ ಗ್ರಂಥವನ್ನು ಯಾರು ಅವತರಿಸುವಂತೆ ಮಾಡಿದಂತೆ ಎಂದು ಪ್ರಶ್ನಿಸಿ ಅದನ್ನು ಅಲ್ಲಾಹ್ ಅವತರಿಸುವಂತೆ ಮಾಡಿದ್ದಾನೆಂದು ಹೇಳಿದರೂ** ದೈವ ಗ್ರಂಥವನ್ನು ಯಾವ ಮನುಷ್ಯ ಕೊಟ್ಟಿದ್ದಾನೋ, ಆ ಮನುಷ್ಯನಾಗಿ ದೇವರು ಬಂದಿದ್ದಾನೆಂದು ಏಕೆ ಅಂದುಕೊಳ್ಳಬಾರದು? ದೇವರು ಮನುಷ್ಯನಾಗಿ ಬಂದಹಾಗೆ ಸಾಕ್ಷಿ ಆಧಾರಗಳು ದೈವಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿದ್ದರೂ ಮುಸ್ಲೀಮ್‌ರು ದೇವರು ಮನುಷ್ಯನಾಗಿ ಹುಟ್ಟುವುದಿಲ್ಲ ಎಂದು ವಾದಿಸುತ್ತಿದ್ದಾರೆ. ಎಷ್ಟೋ ಆಧಾರಗಳಿದ್ದರೂ ಏಕೆ ನೀವು ಹಾಗೆ ವಾದಿಸುತ್ತಿದ್ದೀರೆಂದು ಕೇಳಿದರೆ, ಅವರಲ್ಲಿ ಕೆಲವರು ನಮ್ಮ ಮತದಲ್ಲಿನ ನಿಯಮಗಳ ಪ್ರಕಾರ ನಾವು ಮಾತನಾಡುತ್ತಿದ್ದೇವೆ. ನಮ್ಮ ಮತವೊಂದರ ಷರಿಯತ್ ಪ್ರಕಾರ ದೇವರು ಮನುಷ್ಯನಾಗಿ ಅವತರಿಸಿದ್ದಾನೆಂದರೆ ಒಪ್ಪಿಕೊಳ್ಳುವುದಿಲ್ಲ ಎಂದು ಹೇಳಿದ್ದಾನೆ. ಅದಕ್ಕೆ ದೇವರು ಹೇಳಿದ ಜ್ಞಾನ ಮುಖ್ಯವಾ? ಮತ ಹೇಳಿದ ಅಜ್ಞಾನ ಮುಖ್ಯವಾ? ಎಂದು ಕೇಳಿದರೇ ನಮ್ಮ ಮತ ಯಾವುದು ಹೇಳಿದರೇ ಅದೇ ಜ್ಞಾನ ಎಂದು ಹೇಳುವುದು ನಡೆದಿದೆ. ಭೂಮಿ ಮೇಲೆ ಮತ ಎನ್ನುವುದು ಪ್ರತಿ ಮನುಷ್ಯನಿಗೂ ಇದೆ. ಮೂರು ಮತಗಳು ಭೂಮಿ ಮೇಲೆ ಇದ್ದರೆ ಹಿಂದೂ ಮತದವರು ದೇವರು ಮನುಷ್ಯನಾಗಿ ಬರುತ್ತಾನೆ ಎಂದು ಪೂರ್ತಿ ನಂಬುತ್ತಿದ್ದಾರೆ. ಕ್ರೈಸ್ತವ ಮತದವರು ಒಂದು ಕಡೆ ಏಸನ್ನು ದೇವರೆಂದು ಅನ್ನುತ್ತಾರೆ, ಮತ್ತೊಂದು ಕಡೆ ದೇವರಲ್ಲ ದೇವರ ಕುಮಾರನು ಎನ್ನುತ್ತಾರೆ. ಮುಸ್ಲೀಮ್ ಮತದವರು ದೇವರು ಮನುಷ್ಯನಾಗಿ ಹುಟ್ಟುವನು ಎಂಬ ಮಾತನ್ನು ಒಪ್ಪಿಕೊಳ್ಳುವುದಿಲ್ಲ. ಇದನ್ನನುಸರಿಸಿ ಮೂರು

ಮತಗಳಲ್ಲಿ ದೇವರು ಮನುಷ್ಯ ಎನ್ನುವುದನ್ನು ಒಂದು ಮತ ಹೌದೆಂದೂ, ಇನ್ನೊಂದು ಮತ ಅಲ್ಲ ಎಂದು ಹೇಳುವಾಗ, ಮತ್ತೊಂದು ಮತ ಹೌದೆಂದು ಒಂದು ಕಡೆ, ಅಲ್ಲ ಎಂದು ಮತ್ತೊಂದು ಕಡೆ ಹೇಳುವುದು ನಡೆಯುತ್ತಿದೆ.

**ಮುಸ್ಲೀಮ್ :–** ನೀವು ನಮ್ಮ ಗ್ರಂಥದಲ್ಲಿನ ಮಾತನ್ನು ನಮಗೇ ಹೇಳಿ ಒಪ್ಪಿಸಬೇಕೆಂದುಕೊಳ್ಳುತ್ತಿದ್ದೀರ. ಮನುಷ್ಯ ಸತ್ತುಹೋಗಿ ಪುನಃ ಹುಟ್ಟುತ್ತಾನೆಂದು ಹೇಳಿದರೂ ನಾವು ಒಪ್ಪಿಕೊಳ್ಳುವುದಿಲ್ಲ, ಹಾಗಿರುವಾಗ ಏಕವಾಗಿ ದೇವರು ಬಂದು ಹುಟ್ಟುತ್ತಾನೆಂದರೆ ಹೇಗೆ ಒಪ್ಪಿಕೊಳ್ಳುತ್ತೇವೆ.

**ನಮ್ಮವರು :–** ಖುರ್‌ಆನ್‌ನನ್ನು ನಮ್ಮ ಗ್ರಂಥವೆಂದು ಹೇಳಬೇಡಿ. ಖುರ್‌ಆನ್ ನೊಂದಿಗೆ ನಿಮಗೆ ಎಷ್ಟು ಸಂಬಂಧವಿದೆಯೋ ನಮಗೂ ಕೂಡಾ ಅಷ್ಟೇ ಸಂಬಂಧವಿದೆ. ಪ್ರತ್ಯೇಕಿಸಿ ನಿಮ್ಮ ಹೆಸರು ಹೇಳಿ, ನಿಮಗೆ ದೇವರು ಕೊಟ್ಟಿಲ್ಲ. ದೇವರು ಮನುಷ್ಯರೆಲ್ಲರಿಗೂ ಕೊಟ್ಟಿರುವುದೆಂದು, ಅದು ಎಲ್ಲರ ಗ್ರಂಥವೆಂದು ನಾವು ಬಹಳ ಬಾರಿ ಹೇಳಿದ್ದೇವೆ. ಖುರ್‌ಆನ್ ಗ್ರಂಥವನ್ನು ಅಗೌರವಪಡಿಸಿದರೂ, ಅಸತ್ಯಗಳನ್ನು ಅತ್ತಗಟ್ಟಿ ಮಾತನಾಡಿದರೂ ನಮಗೆ ಸರಿಹೋಗುವುದಿಲ್ಲ. ಹಾಗೆ ಮಾತನಾಡಿದವರು ಯಾವ ಮತದಲ್ಲಿದ್ದರೂ, ಎಂತಹ ಜ್ಞಾನಿಗಳಾದರೂ ಅವರದು ತಪ್ಪೆಂದು ನಾವು ಹೇಳದೆ ತಪ್ಪುವುದಿಲ್ಲ. ನೀವು ಒಂದು ಮತವನ್ನು ಅಡ್ಡ ಇಟ್ಟುಕೊಂಡು ದೇವರ ಜ್ಞಾನವನ್ನು ಅಜ್ಞಾನವಾಗಿ ಹೇಳುತ್ತಿದ್ದೀರ. ದೇವರು ತನ್ನ ಗ್ರಂಥದಲ್ಲಿ ಎಲ್ಲೂ ಹೇಳದ ವಿಷಯವನ್ನು ನೀವು ನಮ್ಮ ಮತದಲ್ಲಿ ಹೀಗೇ ಹೇಳಬೇಕೆಂದು ಇದೆ ಎನ್ನುತ್ತೀರ. ದೇವರ ಜ್ಞಾನ ಮತದಲ್ಲಿ ಹುಟ್ಟಿದೆಯಾ? ಅಥವಾ ದೇವರ ಗ್ರಂಥದಲ್ಲಿ ಹುಟ್ಟಿದೆಯಾ? ಎಂದು ಕೇಳುತ್ತಿದ್ದೇವೆ. ಮತ ಮಧ್ಯದಲ್ಲಿ ಬಂದಿದೆ. ದೇವರ ಜ್ಞಾನ ಸೃಷ್ಠಿ ಆದಿಯಲ್ಲೇ ಬಂದಿದೆ. ಮನುಷ್ಯ, ದೇವರು ಹೇಳಿದಹಾಗೆ ನಡೆಯಬೇಕೇ ಹೊರತು, ಮತ ಹೇಳಿದ ಹಾಗೆ ನಡೆಯಬಾರದು. ದೇವರ ಜ್ಞಾನದ ಪ್ರಕಾರ ಅಲ್ಲದೆ ಮತ ಸಂಪ್ರದಾಯದ ಪ್ರಕಾರ ಹೋಗುವುದು ಯಾವ ಮತದವರಿಗೂ ತಕ್ಕ ಕೆಲಸವಲ್ಲವೆಂದು ಹೇಳುತ್ತಿದ್ದೇವೆ.

**ಮುಸ್ಲೀಮ್ :–** ಉಳಿದ ಮತದವರು ಹೇಗಿದ್ದರೂ ನಮ್ಮ ಮತವಾಗಲೀ, ನಮ್ಮ ಮತದಲ್ಲಿನವರಾಗಲೀ ಪೂರ್ತಿ ಕ್ರಮಶಿಕ್ಷಣ ಹೊಂದಿರುತ್ತಾರೆ. ನಮ್ಮ ಹಿರಿಯರು ಎಲ್ಲಾ ತಿಳಿದೇ ಹೇಳುವರು. ಆದ್ದರಿಂದ ನಮ್ಮ ಹಿರಿಯರು ಹೇಳಿದಂತೇ ನಡೆದುಕೊಳ್ಳುತ್ತೇವೆ. ಕ್ರಮಶಿಕ್ಷನದಲ್ಲಿ ಮೊದಲ ಮೆಟ್ಟಿಲುನಲ್ಲಿ ಇರುವುದು ಮುಸ್ಲೀಮ್ ಮತವೇ ಎಂದು ಎಲ್ಲರಿಗೂ ತಿಳಿದಿದೆ. ನಮ್ಮ ಕ್ರಮ ಶಿಕ್ಷಣ ಪ್ರಕಾರ, ನಮಗೆ ನಮ್ಮ ಹಿರಿಯರು ಹೇಳಿರುವುದನ್ನನುಸರಿಸಿ ಮನುಷ್ಯನೇ ಪುನಃ ಹುಟ್ಟುವುದಿಲ್ಲ. ಮನುಷ್ಯನೇ ಪುನಃ ಹುಟ್ಟದಿರುವಾಗ ದೇವರು ಬಂದು ಆಗಾಗ ಹುಟ್ಟುತ್ತಾನೆಂದು ನೀವು ಹೇಳಿದರೇ ನಾವು ಹೇಗೆ ನಂಬಬೇಕು?

**ನಮ್ಮವರು :–** ನಾವು ಇದಕ್ಕೂ ಮೊದಲು ಮತವನ್ನು ಕುರಿತೇ ಹೇಳಿದ್ದೇವೆ. ಅದು ಕೇಳಿದ ನಂತರ ಸಹ ಪುನಃ ಮತ ಹೇಳಿದಂತೆ, ನಮ್ಮ ಹಿರಿಯರು ಹೇಳಿದಂತೆ ಅಂದರೇ ನಾವು ಹೇಳಿರುವುದೆಲ್ಲಾ ಕಿವುಡನ ಮುಂದೆ ಶಂಖು ಊದಿದಂತಿರುತ್ತದೆ. ಸತ್ತು ಹೋದ ಮನುಷ್ಯ ಪುನಃ ಹುಟ್ಟುವುದಿಲ್ಲವೆಂದು ಹೇಗೆ ಹೇಳುತ್ತಿದ್ದೀರ? ನೀವು ಹೇಳುವುದಕ್ಕೆ ಯಾವುದಾದರೂ ಆಧಾರವಿದೆಯಾ?

**ಮುಸ್ಲೀಮ್ :–** ಸತ್ತುಹೋದವರನ್ನು ಭೂಸಮಾಧಿಯೊಳಗೆ ಕಳುಹಿಸುತ್ತಿದ್ದೇವೆ. ಮನುಷ್ಯ ಸತ್ತುಹೋದಾಗ ಆತನನ್ನು ಭೂಮಿಯಲ್ಲಿ ಊತಿಡುತ್ತಿದ್ದೇವೆ. ಹಾಗೆ ಊತಿಟ್ಟಲಾಗಿರುವವನು ಪ್ರಳಯ ಬರುವವರೆಗು ಭೂಸಮಾಧಿಯಲ್ಲಿ ಹಾಗೇ ಇರುತ್ತಾನೆ. ಪ್ರಳಯಕಾಲದಲ್ಲಿ ದೇವರು ಬಂದು ಸಮಾಧಿಗಳಲ್ಲಿ ಇರುವವರೆಲ್ಲರನ್ನೂ ಎಬ್ಬಿಸಿ, ಅವರು ಮಾಡಿಕೊಂಡ ಪಾಪಪುಣ್ಯಗಳನ್ನು ಲೆಕ್ಕಿಸಿ ಯಾರಿಗೆ ಹಾಕಬೇಕಾದ ಶಿಕ್ಷೆಯನ್ನು ಅವರಿಗೆ ಹಾಕುವನು. ಅಲ್ಲಿಯವರೆಗು ಸತ್ತುಹೋದವರು ಎಲ್ಲಿ ಊತಿಟ್ಟಿರುವವರು ಅಲ್ಲೇ ಇರುತ್ತಾರೆ.

**ನಮ್ಮವರು :–** ಸತ್ತುಹೋದ ಮನುಷ್ಯರು ಭೂಸಮಾಧಿಯಲ್ಲಿ ಎಷ್ಟು ಕಾಲವಿರುತ್ತಾರೆ?

**ಮುಸ್ಲೀಮ್ :–** ಪ್ರಳಯ ಕಾಲ ಬರುವವರೆಗು.

**ನಮ್ಮವರು :–** ಸತ್ತುಹೋಗಿರುವುದು ಮನುಷ್ಯನೇ ಅಲ್ಲವೆ! ಆತನು ಪ್ರಳಯ ಬರುವವರೆಗು ಭೂಸಮಾಧಿಯಲ್ಲಿ ಏನು ಮಾಡುತ್ತಿರುತ್ತಾನೆ?

**ಮುಸ್ಲೀಮ್ :–** ಸುಮ್ಮನೇ ಮಲಗಿಕೊಂಡು ಇರುತ್ತಾನೆ.

**ನಮ್ಮವರು :–** ದೇವರು ಹಾಗೆ ಎಲ್ಲಾದರೂ ಹೇಳಿದ್ದಾನಾ? ಖುರ್‌ಆನ್ ಗ್ರಂಥದಲ್ಲಿಯೂ ಸಹ ಎಲ್ಲೂ ಹೇಳಲಿಲ್ಲವೇ! ಪ್ರಳಯವೆಂದರೆ ನೀವು ಏನೆಂದುಕೊಂಡಿದ್ದೀರ?

**ಮುಸ್ಲೀಮ್ :–** ಪ್ರಳಯ ಎಂದರೇ ಭೂಮಿ ಮೊದಲಗೊಂಡು, ಆಕಾಶದವರೆಗು ನಾಶವಾಗಿ ಹೋಗುವುದು. ಪ್ರಳಯದಲ್ಲಿ ದೇವರು ಬಂದು ಮನುಷ್ಯರನ್ನು ಭೂಸಮಾಧಿಗಳಿಂದ ಎಬ್ಬಿಸುವನು.

**ನಮ್ಮವರು :–** ಪ್ರಳಯ ಬಂದಾಗ ಭೂಮಿಯೇ ಇಲ್ಲದಂತೆ ಹೋಗಿರುವಾಗ, ಆ ಸಮಯದಲ್ಲಿ ದೇವರು ಬಂದು ಸತ್ತುಹೋದ ಮನುಷ್ಯರನ್ನು ಎಲ್ಲಿಂದ ಎಬ್ಬಿಸುವನು. ಪ್ರಳಯದಲ್ಲಿ ಭೂಮಿ ಆಕಾಶ ಎಲ್ಲಾ ಹೋಗಿರುವಾಗ, ಸತ್ತುಹೋದವರ ಸಮಾಧಿಗಲು ಎಲ್ಲಿರುತ್ತವೋ ಹೇಳಬಲ್ಲಿರಾ?

**ಮುಸ್ಲೀಮ್ :–** ನಮ್ಮ ಹಿರಿಯರನ್ನು ಕೇಳಿ ವಿವರವಾಗಿ ಹೇಳುತ್ತೇವೆ.

**ನಮ್ಮವರು :–** ಸರಿ ದೇವರು ನೀವು ಹೇಳಿದಂತೇ ಪ್ರಳಯದಲ್ಲಿ ಎಲ್ಲರನ್ನೂ ಎಬ್ಬಿಸಿದ್ದಾನೆಂದುಕೊಳ್ಳೋಣ. ಈಗಿರುವ ಜನಸಂಖ್ಯೆಗೇ ಭೂಭಾಗ ಕಡಿಮೆ ಬರುತ್ತಿದೆ. ಸೃಷ್ಟಿ ಆದಿಯಿಂದ ಮರಣಿಸಿದವರೆಲ್ಲರೂ ಒಂದು ಬಾರಿ ಎದ್ದರೆ ಕನಿಷ್ಟ ನಿಲ್ಲುವುದಕ್ಕೂ ಕೂಡಾ ಭೂಮಿಮೇಲೆ ಜಾಗ ಇರುವುದಿಲ್ಲವಲ್ಲಾ. ಅಷ್ಟಕ್ಕೂ ಅದು ಸಾಧ್ಯವಾಗುವ ಕೆಲಸವೇನಾ? ಇದು ಶಾಸ್ತ್ರಬದ್ಧವಾದ ಮಾತೇನಾ?

**ಮುಸ್ಲೀಮ್ :–** ದೇವರು ಪ್ರಳಯದಲ್ಲಿ ಬರುತ್ತಾನೆ ಎಂದು ಖುರ್‌ಆನ್ ಗ್ರಂಥದಲ್ಲಿಯೇ ಇದೆ ಅಲ್ಲವೆ! ಪ್ರಳಯದಲ್ಲಿ ಪ್ರತಿ ಒಬ್ಬರ ಪಾಪಪುಣ್ಯಗಳನ್ನು ದೇವರು ಲೆಕ್ಕಿಸಿ ಪುಣ್ಯ ಮಾಡಿದವರನ್ನು ಸ್ವರ್ಗಕ್ಕೆ, ಪಾಪ ಮಾಡಿದವರನ್ನು ನರಕಕ್ಕೆ ಕಳುಹಿಸುವನೆಂದು ಗ್ರಂಥದಲ್ಲಿ ಹೇಳಿದ್ದಾರಲ್ಲವೆ!

**ನಮ್ಮವರು :–** ಹೌದು ಗ್ರಂಥದಲ್ಲಿ ಪ್ರಳಯದಲ್ಲಿ ಮನುಷ್ಯರ ಪಾಪ ಪುಣ್ಯಗಳನ್ನು ಲೆಕ್ಕಿಸಿ ಸ್ವರ್ಗನರಕಕ್ಕೆ ಕಳುಹಿಸುವೆನೆಂದು ಹೇಳಿದ ಮಾತನ್ನು ನಾವೂ ನೋಡಿದ್ದೇವೆ. ಗ್ರಂಥದಲ್ಲಿ ಹೇಳಿರುವುದು ಮಹಾಜ್ಞಾನಿ ಆದ ಜಿಬ್ರಯೇಲ್. ಜಿಬ್ರಯೇಲ್ ದೇವರ ಮಾತನ್ನೇ ಹೇಳಿದ್ದಾನೆ. ಅದರಲ್ಲಿ ತಪ್ಪಿಲ್ಲ. ಆದರೇ ನೀವು ಅರ್ಥ ಮಾಡಿಕೊಂಡಿರುವುದೇ ತಪ್ಪು ಎನ್ನುತ್ತಿದ್ದೇವೆ. ಪ್ರಳಯ ನೀವು ಅಂದುಕೊಂಡಂತೆ ಇಲ್ಲ. ಹಾಗೆಯೇ ಸ್ವರ್ಗನರಕಗಳು ನೀವು ಅಂದುಕೊಂಡಂತೆ ಎಲ್ಲೂ ಇಲ್ಲ. ಗ್ರಂಥದಲ್ಲಿ ಹೇಳಿದ ಜ್ಞಾನ ಸಕ್ರಮವಾದದ್ದೇ, ಆದರೇ ಅದು ಅರ್ಥ ಮಾಡಿಕೊಳ್ಳುವುದರಲ್ಲಿ ನಮ್ಮಲ್ಲಿ ಕಾಲುಷ್ಯ ಏರ್ಪಟ್ಟು ಸ್ವಲ್ಪ, ಗ್ರಂಥವಾಗಿ ಬರೆದಾಗಲೇ ಬರೆದವರು ಸೇರಿಸಿದ ಕಾಲುಷ್ಯ ಸ್ವಲ್ಪ ಇರುವುದರಿಂದ, ಖುರ್‌ಆನ್ ಗ್ರಂಥ ಪೂರ್ತಿ ಅರ್ಥವಾಗಲಿಲ್ಲವೆಂದು ಹೇಳುತ್ತಿದ್ದೇವೆ. ಒಂದು ಮುಸ್ಲೀಮ್ ಮತವನ್ನೇ ನಾವು ಬೆರಳಿಟ್ಟು ತೋರಿಸಲಿಲ್ಲ. ಎಲ್ಲ ಮತಗಳಲ್ಲಿಯೂ ಇದೇ ಪರಿಸ್ಥಿತಿ ಇದೆ. ಆದ್ದರಿಂದ ದೇವರ ಜ್ಞಾನ ಮನುಷ್ಯರಲ್ಲಿ ಪೂರ್ತಿಯಾಗಿ ತಿಳಿಯದಂತೆ ಹೋಗಿದೆ. ದೇವರು ತನ್ನ ಜ್ಞಾನವನ್ನು ಮೂರು ಗ್ರಂಥಗಳಾಗಿ ಕೊಟ್ಟಿದ್ದಾನೆ. ದೇವರು ಕೊಟ್ಟಿರುವ ಜ್ಞಾನದಲ್ಲಿ ಮೇಲ್ನೋಟಕ್ಕೆ ಅರ್ಥ ಕಾಣಿಸುವವು ನೂರಕ್ಕೆ ಇಪ್ಪತ್ತು ವಾಕ್ಯಗಳಿರುವಾಗ, ಮೇಲ್ನೋಟಕ್ಕೆ ಅರ್ಥ ಕಾಣಿಸದೆ ನಿಗೂಢಾರ್ಥದಿಂದಿರುವ ಸೂಕ್ಷ್ಮ ವಾಕ್ಯಗಳು ಸುಮಾರು ಶೇ. ಎಂಬತ್ತರಷ್ಟು ಇವೆ. ಮೇಲ್ನೋಟಕ್ಕೆ ಅರ್ಥ ಕಾಣಿಸುವ ವಾಕ್ಯಗಳನ್ನು ಸ್ಥೂಲವಾಕ್ಯಗಳು ಎನ್ನುತ್ತೇವೆ. ಮೇಲ್ನೋಟಕ್ಕೆ ಅರ್ಥ ಕಾಣಿಸದಿರುವ ವಾಕ್ಯಗಳನ್ನು ಸೂಕ್ಷ್ಮವಾಕ್ಯಗಳು ಎನ್ನುತ್ತೇವೆ. ಪ್ರಥಮ ದೈವಗ್ರಂಥದಲ್ಲಾಗಲೀ, ಅಂತಿಮ ದೈವ ಗ್ರಂಥದಲ್ಲಾಗಲೀ ಸ್ಥೂಲ, ಸೂಕ್ಷ್ಮವೆನ್ನುವ ಎರಡು ವಿಧಗಳ ಜ್ಞಾನವಾಕ್ಯಗಳು ಇವೆ.

ಇದೇ ವಿಷಯವನ್ನೇ ಖುರ್‌ಆನ್ ಗ್ರಂಥದಲ್ಲಿ ಸೂರಾ3, ಆಯತ್ 7 (3–7) ರಲ್ಲಿಯೂ **ಮುಹ್ಕಮಾತ್, ಮುತಷಾಬಿಹಾತ್** ಎಂಬ ಎರಡು ವಿಧಗಳ ವಾಕ್ಯಗಳಿವೆಯೆಂದು ಹೇಳಿದ್ದಾರೆ. ಮುಹ್ಕಮಾತ್ ಎಂದರೆ ಸ್ಥೂಲವಾಕ್ಯಗಳೆಂದು, ಮುತಷಾಬಿಹಾತ್ ಎಂದರೆ ಸೂಕ್ಷ್ಮವಾಕ್ಯಗಳೆಂದು ಅರ್ಥ. ಇದೇ ಆಯತ್‌ನಲ್ಲಿ

ಸೂಕ್ಷ್ಮವಾಕ್ಯಗಳ ನಿಜ ಭಾವ ದೇವರಿಗೆ ಹೊರತು ಯಾವ ಮನುಷ್ಯನಿಗೂ ತಿಳಿಯುವುದಿಲ್ಲ ಎಂದು ಸಹ ಹೇಳಿದ್ದಾರೆ. ದೇವರ ಮಾತಿನ ಪ್ರಕಾರವೇ ಮೂರು ದೈವ ಗ್ರಂಥಗಳಲ್ಲಿಯೂ ಶೇ. ಎಂಬತ್ತರಷ್ಟು ಮನುಷ್ಯರಿಗೆ ಅರ್ಥವಾಗದ ವಾಕ್ಯಗಳಿವೆ. ಅಂತಹ ವಾಕ್ಯಗಳಲ್ಲಿ ಪ್ರಳಯ ಎಂಬುದು ಸಹ ಒಂದು ಮುತಷಾಬಿಹಾತ್ ವಾಕ್ಯವೇ. ಅದನ್ನು ಸೂಕ್ಷ್ಮವಾಗಿ ಅರ್ಥ ಮಾಡಿಕೊಳ್ಳಬೇಕಾಗಲೀ, ಸ್ಥೂಲವಾಗಿ ಅರ್ಥಮಾಡಿಕೊಳ್ಳಬಾರದು. ವಾಸ್ತವಕ್ಕೆ ಪ್ರಳಯ ಎನ್ನುವುದು ಸ್ಥೂಲವಾಗಿ ಎಲ್ಲೂ ನಡೆಯುವುದು ಅಲ್ಲ. ಭೂಮಿ ಆಕಾಶದಿಂದ ಕೂಡಿಕೊಂಡ ಪ್ರಪಂಚವನ್ನು ದೇವರು ಸೃಷ್ಠಿಸಿದ್ದಾನೆ. ಪ್ರಪಂಚವನ್ನು ಶಾಶ್ವತವಾಗಿ ಇರುವಹಾಗೆ ದೇವರು ಸೃಷ್ಠಿಸಿದ್ದಾನಾಗಲೀ, ನಂತರ ಯಾವಾಗಾದರೂ ನಾಶವಾಗುವಂತೆ ಸೃಷ್ಠಿಸಲಿಲ್ಲ. ಈ ಪ್ರಪಂಚ ಎಂದಿಗೂ ನಾಶವಾಗುವುದಿಲ್ಲ. ಹೊರಗಿನ ಪ್ರಪಂಚವನ್ನು ಬಿಟ್ಟು ನೋಡಿದರೇ ಸೂಕ್ಷ್ಮವಾದ ಪ್ರಪಂಚವೂ ಸಹ ಜೀವರಾಶಿಗಳ ಶರೀರಗಳ ರೂಪದಲ್ಲಿದೆ. ಶರೀರದಲ್ಲಿ ಭೂಮಿ ಮೊದಲುಗೊಂಡು ಆಕಾಶದವರೆಗು ಇವೆ. ಪಂಚಭೂತಗಳೊಂದಿಗೆ ತಯಾರಾದ ಶರೀರ ನಶಿಸಿದಾಗಲೇ ಶರೀರದಲ್ಲಿ ಪ್ರಳಯ ಏರ್ಪಡುತ್ತಿದೆ. ಮನುಷ್ಯನ ಮರಣವನ್ನು ಪ್ರಳಯವಾಗಿ ದೇವರು ನಿರ್ಣಯಿಸಿದ್ದಾನೆ. ಮನುಷ್ಯ ಸತ್ತುಹೋದಾಗ ಕೂಡಲೇ ಅವನ ಪಾಪ ಪುಣ್ಯಗಳನ್ನು ಲೆಕ್ಕಿಸಿ ಅವನಿಗೆ ಸ್ವರ್ಗ, ನರಕಗಳನ್ನು ನಿರ್ಣಯಿಸುತ್ತಿದ್ದಾನೆ. ಅದೇ ವಿಧಾನವನ್ನೇ ಪ್ರಳಯದಲ್ಲಿ ಮನುಷ್ಯನ ಪಾಪಪುಣ್ಯಗಳು ಲೆಕ್ಕಿಸಲಾಗಿ, ಕರ್ಮಪತ್ರದಲ್ಲಿ ಬರೆಯಲ್ಪಟ್ಟು ಅದನ್ನನುಸರಿಸಿ, ಮನುಷ್ಯನಿಗೆ ಸ್ವರ್ಗ ನರಕಗಳನ್ನು ನಿರ್ಣಯ ಮಾಡುವುದು ನಡೆಯುತ್ತಿದೆ. ಸತ್ತುಹೋದಾಗ ಆ ಜನ್ಮದಲ್ಲಿ ಮಾಡಿಕೊಂಡ ಪಾಪಪುಣ್ಯಗಳನ್ನನುಸರಿಸಿ ಕೂಡಲೇ ನಂತರ ಜನ್ಮದಲ್ಲಿ ಅನುಭವಿಸುವ ಕಷ್ಟ ಸುಖಗಳನ್ನು ನಿರ್ಣಯಿಸಿ ಕಳುಹಿಸುವುದು ನಡೆಯುತ್ತಿದೆ. ಹಾಗೆ ಸತ್ತುಹೋದವನು ಪುನಃ ಅವನು ಮಾಡಿಕೊಂಡ ಕರ್ಮವನ್ನು ಅನುಭವಿಸುವುದಕ್ಕೆ ಕೂಡಲೇ ಶಿಶು ಶರೀರವನ್ನು ಧರಿಸಿ ಹುಟ್ಟುತ್ತಿದ್ದಾನೆ. ಇದು ಪ್ರತಿ ನಿತ್ಯ ನಡೆಯುತ್ತಿರುವ ವಿಧಾನವೇ. ಆದರೂ ಪ್ರತಿ ಮನುಷ್ಯನಿಗೂ ಮರಣವೇ ಅವನ ಪ್ರಳಯವೆಂದು ತಿಳಿಯದಂತೆ ಹೋಗಿದೆ.

ಆದ್ದರಿಂದ ಪ್ರಳಯವೆನ್ನುವ ವಾಕ್ಯ ಖುರ್‌ಆನ್ ಗ್ರಂಥದಲ್ಲಿ ಇದ್ದರೂ ಅದು ನನಗೆ ಹೊರತು ಮನುಷ್ಯರಿಗೆ ತಿಳಿಯದೆಂದು ದೇವರು ಹೇಳಿದ್ದಾನೆ. ಆದ್ದರಿಂದ ಪ್ರಳಯ ಯಾವಾಗಲೋ ಬರುತ್ತದೆಂದು ಮನುಷ್ಯ ಅಂದುಕೊಳ್ಳುತ್ತಿದ್ದಾನೆ. ಪ್ರತಿ ಜನ್ಮದಲ್ಲಿಯೂ ಪ್ರತಿ ಜೀವಿಗೂ ನಡೆಯುವ ಪ್ರಳಯವನ್ನು ಯಾರೂ ಗುರುತಿಸಲಾರದೆ ಹೋಗಿದ್ದಾರೆ.

**ಮುಸ್ಲೀಮ್ :–** ನೀವು ಏನು ಹೇಳಿದರೂ ನಮ್ಮನ್ನು ಗೊಂದಲಕ್ಕೆ ಗುರಿ ಮಾಡುವ ಮಾತುಗಳನ್ನೇ ಹೇಳುತ್ತಿದ್ದೀರ. ನಾವು ಅಂದುಕೊಂಡಿರುವುದಕ್ಕೆ ವಿರುದ್ಧವಾಗಿ ಹೇಳುತ್ತಿದ್ದೀರ. ಈಗ ನಿಮ್ಮನ್ನು ಒಂದು ಪ್ರಶ್ನೆ ಕೇಳುತ್ತೇವೆ ಹೇಳಿರಿ. ಖುರ್‌ಆನ್‌ನಲ್ಲಿರುವ ಮುತಷಾಬಿಹಾತ್ ವಾಕ್ಯಗಳ ಅರ್ಥ ದೇವರಿಗೆ ಹೊರತು ಯಾವ ಮನುಷ್ಯನಿಗೂ ತಿಳಿಯದೆಂದು ಇದಕ್ಕೂ ಮೊದಲು ನೀವೇ ಹೇಳಿದ್ದೀರಲ್ಲವೆ! ಹಾಗಿರುವಾಗ ಒಬ್ಬ ಮನುಷ್ಯನಾಗಿರುವ ನೀವು ಈ ವಾಕ್ಯಕ್ಕೆ ವಿವರವನ್ನು ಹೇಗೆ ಹೇಳುತ್ತಿದ್ದೀರ, ನೀವು ಹೇಳಿದ ಪ್ರಳಯ ಮನುಷ್ಯನೊಂದರ ಮರಣವೇ ಎಂದು ನಿಮಗೆ ಹೇಗೆ ತಿಳಿದಿದೆ?

**ನಮ್ಮವರು :–** ಖುರ್‌ಆನ್ ಗ್ರಂಥದಲ್ಲಿ ಸೂರಾ ಮೂರು, ಆಯತ್ ಏಳರಲ್ಲಿ ಕೊನೆಯಲ್ಲಿ ಬುದ್ಧಿ, ಶ್ರದ್ಧೆಯಿರುವವನು ಮಾತ್ರವೇ ದೇವರ ಸೂಕ್ಷ್ಮಜ್ಞಾನವನ್ನು ಗ್ರಹಿಸುತ್ತಾನೆ ಎಂದು ಇದೆ ಅಲ್ಲವೆ! ಆ ಮಾತಿನ ಪ್ರಕಾರ ನಮಗೆ ದೇವರ ಜ್ಞಾನದ ಮೇಲೆ ಶ್ರದ್ಧೆ ಇದೆ. ಹಾಗೇ ಜ್ಞಾನದ ಮೇಲೆ ಆಸಕ್ತಿಯಿರುವ ಬುದ್ಧಿಯಿದೆ. ಆದ್ದರಿಂದ ದೇವರ ಜ್ಞಾನ ನಮಗೆ ಅರ್ಥವಾಗಿದೆ. ದೇವರ ಮಾತು ಅಮೃತವಾಕ್ಯ. ಅದು ಎಂದಿಗೂ ಮಾಸಿಹೋಗುವಂತದ್ದಲ್ಲ. ದೇವರು ಹೇಳಿದಂತೆ ನೆರವೇರುತ್ತದೆ. ದೇವರ ಜ್ಞಾನದ ಮೇಲೆ ಶ್ರದ್ಧೆ, ಬುದ್ಧಿ ಇರುವವನು ಯಾವ ಮತದಲ್ಲಿ ಹುಟ್ಟಿದ್ದರೂ, ಅವನಿಗೆ ದೇವರ ಜ್ಞಾನ ಸುಲಭವಾಗಿ ಅರ್ಥವಾಗುತ್ತದೆ. ಅವನು ಸಂಪೂರ್ಣ ಜ್ಞಾನಿ ಆಗಬಲ್ಲನು. ಮತದ ಮೇಲೆ ಶ್ರದ್ಧೆ ಇರುವವನಿಗೆ ಜ್ಞಾನ ಲಭಿಸುವುದಿಲ್ಲ. ದೇವರ ಜ್ಞಾನ ದೇವರಿಗೇ ತಿಳಿದಿರುತ್ತದೆ. ಹೇಳುವುದು ಆತನ ಜವಾಬ್ದಾರಿ ತಿಳಿದುಕೊಳ್ಳುವುದು ನಮ್ಮ ಜವಾಬ್ದಾರಿ. ದೇವರು ಮನುಷ್ಯನಾಗಿ

ಬಂದು ಹೇಳಿದ ಗ್ರಂಥಗಳಲ್ಲಿನ ಜ್ಞಾನವನ್ನು ನಾವು ಬುದ್ಧಿಯಿಂದ, ಶ್ರದ್ಧೆಯಿಂದ ಗ್ರಹಿಸಿಕೊಂಡಿದ್ದೇವೆ. ಆದ್ದರಿಂದ ಸತ್ತುಹೋದಾಗ ಮನುಷ್ಯ ಶರೀರದಲ್ಲಿ ಪ್ರಳಯವನ್ನು ಹೊಂದಿ ಪುನಃ ಹುಟ್ಟುತ್ತಿದ್ದಾನೆ. ಇದೇ ವಿಷಯವನ್ನೇ ಖುರ್‌ಆನ್ ಗ್ರಂಥದಲ್ಲಿ ಬಹಳ ಕಡೆ ಇದೆ. ಅದನ್ನು ಯಾರೂ ಅಲ್ಲ ಎನ್ನಲಾರರು.

**ಮುಸ್ಲೀಮ್ :–** ಮನುಷ್ಯ ಒಂದು ಬಾರಿ ಹುಟ್ಟಿ ಒಂದು ಬಾರಿಯೇ ಮರಣಿಸುತ್ತಾನೆ. ಅಷ್ಟೇಯಾಗಲೀ ಒಂದೇ ಮನುಷ್ಯ ಮಾತು ಮಾತಿಗೂ ಹುಟ್ಟುವುದಿಲ್ಲ. ನಾವು ಖುರ್‌ಆನ್ ಜ್ಞಾನವನ್ನು, ಹದೀಸುಗಳ ಜ್ಞಾನವನ್ನು ಸೇರಿಸಿ ಓದಿಕೊಂಡು ಸತ್ಯವನ್ನು ತಿಳಿದುಕೊಂಡಿದ್ದೇವೆ. ನೀವು ಕೇವಲ ಖುರ್‌ಆನ್ ಜ್ಞಾನದಿಂದಲೇ ಹೇಳುತ್ತಿದ್ದೀರ. ಖುರ್‌ಆನ್ ಜ್ಞಾನ ಒಂದೇ ಸರಿಹೋಗುವುದಿಲ್ಲ. ಬಲ್ಬು ಬೆಳಗಬೇಕೆಂದರೇ ಪಾಜಿಟಿವ್ ನೆಗಿಟಿವ್ ಎಂಬ ಎರಡು ವಯರ್‌ಗಳು ಹೇಗೆ ಅಗತ್ಯವೋ ಹಾಗೇ ಮನುಷ್ಯನಲ್ಲಿ ಜ್ಞಾನ ಬೆಳಗಬೇಕೆಂದರೇ ಕರೆಂಟಿಗೆ ಎರಡು ವಯರ್‌ಗಳು ಇರುವಂತೆ ಮನುಷ್ಯನಿಗೆ ಖುರ್‌ಆನ್ ಗ್ರಂಥ, ಹದೀಸು ಗ್ರಂಥ ಎರಡೂ ಅಗತ್ಯವೇ. ನಿಮಗೆ ಹದೀಸು ಜ್ಞಾನ ತಿಳಿದಿಲ್ಲ. ಆದ್ದರಿಂದ ನಿಮಗೆ ಪೂರ್ತಿ ಜ್ಞಾನ ತಿಳಿಯದೆಂದೇ ಹೇಳಬಹುದು. ನಮಗೆ ಖುರ್‌ಆನ್‌ನೊಂದಿಗೆ ಹದೀಸುಗಳು ಸಹ ತಿಳಿದಿವೆ ಆದ್ದರಿಂದ ನಿಮಗೆ ತಿಳಿಯದ ಜ್ಞಾನ ನಮಗೆ ತಿಳಿದಿದೆ. ಆದ್ದರಿಂದ ನಿಮ್ಮ ಮಾತನ್ನು ನಾವು ಕೇಳುವುದಿಲ್ಲ.

**ನಮ್ಮವರು :–** ಖುರ್‌ಅನ್ ಗ್ರಂಥವನ್ನು ದೇವರು ಕೊಟ್ಟಿದ್ದಾನೆ. ಆದ್ದರಿಂದ ಅದು ದೈವಗ್ರಂಥವಾಗಿದೆ. ಹದೀಸು ಗ್ರಂಥವನ್ನು ಯಾರು ಬರೆದಿದ್ದಾರೋ ನಮಗೆ ಚೆನ್ನಾಗಿ ತಿಳಿದಿದೆ. ಹದೀಸು ಗ್ರಂಥದಲ್ಲಿ ಏನು ಬರೆಯಲಾಗಿದೆಯೋ ಕೂಡಾ ನಮಗೆ ತಿಳಿದಿದೆ. ಹದೀಸು ಗ್ರಂಥದಲ್ಲಿ ಜ್ಞಾನವಿದ್ದರೇ, ಅದು ಯಾವ ಜ್ಞಾನವೋ ನಮಗೆ ತಿಳಿದಿಲ್ಲ ಎಂದುಕೊಳ್ಳಬೇಡ. ನಾವು ಇಲ್ಲಿಯವರೆಗು ಏಕೆ ಮಾತನಾಡಬೇಕಾಗಿ ಬಂದಿದೆಯೆಂದರೆ, ನೀವು ನಮ್ಮನ್ನು ಅಜ್ಞಾನಿಗಳಾಗಿ ಮಾತನಾಡಿರುವುದಕ್ಕೆ ನಮಗೆ ತಿಳಿದ ಜ್ಞಾನ ಯಾವುದೋ ಹೇಳಬೇಕೆಂದು ಹೇಳಿದ್ದೇವೆ. ಅಷ್ಟೇಯಾಗಲೀ ನಾವು ಹೇಳಿರುವುದು ನೀವು ಕೇಳುತ್ತೀರೆಂದು,

ತಿಳಿದುಕೊಳ್ಳುತ್ತೀರೆಂದು ಅಲ್ಲ. ಜ್ಞಾನ ಅರ್ಥವಾಗಬೇಕೆಂದರೆ ದೇವರ ಅನುಮತಿ ಇರಬೇಕು. ದೇವರು ಒಪ್ಪಿಕೊಂಡವನೇ ಜ್ಞಾನ ಮಾರ್ಗದಲ್ಲಿ ಹೋಗಬಲ್ಲನು. ದೇವರು ಒಪ್ಪಿಕೊಳ್ಳದವನು ಅಜ್ಞಾನ ಮಾರ್ಗದಲ್ಲಿ ಹೋಗಬಲ್ಲನು. ಮನುಷ್ಯರಿಗೆ ದೇವರು ಜ್ಞಾನವನ್ನು ಕೊಟ್ಟರೂ, ಅದು ಎಲ್ಲರಿಗೂ ಲಭ್ಯವಾಗುವುದಿಲ್ಲ ಎಂದು ದೇವರ ಮಾತಿನಿಂದಲೇ ಅರ್ಥವಾಗಿದೆ. ಮಳೆ ಬೀಳದ ಪ್ರಾಂತಕ್ಕೆ ದೇವರು ಮೇಘವನ್ನು ಕಳುಹಿಸಿ ಮಳೆಯನ್ನು ಸುರಿಸಿದ ಹಾಗೆ, ಮನುಷ್ಯರು ಜ್ಞಾನ ತಿಳಿಯಬೇಕೆಂದು ಜ್ಞಾನವಿಲ್ಲದ ಪ್ರಾಂತಕ್ಕೆ ಜಿಬ್ರಯೇಲ್ ದೂತನನ್ನು ಕಳುಹಿಸಿ ಜ್ಞಾನವನ್ನು ಮುಹಮ್ಮದ್ ಪ್ರವಕ್ತರಿಗೆ ಹೇಳುವಂತೆ ದೇವರು ಮಾಡಿದ್ದಾನೆ. ಅಂದಿನ ಕಾಲದಲ್ಲಿ ನೀತಿವಂತನಾದ ಪ್ರವಕ್ತರವರು ತನಗೆ ಜಿಬ್ರಯೇಲ್ ಹೇಳಿದ ಜ್ಞಾನವನ್ನು ತನ್ನ ಅನುಚರರಿಗೆ ಹೇಳಿದಾಗ ಕೊನೆಗೆ ಅದು ಖುರ್‌ಆನ್ ಗ್ರಂಥವಾಗಿ ಬರೆಯಲಾಗಿದೆ.

ಖುರ್‌ಆನ್ ಗ್ರಂಥ ಪ್ರವಕ್ತರವರು ಸತ್ತುಹೋದ ನಂತರ ಆತನ ಅನುಚರರಿಂದ ಬರೆಯಲಾಗಿರುವ ಗ್ರಂಥ ಆಗುವುದರಿಂದ, ಅದರಲ್ಲಿ ದೇವರ ವಾಕ್ಯಗಳೊಂದಿಗೆ ಸ್ವಲ್ಪ ಕಾಲುಷ್ಯವೂ ಸಹ ಸೇರಿರಬಹುದು. ಹೊಲದಲ್ಲಿನ ಬೆಳೆ ಮನೆಗೆ ಬರುವುದರೊಳಗೆ ಕಣದಲ್ಲಿ ಕಲ್ಲು, ಮಣ್ಣು ಧಾನ್ಯದಲ್ಲಿ ಸೇರಿದಹಾಗೆ, ಜಿಬ್ರಯೇಲ್ ಹೇಳಿದ ಜ್ಞಾನ ಪ್ರವಕ್ತರಿಗೆ ಅರ್ಥವಾಗುವುದರಲ್ಲಿ ಸ್ವಲ್ಪ, ಪ್ರವಕ್ತ ಹೇಳಿದ ಜ್ಞಾನ ಗ್ರಂಥರೂಪವಾಗಿ ಬದಲಾಗುವುದರಲ್ಲಿ ಸ್ವಲ್ಪ, ಬರೆಯಲಾಗಿರುವ ಜ್ಞಾನದಲ್ಲಿ ಸ್ವಲ್ಪ ಅಜ್ಞಾನವೂ ಸಹ ಸೇರಿರಬಹುದು. ಅದು ಸಹಜವಾಗಿ ನಡೆಯುವ ಕೆಲಸ. ಬೆಳೆಯಿಂದ ಮನೆಗೆ ಬರುವುದರೊಳಗೆ ಬೆಳೆ ಸ್ವಲ್ಪ ಕಾಲುಷ್ಯವಾದಾಗ, ಮನೆಯಿಂದ ಅಡಿಗೆ ಮಾಡುವ ಸಮಯದಲ್ಲಿ ಅದನ್ನು ಶುಭ್ರಮಾಡಿಕೊಂಡು, ಸೇರಿರುವ ಕಲ್ಲನ್ನು ಮಣ್ಣನ್ನು ತೆಗೆದುಹಾಕಿ ಸ್ವಚ್ಛವಾದ ಆಹಾರವನ್ನು ಸ್ವೀಕರಿಸಿದಂತೆ, ಜಿಬ್ರಯೇಲ್ ಹೇಳಿದ ಜ್ಞಾನವನ್ನೇ ಪ್ರವಕ್ತರು ಹೇಳಿದರೂ, ಅದು ಗ್ರಂಥರೂಪವಾಗಿ ಬದಲಾಗುವಾಗ ಸ್ವಲ್ಪಕ್ಕೆ ಸ್ವಲ್ಪ ಕಾಲುಷ್ಯ ಸೇರಿರಬಹುದು. ಗ್ರಂಥದಿಂದ ಅದನ್ನು ಸ್ವೀಕರಿಸುವಾಗ ಜ್ಞಾನದಲ್ಲಿ ಸೇರಿದ ಅಜ್ಞಾನವನ್ನು

ತೆಗೆದುಹಾಕಿ ಸ್ವಚ್ಛವಾದ ಜ್ಞಾನವನ್ನು ಶೇಕರಿಸಿಕೊಳ್ಳಬೇಕಾಗುತ್ತದೆ. ಇದೇ ರೀತಿ ಪ್ರತಿ ದೈವ ಗ್ರಂಥದಲ್ಲಿ ಪ್ರತಿ ಮತಸ್ಥನು ಹಾಗೆಯೇ ಮಾಡಬೇಕಾಗುತ್ತದೆ. ದೈವ ಗ್ರಂಥದ ಹತ್ತಿರವೇ ಇಷ್ಟು ಜಾಗ್ರತೆ ವಹಿಸಬೇಕಾದಾಗ, ದೈವಗ್ರಂಥಗಳಲ್ಲದ ಗ್ರಂಥಗಳಿಂದ ಜ್ಞಾನವನ್ನು ಹೊಂದಬೇಕೆಂದರೇ ಮೊದಲು ಅದರಲ್ಲಿರುವುದು ಜ್ಞಾನವೋ ಅಲ್ಲವೋ ನೋಡಬೇಕಾಗಿದೆ.

ಈಗ ಹದೀಸುಗಳ ವಿಷಯಕ್ಕೆ ಬಂದರೇ, ಹದೀಸುಗಳು ಪ್ರವಕ್ತರ ಹೆಸರು ಹೇಳಿ ಮನುಷ್ಯರು ಬರೆದುಕೊಂಡಿರುವವೇ ಹೊರತು ಪ್ರವಕ್ತ ಅವುಗಳನ್ನು ಹೇಳಲಿಲ್ಲ. ಪ್ರವಕ್ತರು ಮರಣಿಸಿದ ನಂತರ ಸುಮಾರು ಎರಡುನೂರು ಸಂವತ್ಸರಗಳಿಗೆ ಸ್ವಲ್ಪ ಮುಂದೆ, ಸ್ವಲ್ಪ ಹಿಂದಿನ ಕಾಲದಲ್ಲಿ ಹದೀಸುಗಳು ಮನುಷ್ಯರಿಂದ ಬರೆಯಲಾಗಿವೆ. ಈದಿನ ಪ್ರಸಿದ್ಧಿಯಲ್ಲಿರುವ ಹದೀಸುಗಳು ಹಜರತ್ ಬುಖಾರೀ, ಹಜರತ್ ಮುಸ್ಲೀಮ್‌ನವರು ಹೇಳಿರುವವೇ. ಹದೀಸುಗಳು ಹೆಚ್ಚಾಗಿ ಮುಸ್ಲೀಮ್‌ರ ಜೀವನ ವಿಧಾನವನ್ನು ತಿಳಿಸಿವೆ ಹೊರತು ಜ್ಞಾನ ವಿಧಾನವನ್ನು ತಿಳಿಸಿರುವುದು ಅದರಲ್ಲಿ ಏನೂ ಇಲ್ಲ. ಹದೀಸುಗಳು ಮೊದಲು ಹತ್ತುಸಾವಿರದವರೆಗು ಬರೆದಿದ್ದರೂ ಅದರಲ್ಲಿ ಕೆಲವು ಆಮೋದಯೋಗ್ಯ ಆಗದಿರುವವು ಇವೆಯೆಂದು ಮುಸ್ಲೀಮ್ ಹಿರಿಯರು ಆಗ ಸ್ವಲ್ಪ, ಆಗ ಸ್ವಲ್ಪ ತೆಗೆದುಹಾಕಿದಾಗ, ಕೊನೆಗೆ 1800 ಉಳಿದಿವೆ. ಅವುಗಳನ್ನು ಮಾತ್ರ ಖುರ್‌ಆನ್ ಗ್ರಂಥದೊಂದಿಗೆ ಜೋಡಿಸುವುದಕ್ಕೆ ಅವಕಾಶವಿಲ್ಲದಿರುವವಾಗಿ, ಜೀವನ ವಿಧಾನಕ್ಕೆ ಸಂಬಂಧಿಸಿರುವವಾಗಿ ಇವೆ. ಅವುಗಳನ್ನು ದೈವ ಗ್ರಂಥದೊಂದಿಗೆ ಜೋಡಿಸಿಕೊಳ್ಳುವ ಅಗತ್ಯವೇ ಇಲ್ಲ. ಮನುಷ್ಯ ಪ್ರಪಂಚದಿಂದ, ಕರ್ಮಗಳಿಂದ ದೇವರ ಕಡೆ ಹೋಗುವುದಕ್ಕೆ, ದೇವರಲ್ಲಿ ಸೇರಿಹೋಗುವುದಕ್ಕೆ ಮೂರು ಗ್ರಂಥಗಳಲ್ಲಿ ಯಾವ ಗ್ರಂಥವಾದರೂ ಉಪಯೋಗವಾಗುತ್ತದೆ. ಮುಸ್ಲೀಮ್‌ರು ಖುರ್‌ಆನ್ ಗ್ರಂಥವನ್ನು ಆಶ್ರಯಿಸಿದರೇ ಅದೇ ಉಳಿದ ಎರಡು ಗ್ರಂಥಗಳನ್ನು ಓದಬೇಕೆಂದು ತನ್ನ ವಾಕ್ಯದಲ್ಲಿ ಹೇಳಿ ಪೂರ್ತಿ ಜ್ಞಾನವನ್ನು ತಿಳಿಸಬಲ್ಲದು. **ಖುರ್‌ಆನ್‌ನಲ್ಲಿ ಸೂರಾ5, ಆಯತ್ 68ರಲ್ಲಿ ಹೇಳಿದಹಾಗೆ "ಭಗವದ್ಗೀತೆಯನ್ನು,**

**ಬೈಬಲ್‌ನ್ನು, ಖುರ್‌ಆನ್ ಗ್ರಂಥವನ್ನು ನಿಮ್ಮ ಜೀವನಗಳಲ್ಲಿ ನೆಲಗೊಳಿಸುವವರೆಗು ನೀವು ಯಾವ ಧರ್ಮದಲ್ಲಿಯೂ ಇಲ್ಲದಂತೇಯಾಗುತ್ತದೆ."**

ನೀವು ಮೇಲಿನ ಪ್ರಶ್ನೆಯಲ್ಲಿ ಮನುಷ್ಯ ಒಂದೇ ಬಾರಿ ಹುಟ್ಟಿ, ಒಂದು ಬಾರಿಯೇ ಸತ್ತುಹೋಗುವವನು ಎಂದು ಹೇಳಿ, ಹದೀಸು ಜ್ಞಾನ ತಿಳಿಯದವರೆಗು ಸಂಪೂರ್ಣ ಜ್ಞಾನ ತಿಳಿಯುವುದಿಲ್ಲವೆಂದು ಹೇಳುವುದರಿಂದ, ನಾವು ಹದೀಸುಗಳ ಕುರಿತು ಹೇಳಬೇಕಾಗಿ ಬಂದಿದೆ. ಈಗ ಮನುಷ್ಯ ಹುಟ್ಟುವಿಕೆಯನ್ನು ಕುರಿತು ದೇವರು ತನ್ನ ಗ್ರಂಥದಲ್ಲಿ ಏನು ಹೇಳಿದ್ದಾನೋ ನೋಡಿ, ಯಾರು ಹೇಳಿದ ಮಾತು ನಿಜವೋ ಗ್ರಹಿಸೋಣ. ಮನುಷ್ಯ ಸೃಷ್ಟಿ ಆದಿಯಲ್ಲಿ ಹುಟ್ಟಿಸಲ್ಪಟ್ಟು ಅಂದಿನಿಂದ ಇಲ್ಲಿಯವರೆಗು ಸಾವು ಹುಟ್ಟುಗಳ ಮಧ್ಯೆ ನಲುಗುತ್ತಿದ್ದಾನೆ, ದೈವಜ್ಞಾನವನ್ನು ತಿಳಿದವರು ಮಾತ್ರ ಪುನಃ ಹುಟ್ಟದಂತೆ ದೇವರಲ್ಲಿ ಐಕ್ಯ ಹೊಂದಿದಾಗ, ಜ್ಞಾನ ಇಲ್ಲದವರೆಲ್ಲರೂ ಸಾಯುತ್ತಾ ಹುಟ್ಟುತ್ತಿದ್ದಾರೆ. ಒಬ್ಬ ಮನುಷ್ಯ ಜ್ಞಾನವನ್ನು ತಿಳಿದು ಮೋಕ್ಷವನ್ನು ಹೊಂದದವರೆಗು ಒಂದು ಬಾರಿ ಸತ್ತು ಎರಡನೆ ಬಾರಿ ಹುಟ್ಟುತ್ತಾ, ಅದೇ ವಿಧಾನವನ್ನು ಮುಂದುವರೆಸುತ್ತಾ ಬರುತ್ತಿದ್ದಾನೆ. ಈ ವಿಷಯವನ್ನು ಖುರ್‌ಆನ್ ಗ್ರಂಥದಲ್ಲಿ ಬಹಳ ಕಡೆ, ಬಹಳ ಬಾರಿ ಹೇಳಿದ್ದಾನೆ. ಆದರೂ ಮುಸ್ಲೀಮ್‌ರು ಮನುಷ್ಯ ಒಂದುಬಾರಿಯೇ ಸಾಯುತ್ತಿದ್ದಾನೆ ಪುನಃ ಹುಟ್ಟುವುದಿಲ್ಲ ಎನ್ನುತ್ತಿದ್ದಾರೆ. ಅವರು ಏಕೆ ಆ ಮಾತನ್ನು ಅನ್ನುತ್ತಿದ್ದಾರೋ ಆದರೇ ದೈವಗ್ರಂಥದಲ್ಲಿ ಹಾಗೆ ಎಲ್ಲೂ ಹೇಳಲಿಲ್ಲ. ಮೊದಲು ಹುಟ್ಟಿಸಿದಂತೇ ಸತ್ತ ನಂತ ಎರಡನೆಯ ಬಾರಿಯೂ ಹಾಗೇ ಹುಟ್ಟಿಸಲ್ಪಡುತ್ತಾರೆಂದು ಹೇಳಿದಾಗ, ಎರಡನೆ ಜನ್ಮ ಮೊದಲ ಜನ್ಮದ ಹಾಗೆ ಇದೆಯೆಂದು ತಿಳಿಯುತ್ತಿದೆ ಅಲ್ಲವೆ! ಖುರ್‌ಆನ್‌ನಲ್ಲಿ ಸೂರಾ7, ಆಯತ್ 29ರಲ್ಲಿ ಹೀಗೆ ಇದೆ. **(7–29) "ಮೊದಲನೆ ಬಾರಿ ನಿಮ್ಮನ್ನು ಅಲ್ಲಾಹ್ ಹೇಗೆ ಹುಟ್ಟಿಸಿದ್ದಾನೋ ಎರಡನೆಯ ಬಾರಿ ಕೂಡಾ ನೀವು ಹಾಗೇ ಹುಟ್ಟಿಸಲ್ಪಡುತ್ತಿದ್ದೀರ"** ಈ ವಾಕ್ಯವನ್ನು ಓದಿದ ನಂತರ ಇದಕ್ಕೆ ವಿರುದ್ಧವಾಗಿ ಯಾರೂ ಮಾತನಾಡುವುದಕ್ಕೆ ಅವಕಾಶವೇ ಇಲ್ಲ. ಆದರೇ ಮುಸ್ಲೀಮ್‌ರೇ ಇದಕ್ಕೆ ವಿರುದ್ಧವಾಗಿ ಮಾತನಾಡುತ್ತಿದ್ದಾರೆಂದರೇ ಅದಕ್ಕೆ ಬಲವಾದ ಕಾರಣ ಯಾವುದೋ ಇರುತ್ತದೆ.

ಒಬ್ಬ ಮನುಷ್ಯ ಸತ್ತುಹೋದಾಗ ಅವನ ಶರೀರವನ್ನು ಭೂಮಿಯಲ್ಲಿ ಹೂತಿಟ್ಟಾಗ ಅದು ಕೊಳೆತುಹೋಗಿ ಮಣ್ಣಿನಂತೆ ಬದಲಾಗುತ್ತದೆ. ಶರೀರವನ್ನು ಭೂಮಿಯಲ್ಲಿ ಹೂತಿಡದೆ ಮೊದಲೇ ಆ ಶರೀರದಲ್ಲಿ ಬದುಕಿದ ಮನುಷ್ಯ ಅಂದರೆ ಜೀವಿಯು ಶರೀರವನ್ನು ಬಿಟ್ಟು ಹೋದರೇ ಅದನ್ನು ಸತ್ತುಹೋಗುವುದು ಎನ್ನುತ್ತಿದ್ದೇವೆ. ಸತ್ತುಹೋಗಿರುವುದು ಶರೀರದಲ್ಲಿನ ಜೀವಿಯು ಆದಾಗ, ಯಾವುದಕ್ಕೂ ಕೆಲಸಕ್ಕೆ ಬಾರದ ಶರೀರವನ್ನು ಭೂಮಿಯಲ್ಲಿ ಹಾಕುತ್ತಿದ್ದೇವೆ. ಶರೀರದಲ್ಲಿ ಸ್ವಲ್ಪ ಕಾಲ ಬದುಕಿದ ಜೀವಿಯು ನಮಗೆ ಮುಖ್ಯವಾಗಲೀ, ಚೈತನ್ಯವಿಲ್ಲದ ಮೃತದೇಹ ಲೆಕ್ಕವಿಲ್ಲ ಅಲ್ಲವೆ! ಸ್ವಲ್ಪ ಕಾಲ ಶರೀರದಲ್ಲಿ ಬದುಕಿದವ ನನ್ನು ನಾವು ಭೂಮಿಯಲ್ಲಿ ಹೂತಿಡಲಿಲ್ಲ. ಅವನ ಶರೀರವನ್ನು ಮಾತ್ರ ಹೂತಿಡುತ್ತಿದ್ದೇವೆ. ಆದರೇ ಶರೀರದಲ್ಲಿ ಇರುವ ಜೀವಿಯು ಸತ್ತುಹೋದಾಗ ಶರೀರದಿಂದ ಹೊರಗೆ ಹೋಗುತ್ತಿದ್ದಾನೆ. ಹೊರಗೆ ಹೋದವನು ಪುನಃ ಹೊಸ ಶಿಶು ಶರೀರವನ್ನು ಧರಿಸುತ್ತಿದ್ದಾನೆ. ಇದೇ ವಿಷಯವನ್ನೇ (7–29) ರಲ್ಲಿ ಮೊದಲು ಶಿಶುವಾಗಿ ಜೀವನವನ್ನು ಪ್ರಾರಂಭಿಸಿದವನು ಎರಡನೆಬಾರಿಯೂ ಸಹ ಶಿಶುವಾಗಿಯೇ ಜೀವನವನ್ನು ಪ್ರಾರಂಭಿಸುವನೆಂದು ಹೇಳಿದ್ದಾನೆ. ಮೊದಲಬಾರಿ ಶಿಶುವಾಗಿ ಹುಟ್ಟಿದಹಾಗೆ ಎರಡನೆ ಬಾರಿಯೂ ಸಹ ಶಿಶುವಾಗಿಯೇ ಹುಟ್ಟಬೇಕೆಂದರೇ ತಾಯಿ ಗರ್ಭದಲ್ಲಿ ತಯಾರಾಗಿ ಹೊರಗೆ ಬಂದಿರುವ ಶಿಶು ಶರೀರದಲ್ಲಿ ಸೇರಬೇಕಾಗಿರುವುದೇ. ಒಂದುಬಾರಿ ಶಿಶುವಾಗಿ ಜೀವನವನ್ನು ಪ್ರಾರಂಭಿಸಿದವನು ಎರಡನೆಯ ಬಾರಿಯೂ ಸಹ ಶಿಶು ದಶೆಯಿಂದಲೇ ಜೀವನವನ್ನು ಪ್ರಾರಂಭಿಸಬೇಕಾಗಿರುತ್ತದೆ. ಅದೇ ವಿಧಾನವನ್ನು ದೇವರು ಮನುಷ್ಯರಿಗೆ ಜೋಡಿಸಿದ್ದಾನೆ ಎನ್ನುವುದಕ್ಕೆ ಗುರುತಾಗಿ ಖುರ್‌ಆನ್ ಗ್ರಂಥದಲ್ಲಿ (53ನೇ ಸೂರಾದಲ್ಲಿ 46,47) ವಾಕ್ಯಗಳಲ್ಲಿ ದೇವರು ಹೀಗೆ ಹೇಳಿದ್ದಾನೆ.

**(53–46,47) "ಸ್ತ್ರೀ ಗರ್ಭದಲ್ಲಿ ಪ್ರಸರಿಸುವಂತೆ ಮಾಡಿದ ವೀರ್ಯ ಬಿಂದುವಿನಿಂದ ಮೊದಲಬಾರಿ ಜೀವನವನ್ನು ಪ್ರಾರಂಭಿಸಿದಂತೇ, ಎರಡನೆಯ ಬಾರಿ ಜೀವನವನ್ನು ಪ್ರಸಾದಿಸುವುದು ದೇವರಿಗೇ ಸಲ್ಲುತ್ತದೆ"**

ಈ ವಾಕ್ಯಗಳೊಂದಿಗೆ ಮನುಷ್ಯ ಸತ್ತುಹೋದರೂ ಎರಡನೆಯಬಾರಿ ಜೀವನವನ್ನು ಶಿಶು ದಶೆಯಿಂದ ಪ್ರಾರಂಭಿಸುವನು ಎಂದು ತಿಳಿಯುತ್ತಿದೆ. ಇಷ್ಟು ವಿವರವಾಗಿ ಖುರ್‌ಆನ್ ಗ್ರಂಥದಲ್ಲಿ ಅಲ್ಲಾಹ್ ಹೇಳಿದ್ದರೇ ಅಲ್ಲಾಹ್ ಮಾತುಗಳನ್ನು ಲೆಕ್ಕ ಮಾಡದಂತೆ ಒಂದು ಬಾರಿ ಮರಣ ಹೊಂದಿದವನಿಗೆ ಜನ್ಮಗಳು ಇಲ್ಲ, ಅವನು ಪ್ರಳಯ ಕಾಲದವರೆಗು ಭೂಸಮಾಧಿಯಲ್ಲಿಯೇ ಇರುವನೆಂದು ಹೇಳುವುದರಿಂದ, ಜನ್ಮಗಳ ವಿಷಯದಲ್ಲಿ ದೇವರಿಗೆ ಪೂರ್ತಿ ವಿರುದ್ಧವಾಗಿ ಮಾತನಾಡಿದಂತೇ ಆಗುತ್ತದೆ. ಭೂಸಮಾಧಿಯಲ್ಲಿ ಹೂತಿಟ್ಟಿರುವ ಶರೀರವೂ ಸಹ ಆರು ತಿಂಗಳಿಗಿಂತ ಹೆಚ್ಚಿನ ಕಾಲ ಇರುವುದಿಲ್ಲ. ಅಂಥದ್ದನ್ನು ಪ್ರಳಯಕಾಲದವರೆಗು ಇರುತ್ತದೆಂದು ಹೇಳುವುದು ವಿಡ್ಡೂರ, ಸೈನ್ಸ್ ಸಹ ಒಪ್ಪಿಕೊಳ್ಳುವುದಿಲ್ಲ.

ಜನ್ಮಗಳ ವಿಷಯಕ್ಕೆ ಬಂದರೆ ಬಹಳ ಮಂದಿ ಮುಸ್ಲೀಮ್‌ರು ಮನುಷ್ಯನಿಗೆ ಎರಡನೆಯ ಜನ್ಮವಿಲ್ಲವೆಂದು ಮಾತನಾಡುತ್ತಿದ್ದಾರೆ. ಅವರು ಗ್ರಂಥವನ್ನು ಓದಿ ಗ್ರಂಥದ ಪ್ರಕಾರ ಮಾತನಾಡುತ್ತಿದ್ದಾರಾ ಎಂದರೆ, ಹಾಗಲ್ಲದೆ ಅವರ ಹಿರಿಯರು ಹೇಳಿದಂತೇ ಮಾತನಾಡುತ್ತಿದ್ದಾರೆ. ಇದನ್ನನುಸರಿಸಿ ಮುಸ್ಲೀಮ್ ಸಮಾಜವೆಲ್ಲವನ್ನೂ ಅವರ ಹಿರಿಯರು ತಪ್ಪು ದಾರಿಯಲ್ಲಿ ನಡೆಸುತ್ತಿದ್ದಾರೆಂದು ತಿಳಿಯುತ್ತಿದೆ. ಹಾಗೆ ಮುಸ್ಲೀಮ್‌ರೆಲ್ಲರನ್ನೂ ತಪ್ಪು ದಾರಿ ಹಿಡಿಸಬೇಕಾದ ಅಗತ್ಯ ಏನು ಬಂದಿದೆಯೆಂದು ನೋಡಿದರೆ, ಮುಸ್ಲೀಮ್ ಸಮಾಜವೆಲ್ಲವನ್ನೂ ಅವರ ಹತೋಟಿಯಲ್ಲಿ ಇಟ್ಟುಕೊಂಡು ಅವರು ಏನು ಹೇಳಿದರೆ ಅದೇ ಮಾಡುವಂತೆ, ಏನು ಹೇಳಿದರೆ ಅದು ಕೇಳುವಂತೆ ತಯಾರುಮಾಡಿಕೊಳ್ಳುವುದಕ್ಕೆ ಆ ರೀತಿ ಅಮಾಯಕರಾದ ಮುಸ್ಲೀಮ್‌ರೆಲ್ಲರನ್ನೂ ದೇವರ ವಿಷಯದಲ್ಲಿ ಪೂರ್ತಿ ತಪ್ಪು ದಾರಿ ಹಿಡಿಸಿದ್ದಾರೆ. ಯಾರಾದರೂ ತಮ್ಮ ಮಾತನ್ನು ಕೇಳದಂತೆ ಜ್ಞಾನ ತಿಳಿದುಕೊಳ್ಳುತ್ತಾನೇನೋ ಎಂಬ ಅನುಮಾನದಿಂದ ಅವರನ್ನೂ ಸಹ ಕಟ್ಟಳೆ ಮಾಡುವುದಕ್ಕೆ ದೇವರು ಹೇಳದ ವಿಧಾನವೆಲ್ಲವನ್ನೂ ಗ್ರಂಥರೂಪ ಮಾಡಿ, ಅವುಗಳಿಗೆ ಹದೀಸುಗಳೆಂದು ಹೆಸರಿಟ್ಟು,

ಖುರಾನ್‌ಗಿಂತ ಮುಸ್ಲೀಮ್‌ರಿಗೆ ಹದೀಸುಗಳೇ ಮುಖ್ಯವೆಂದು ಹೇಳುತ್ತಿದ್ದಾರೆ. ಖುರ್‌ಆನ್ ಗ್ರಂಥವನ್ನು ಮುಂದೆ ಇಟ್ಟುಕೊಂಡು ಕಲಿಸುವುದು, ಬೋಧಿಸುವುದು ಎಲ್ಲಾ ಹದೀಸು ಗ್ರಂಥದಲ್ಲಿರುವುದೇ. ಅದರಿಂದ ಈ ದಿನ ಪ್ರತಿ ಮುಸ್ಲೀಮ್‌ಗೂ ಹದೀಸು ಜ್ಞಾನವೇ ಅಂಟಿಕೊಂಡಿದೆಯಾಗಲೀ, ಖುರ್‌ಆನ್ ಜ್ಞಾನ ಯಾರಿಗೂ ತಿಳಿಯಲಿಲ್ಲ. ಇಲ್ಲಿಯವರೆಗು ನಾವು ಹೇಳಿದ ಮನುಷ್ಯ ಹುಟ್ಟುವಿಕೆ ವಿಷಯ ದಲ್ಲಿಯೂ, ದೇವರು ಭಗವಂತನಾಗಿ (ಮನುಷ್ಯನಾಗಿ) ಅವತರಿಸುತ್ತಾನೆ ಎಂಬ ವಿಷಯದಲ್ಲೂ, ಅನ್ಯದೇವತಾರಾಧನೆ ವಿಷಯದಲ್ಲಿಯೂ, ಅರಬ್ಬೀ ಭಾಷೆ ವಿಷಯದಲ್ಲಿಯೂ, ಹದೀಸುಗಳ ವಿಷಯದಲ್ಲಿಯೂ ಖುರ್‌ಆನ್ ಪ್ರಕಾರ ಮುಸ್ಲೀಮ್‌ರು ನಡೆಯದೆ ಹೋಗುವುದಕ್ಕೆ ಅವರ ಹಿರಿಯರೇ ಕಾರಣ ವೆನ್ನುತ್ತಿದ್ದೇವೆ. ಅಮಾಯಕ ಪ್ರಜೆಗಳಾದ ಮುಸ್ಲೀಮ್‌ರಲ್ಲಿ ಗಂಡಸರೆಲ್ಲರನ್ನೂ ತಮ್ಮ ಕಬಂದ ಹಸ್ತಗಳಲ್ಲಿ ಷರಿಯತ್‌ಗಳೆಂದು, ಹದೀಸುಗಳೆಂದು ಹೇಳುತ್ತಾ ಬಂಧಿಸಿದ್ದಾರೆ. ಗಂಡಸರನ್ನು ಹಾಗೆ ಅವರ ಕೈಯ್ಯಲ್ಲಿ ಇಟ್ಟುಕೊಳ್ಳುವುದೇ ಅಲ್ಲದೆ, ಹೆಂಗಸರನ್ನು ಪೂರ್ತಿ ಅಡುಗೆಮನೆಗೇ ಪರಿಮಿತಿಮಾಡಿ ಕನಿಷ್ಟ ಪ್ರಾರ್ಥನಾ ಮಂದಿರಗಳಿಗು ಸಹ ಬಾರದಂತೆ ಮಾಡಿ ಮೊದಲೇ ಜಾಗ್ರತೆ ಯಿಂದಿದ್ದಾರೆ. ಹೆಂಗಸರನ್ನು ಪೂರ್ತಿ ಸೈತಾನುಗಳಾಗಿ ಹೋಲಿಸಿ ಬಂಧುಗಳು ಸತ್ತುಹೋದರೂ, ಗಂಡ ಸತ್ತುಹೋದರೂ ಸ್ಮಶಾನಕ್ಕೂ ಸಹ ಹೋಗದಂತೆ ಮಾಡಿದ್ದಾರೆ. ಪ್ರಾರ್ಥನಾ ಮಂದಿರಗಳಿಗೆ ಮೊದಲೇ ದೂರ ಮಾಡಿದ್ದಾರೆ. ಮುಸ್ಲೀಮ್‌ರಲ್ಲಿ ಅರ್ಧ ಜನಸಂಖ್ಯೆಯಾಗಿರುವ 80 ಕೋಟಿಮಂದಿ ಹೆಂಗಸರನ್ನು ಎಲ್ಲೂ, ಯಾವ ರಂಗದಲ್ಲೂ ಹೊರಗೆ ಬಾರದಂತೆ ಮಾಡಿದ್ದಾರೆ. ಕೆಲವು ದೇಶಗಳಲ್ಲಿ ವಿದ್ಯಾಭ್ಯಾಸಕ್ಕೂ ಸಹ ದೂರವಾಗಿ ಇಟ್ಟಿದ್ದಾರೆ. ಇದೆಲ್ಲಾ ನೋಡಿದರೇ ಮೊದಲೇ ಪ್ಲಾನ್ ಪ್ರಕಾರ (ಪಥಕದ ಪ್ರಕಾರ) ನಿರ್ಬಂಧಿಸುವುದಕ್ಕೆ ಹಾಗೆ ಮಾಡಿದ್ದಾರೆಂದು ಅರ್ಥವಾಗುತ್ತದೆ. ಮುಸ್ಲೀಮ್‌ರು ಇಲ್ಲಿಯವರೆಗು ಏನೂ ಆಲೋಚಿಸದೇ ಸಮಾಜ, ಮತ ಎಂಬ ಹೆಸರಿನಿಂದ ಬಂಧಿಸಲ್ಪಟ್ಟಿದ್ದಾರೆ. ಮತ ಎಂಬ ಮತ್ತನ್ನು ಕುಡಿಸಿ ಭವಿಷ್ಯತ್ತನ್ನಾಗಲೀ, ದೇವರ ಜ್ಞಾನವಾಗಲೀ ನೆನೆಯದಂತೆ ಮತ ಮತ್ತಿನಲ್ಲಿ ತೂಗುವಂತೆ ಮಾಡಿದ್ದಾರೆ. ಅಷ್ಟೇ ಅಲ್ಲದೆ

ತನ್ನ ಹಿರೆತನವನ್ನು ಬೆಳಸಿಕೊಳ್ಳಬೇಕೆಂದು, ತಮ್ಮ ಸಮಾಜದಲ್ಲಿನ ಅಮಾಯಕ ಮುಸ್ಲೀಮ್‌ರನ್ನು ಬಳಸಿಕೊಂಡು, ಅವರಲ್ಲಿ ಉಗ್ರವಾದ ಬೀಜಗಳನ್ನು ನಾಟಿ ಏನೂ ಅಮಾಯಕ ಪ್ರಜೆಗಳನ್ನು ಸಾಯುವಂತೆ ಮಾಡುತ್ತಾ, ತಾವು ಮಾತ್ರ ಮರೆಯಲ್ಲಿ ಚಕ್ರವನ್ನು ತಿರುಗಿಸುತ್ತಿದ್ದಾರೆ. ಅವರಲ್ಲಿ ಕೆಲವರಿಗೆ ಸ್ವರ್ಗವೊಂದರ ಆಸೆಯನ್ನು ತೋರಿಸಿ ಆತ್ಮಾಹುತಿ ದಳಗಳಾಗಿ ಬದಲಾಯಿಸಿ **"ಸಾಯಿಸು, ಸಾಯಿ"** ಎಂಬ ನಿನಾದವನ್ನು ಕಲಿಸುತ್ತಿದ್ದಾರೆ. ಅವರಲ್ಲಿ ಎರಡನೆಯ ಕೋನವಾಗಿದ್ದ ಉಗ್ರವಾದ ವಿಧಾನವನ್ನು ಈಗ ವಿವರಿಸಿ ಹೇಳಿಕೊಳ್ಳೋಣ. ಈ ದಿನ ಮುಸ್ಲೀಮ್‌ರು ದೇವರ ಮೇಲೆ ವಿಶ್ವಾಸದಿಂದ ಬದುಕುತ್ತಿದ್ದಾರೆ. ಮುಸ್ಲೀಮ್‌ರಲ್ಲಿ ಇರುವ ಆಸ್ತಿಯೆಲ್ಲಾ ದೇವರ ಮೇಲಿನ ವಿಶ್ವಾಸವೇ. ಹಾಗೆ ಇರುವುದು ಯಾರಿಗಾದರೂ ಯಾವ ಮತಸ್ಥನಿಗಾದರೂ ಒಳ್ಳೆಯದೇ. ಆದರೇ ಕೆಲವರು ಅವರಲ್ಲಿನ ವಿಶ್ವಾಸವನ್ನು, ಬಡತನವನ್ನು ಆಯುಧವಾಗಿ ಬಳಸಿಕೊಂಡು, ಅವರನ್ನು ಹಿಂಸೆಗೆ ಪ್ರೇರೇಪಿಸಿ, ತಮ್ಮ ಹಬ್ಬವನ್ನು ಮಾಡಿಕೊಳ್ಳುವವರಿದ್ದಾರೆಂದು ತಿಳಿಸುವುದಕ್ಕೆ, ಮುಸ್ಲೀಮ್‌ರು ಅವರ ಹಸ್ತಗಳಲ್ಲಿ ಸಿಲುಕಿಕೊಳ್ಳದೇ ಇರುವುದಕ್ಕೆ ಎಲ್ಲ ಮತಗಳವರೂ ಐಕ್ಯತೆಯಿಂದ ಬದುಕುತ್ತಾ ಒಂದೇ ದೇವರನ್ನು ಎಲ್ಲರೂ ಆಶ್ರಯಿಸಬೇಕೆನ್ನುವ ಉದ್ದೇಶದಿಂದ, ಭಾರತದೇಶದಲ್ಲಿ ಈಗ ಬೀಜಗಳಾಗಿರುವ ಉಗ್ರವಾದವನ್ನು ಕುರಿತು ಬರೆಯುತ್ತಿದ್ದೇವೆ, ಜಾಗ್ರತೆಯಿಂದ ತಿಳಿದುಕೊಳ್ಳಿ.

1400 ಸಂವತ್ಸರಗಳ ಸಮಯದಲ್ಲಿ ಹುಟ್ಟಿದ ಮುಸ್ಲೀಮ್ (ಇಸ್ಲಾಮ್) ಮತ ಸಂಖ್ಯೆಯಲ್ಲಿ ಹಿಂದೂ, ಕ್ರೈಸ್ತವ ಮತಗಳಿಗಿಂತ ಬಹಳ ಚಿಕ್ಕದು. ಆಗ ಅದು ಶಿಶು ದಶೆಯಲ್ಲಿ ಇತ್ತು. ಎರಡು ಸಾವಿರ (2000) ಸಂವತ್ಸರಗಳ ಪೂರ್ವದಲ್ಲಿ ಕ್ರೈಸ್ತವ ಮತ ಹುಟ್ಟಿದೆ. ಆಗ ಅದು ಶಿಶುದಶೆಯಲ್ಲಿದ್ದು ಇಂದಿಗೆ ಎಷ್ಟೋ ಬೆಳೆದುಹೋಗಿದೆ. ಸೃಷ್ಟ್ಯಾದಿಯಿಂದ ಮತ ಎಂಬ ಹೆಸರಿಲ್ಲದ ಇಂದೂತ್ವವು ಕ್ರೈಸ್ತವ ಮತ ಹುಟ್ಟಿದ ನಂತರ ಇಂದೂಮತವಾಗಿ ಕರೆಯಲಾಗಿದೆ. ಐದು ಸಾವಿರ (5000) ಸಂವತ್ಸರಗಳ ಪೂರ್ವದಲ್ಲಿ ಮೂನ್ನೂರು (300) ಕೋಟಿಗಳಾಗಿದ್ದ ಇಂದೂಗಳ ಜನಸಂಖ್ಯೆ ಇಂದಿಗೆ ನೂರು (100) ಕೋಟಿಗೆ

ಇಳಿದಿದೆ. ಪ್ರತಿ ಸಂವತ್ಸರ ನಾಲ್ಕು (4) ಲಕ್ಷ ಜನರು ಹಿಂದೂಗಳು ಕ್ಷೀಣಿಸಿಹೋಗುವುದು ನಡೆದಿದೆ. ಎರಡು ಸಾವಿರ (2000) ಸಂವತ್ಸರಗಳ ಸಮಯದಲ್ಲಿ ಹುಟ್ಟಿದ ಕ್ರೈಸ್ತವ ಮತ ಈದಿನ ಸುಮಾರು 210 ಕೋಟಿ ಜನ ಸಂಖ್ಯೆಯಲ್ಲಿ ಇರುವಾಗ, ಇಸ್ಲಾಮ್ ಮತ ಸುಮಾರು 162 ಕೋಟಿ ಜನಸಂಖ್ಯೆಯಾಗಿದೆ. ಕ್ರೈಸ್ತರು ಪ್ರತಿ ವರ್ಷ 10,50,000 ಮಂದಿ ಸಂಖ್ಯೆ ಬೆಳೆಯುತ್ತಿರುವಾಗ, ಮುಸ್ಲೀಮ್ ಮತ ಪ್ರತಿ ಸಂವತ್ಸರ 11,45,000 ಮಂದಿ ಸಂಖ್ಯೆ ಬೆಳೆಯುತ್ತಿದೆ. ಪ್ರಪಂಚದಲ್ಲಿ ಅತ್ಯಂತ ವೇಗವಾಗಿ ಬೆಳೆಯುವ ಜನಸಂಖ್ಯೆ ಈ ದಿನ ಮುಸ್ಲೀಮ್‌ರದೇ ಎಂದು ಹೇಳಬಹುದು. ಆದರೇ ಪ್ರಪಂಚದಲ್ಲಿ ಜನಸಂಖ್ಯೆಯಲ್ಲಿ ಕ್ರೈಸ್ತರನ್ನು ದಾಟಿ ಮೊದಲ ಸ್ಥಾನದೊಳಗೆ ಬರುವುದಕ್ಕೆ ಮುಸ್ಲೀಮ್‌ರಿಗೆ ಸುಮಾರು 50 ಸಂವತ್ಸರಗಳು ಬೇಕಾಗಿದೆ. ಆದರೇ ಅಲ್ಲಿಯವರೆಗು ಇರುವ ತಾಳ್ಮೆ ಮುಸ್ಲೀಮ್‌ರಿಗೆ ಇಲ್ಲ. ಆದ್ದರಿಂದ ಯಾವುದೋ ಒಂದು ವಿಧವಾಗಿ ಬೇಗ ಪ್ರಪಂಚ ಜನಸಂಖ್ಯೆಯಲ್ಲಿ ಕ್ರೈಸ್ತವಮತವನ್ನು ಮೀರಿಹೋಗಬೇ ಕೆಂದುಕೊಂಡಿದ್ದಾರೆ. ಪ್ರಪಂಚದಲ್ಲಿ ತಮ್ಮದೇ ಮೊದಲ ಸ್ಥಾನವಾಗಿ ಇರಬೇಕೆಂದು ಕೊಂಡಿದ್ದಾರೆ. ಪ್ರಪಂಚದಲ್ಲಿ ಮೊದಲ ಸ್ಥಾನವಾಗಿ ಇರುವಾಗ ಪ್ರಪಂಚವೆಲ್ಲಾ ಇಸ್ಲಾಮ್ ಸಾಮ್ರಾಜ್ಯವನ್ನಾಗಿ ಮಾಡಬೇಕೆಂದು ಕೊಂಡಿದ್ದಾರೆ. ಪ್ರಪಂಚವೆಲ್ಲವನ್ನೂ ತಮ್ಮ ಹತೋಟಿಯಲ್ಲಿ ಇಟ್ಟುಕೊಳ್ಳಬೇಕೆಂಬ ಉದ್ದೇಶ ಮುಸ್ಲೀಮ್‌ರಲ್ಲಿ ಸ್ವಲ್ಪ ಜನರಿಗೆ ಮಾತ್ರ ಇದೆ.

"ಬೇರುಹುಳ ಸೇರಿ ವೃಕ್ಷವನ್ನೇ ಹಾಳುಮಾಡಿದಂತೆ" ಕೆಲವರು ಮುಸ್ಲೀಮ್‌ರ ದುರಾಲೋಚನೆ ಪ್ರಪಂಚವನ್ನು ಒಟ್ಟು ವಿನಾಶದಕಡೆಗೆ ಎಳೆಯುತ್ತಿದೆ. ಕಳೆದ ಹತ್ತು ಸಂವತ್ಸರಗಳಿಂದ ಮುಸ್ಲೀಮ್ ಮತ ತಮ್ಮ ಜನಸಂಖ್ಯೆಯನ್ನು ಬಹಳ ವೇಗವಾಗಿ ಬೆಳೆಸಿಕೊಳ್ಳುತ್ತಿದೆ. ಪ್ರಪಂಚ ಜನಸಂಖ್ಯೆಯಲ್ಲಿ ತಾವೇ ಮುಂದಿರಬೇಕೆಂದು ಏಕೆ ಅಂದುಕೊಂಡಿದ್ದೀರೋ ಹೇಳುವುದಕ್ಕಿಂತ ಮೊದಲು ಸ್ವಲ್ಪ ಸಮಾಚಾರವನ್ನು ತಿಳಿದುಕೊಳ್ಳೋಣ. ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯನನ್ನು ತನ್ನ ಕಡೆ ಆಕರ್ಷಿಸಿಕೊಳ್ಳುವುದಕ್ಕೆ ಆತನು ಮಾತನಾಡುವ

ಮಾತೇ ಮುಖ್ಯಪಾತ್ರ ವಹಿಸುತ್ತಿದೆ. ಒಬ್ಬ ಮನುಷ್ಯ ಮಾತನಾಡುವ ವಿಧಾನವನ್ನನುಸರಿಸಿ ಮತ್ತೊಬ್ಬ ಮನುಷ್ಯ ಅವನಿಗೆ ಹತ್ತಿರವಾಗುವುದಾಗಲೀ, ದೂರವಾಗುವುದಾಗಲೀ ನಡೆಯುತ್ತದೆ. ಆದ್ದರಿಂದ ಮನುಷ್ಯನಲ್ಲಿನ ಮಾತು ಮಹಾಶಕ್ತಿವಂತವಾದದ್ದೆಂದು ಜ್ಞಾನ ತಿಳಿದ ಹಿರಿಯರು ಹೇಳುವುದು ನಡೆದಿದೆ. ಎದುರಿಗಿರುವ ಮನುಷ್ಯನನ್ನು ವಶ ಮಾಡಿಕೊಳ್ಳುವುದಕ್ಕೆ ಮಾತು ಮಂತ್ರದಂತೆ ಕೆಲಸಮಾಡುತ್ತದೆ. ಆದ್ದರಿಂದ "ವೇಮನಯೋಗಿ" ತನ್ನ ಮಾತುಗಳಲ್ಲಿ ಒಂದು ಮಾತನ್ನು ಈ ರೀತಿ ಹೇಳಿದ್ದಾನೆ. ಅದೇನೆಂದರೆ! **"ಪ್ರತಿ ಎಲೆಯೂ ಔಷಧವೇ, ಪ್ರತಿ ಮಾತೂ ಮಂತ್ರವೇ" ಎಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ "ಮಾತನ್ನು ಮೀರಿದ ಮಂತ್ರವಿಲ್ಲ, ಎಲೆಯನ್ನು ಮೀರಿದ ಔಷಧವಿಲ್ಲ."** ಎಂದು ಹೇಳುವುದು ಸಹ ನಡೆದಿದೆ. ಇದನ್ನನುಸರಿಸಿ ನೋಡಿದರೆ ಮನುಷ್ಯ ತಿಳಿಯದಂತೆ ಮಾತನಾಡುವ ಮಾತಿಗೆ ಎಷ್ಟು ಬೆಲೆ ಇದೆಯೋ ಅರ್ಥವಾಗುತ್ತಿದೆ. ಒಂದು ಮಾತು ಕೆಲವು ಸಮಯಗಳಲ್ಲಿ ವಿಷಯವಾಗಿ ಕೆಲಸಮಾಡಿ, ಮನುಷ್ಯನಿಗೆ ಹಾನಿ ಉಂಟುಮಾಡುತ್ತದೆ. ಮತ್ತೊಂದು ಮಾತು ಕೆಲವು ಸಂದರ್ಭಗಳಲ್ಲಿ ಅಮೃತದಂತೆ ಕೆಲಸ ಮಾಡಿ ನಡೆಯಬೇಕಾಗಿರುವ ವಿನಾಶದಿಂದ ರಕ್ಷಿಸಬಲ್ಲದು. ಇದನ್ನನುಸರಿಸಿ ಮಾತು ಎಂದರೆ ಒಂದು ಕಡೆ ಅಮೃತವೂ ಒಂದು ಕಡೆ ವಿಷವೂ ಬೆರೆತಿದೆಯೆಂದು ಅರ್ಥ.

ಒಂದು ಮಾತನ್ನು ಸರಿಯಾಗಿ ಅರ್ಥ ಮಾಡಿಕೊಂಡರೇ ಅದು ಅಮೃತದಂತೆ ಕೆಲಸ ಮಾಡುತ್ತದೆ. ಅದೇ ಮಾತನ್ನೇ ಸರಿಯಾಗಿ ಅರ್ಥ ಮಾಡಿಕೊಳ್ಳದೇ ಹೋದರೇ ಅದು ವಿಷದಂತೆ ಕೆಲಸ ಮಾಡುತ್ತದೆ. ಉದಾಹರಣೆಗೆ ಒಂದು ಮಾತನ್ನು ಕುರಿತು ಹೇಳಿಕೊಳ್ಳೋಣ. ಒಬ್ಬ ಗುರುವು ಇಬ್ಬರು ವ್ಯಕ್ತಿಗಳನ್ನು ನೋಡಿ ನೀವು ಇಬ್ಬರು ನನಗೆ ನಂಬಿಕಸ್ತರಾಗಿ ಇದ್ದೀರ. ನೀವು ನಾನು ಏನು ಹೇಳಿದರೇ ಅದನ್ನು ತಪ್ಪದೆ ಆಚರಿಸುತ್ತೀರಾ. ಆ ನಂಬಿಕೆಯಿಂದಲೇ ನಿಮ್ಮಿಬ್ಬರಿಗೂ ನಾನು ಒಂದು ಮಾತನ್ನು ಹೇಳುತ್ತೇನೆ. ನೀವು ಆ ಮಾತನ್ನು ಶಾಶ್ವತವಾಗಿ ಆಚರಿಸುತ್ತೀರೆಂದು ಅಂದುಕೊಳ್ಳುತ್ತೇನೆ. ನಾಳೆ ಒಳ್ಳೆಯ ದಿನ ಆ ಮಾತನ್ನು

ನಾಳೆ ಬೆಳಗ್ಗೆ ಸರಿಯಾಗಿ ಆರು ಗಂಟೆಗಳಿಗೆ ಹೇಳುತ್ತೇನೆಂದು ಹೇಳಿದ್ದಾನಂತೆ. ಆಗ ಅಲ್ಲಿರುವ ಇಬ್ಬರೂ ಹಾಗೇ ನಿಮ್ಮ ಮಾತನ್ನು ಶಾಶ್ವಿತವಾಗಿ ಆಚರಿಸುತ್ತೇವೆಂದು ಹೇಳಿದ್ದಾರೆ. ಎರಡನೆಯ ದಿನ ಬೆಳಗ್ಗೆ ಆರು ಗಂಟೆಗೆ ಅಲ್ಲಿಗೆ ಬರಬೇಕೆಂದು ಪ್ರಯತ್ನಮಾಡಿ ಬಂದರೂ, ದಾರಿಯಲ್ಲಿ ಮಳೆ ಬೀಳುವುದರಿಂದ ಸ್ವಲ್ಪ ಮುಂಚೆಯಾಗಿ ಬರದೇ ಹೋದರೂ, ಸರಿಯಾಗಿ ಆರು ಗಂಟೆಗೆ ಅಲ್ಲಿಗೆ ಸೇರಿಕೊಂಡಿದ್ದಾರೆ. ಆ ಸಮಯಕ್ಕೇ ಅವರನ್ನು ಬರಲು ಹೇಳಿದ ಆತನು ಅವರಿಬ್ಬರಿಗಾಗಿ ಕಾದುನೋಡುತ್ತಿದ್ದನು. ಅವರು ಆರು ಗಂಟೆಗಳಿಗೆ ಕಾಣಿಸಿದ ಕೂಡಲೇ ಮುಹೂರ್ತ ದಾಟಿಹೋಗದಂತೆ ಆರು ಗಂಟೆಗಳಿಗೇ ಹೇಳಬೇಕೆಂದು ಆತನು ಹೇಳಬೇಕಾದ ಮಾತನ್ನು ಕೂಡಲೇ ಹೇಳಿ ತನ್ನ ಮಾತನ್ನು ಆಚರಿಸೆಂದು ಹೇಳಿದ್ದಾನೆ. ಆತನು ಖಚಿತವಾದ ಮುಹೂರ್ತ ಕಾಲದಲ್ಲಿಯೇ ಹೇಳಿದ ಮಾತು **"ಹೋಗು ಬಾ ಹೋಗು"**. ಆ ಮಾತನ್ನು ಕೇಳಿದ ಆ ಇಬ್ಬರೂ ಗುರುಗಳಾದ ಆತನ ಮಾತನ್ನು ತಪ್ಪದೆ ಆಚರಿಸಬೇಕೆನ್ನುವ ಉದ್ದೇಶದಿಂದ ಅಲ್ಲಿಂದ ಹೊರಟು ಹೋಗಿದ್ದಾರೆ. ಹಾಗೆ ಹೊರಟುಹೋದ ಇಬ್ಬರಲ್ಲಿ ಒಬ್ಬನು ಪುನಃ ಎರಡನೆಯ ದಿನ ಬಂದಿದ್ದಾನೆ. ಮತ್ತೊಬ್ಬನು ಪುನಃ ಬರಲಿಲ್ಲ. ಒಬ್ಬನು ಮಾತ್ರ ಪ್ರತಿ ದಿನ ತನ್ನ ಗುರು ಹತ್ತಿರಕ್ಕೆ ಬಂದು ನಮಸ್ಕಾರ ಮಾಡಿಕೊಂಡು ಹೋಗುತ್ತಿರುವಾಗ, ಮತ್ತೊಬ್ಬನು ಎಂದಿಗೂ ಅಲ್ಲಿಗೆ ಬರಲಿಲ್ಲ.

ಆಗ ಸುಮಾರು ನಲವತ್ತು ಸಂವತ್ಸರಗಳು ಕಳೆದುಹೋಗಿದೆ. ಆಗ ಗುರುವಿನ ವಯಸ್ಸು ತೊಂಬತ್ತು ಸಂವತ್ಸರಗಳಾಗಿದೆ. ಪೂರ್ತಿ ವೃದ್ಧಾಪ್ಯದಲ್ಲಿ ಗುರುಗಳಿಗೆ ನಲವತ್ತು ಸಂವತ್ಸರಗಳ ಕೆಳಗೆ ತನ್ನ ಹತ್ತಿರದಿಂದ ಹೋಗಿ ಇನ್ನು ತಿರುಗಿ ಬಾರದ ಶಿಷ್ಯನನ್ನು ನೋಡಬೇಕೆಂದೆನಿಸಿ ಗುರುವೇ ಶಿಷ್ಯನನ್ನು ಹುಡುಕುತ್ತಾ ಹೋಗಿದ್ದಾನೆ. ಕೊನೆಗೆ ಶಿಷ್ಯನನ್ನು ನೋಡಿದ್ದಾನೆ. ಆಗ ಶಿಷ್ಯನನ್ನು ನೋಡಿ "ನೀನು ನನ್ನನ್ನು ಬಿಟ್ಟು ಬಂದು ನಲವತ್ತು ವರ್ಷಗಳಾಗಿದೆ. ನೀನು ನನ್ನ ಹತ್ತಿರಕ್ಕೆ ಬಾರದಂತೆ ಏಕೆ ಬಿಟ್ಟಿದ್ದೀಯ?" ಎಂದು ಕೇಳಿದ್ದಾನಂತೆ. ಆಗ ಗುರುಗಳು

ಆ ಮಾತನ್ನು ಕೇಳಿರುವುದಕ್ಕೆ ಶಿಷ್ಯನು ಪೂರ್ತಿ ಕೋಪಬಂದಿರುವವನಾಗಿ ”ಹೋಗು ಬಾ ಹೋಗು” ಎಂದು ಆ ದಿನ ಹೇಳಿ, ಈಗ ಏಕೆ ಬರಲಿಲ್ಲವೆಂದು ಕೇಳುತ್ತೀಯಾ! ಎಂದು ಗುರುವನ್ನು ಗದರಿಸಿ ಮಾತನಾಡಿ, ಕೋಪವನ್ನು ತಾಳಲಾರದೆ ಮುಷ್ಟಿ ಹಿಡಿದು ಗುರುಗಳ ತಲೆಯಮೇಲೆ ಗುದ್ದಿದನು. ಶಿಷ್ಯನು ಗುದ್ದಿದ ಗುದ್ದಿಗೆ ಮುದುಕನಾದ ಗುರುವು ಕೆಳಗೆ ಬಿದ್ದು ಪ್ರಾಣಬಿಟ್ಟನು. ಅಷ್ಟರಲ್ಲಿಯೇ ಗುರುವಿನ ಹಿಂದೆ ಬಂದಿರುವವರು ಗುರುಗಳ ಶವವನ್ನು ತೆಗೆದುಕೊಂಡು ಹೋಗಿ, ಶಿಷ್ಯನೇ ತಲೆಯ ಮೇಲೆ ಗುದ್ದಿ ಸಾಯಿಸಿದ್ದಾನೆಂದು ನ್ಯಾಯಸ್ಥಾನದಲ್ಲಿ ನ್ಯಾಯವನ್ನು ಕೋರುತ್ತಾ ಶಿಷ್ಯನ ಮೇಲೆ ಫಿರ್ಯಾದು ಮಾಡಿದ್ದಾರೆ. ಆಗ ನ್ಯಾಯಧಿಪತಿ ಗುರುವನ್ನು ಸಾಯಿಸಿದ ಶಿಷ್ಯನನ್ನು ಕರೆದು ವಿಚಾರಿಸಿದನು. ಆಗ ತನಗೆ ನಲವತ್ತು ವರ್ಷಗಳಿರುವಾಗ ಗುರುವು ಮಾಡಿದ ಮೋಸವನ್ನು ಕುರಿತು ಹೇಳಿದ್ದಾನೆ. ನ್ಯಾಯಾಧಿಪತಿ ಆ ವಿಷಯವನ್ನು ಸಮಗ್ರವಾಗಿ ವಿಚಾರಿಸಬೇಕೆಂದು, ನಲವತ್ತು ಸಂವತ್ಸರಗಳ ಸಮಯದಲ್ಲಿದ್ದ ಮತ್ತೊಬ್ಬ ಶಿಷ್ಯನನ್ನು ಸಹ ಕರೆದು ಕೇಳಿದ್ದಾನೆ. ಆಗ ಮೊದಲ ಶಿಷ್ಯನು ನಮ್ಮ ಗುರುಗಳು ಯಾರನ್ನೂ ಮೋಸಮಾಡಲಿಲ್ಲ. ನಮ್ಮ ವಿದ್ಯಾಭ್ಯಾಸವೆಲ್ಲಾ ಮುಗಿದ ನಂತರ ನಾವು ಗುರುಗಳ ಹತ್ತಿರವೇ ಇರಬೇಕಾದ ಅವಶ್ಯವಿಲ್ಲವೆಂದು, ಆಗಾಗ ಬಂದು ಹೋಗಿ ಎಂದು ನಮ್ಮ ಗುರುಗಳು ನಮ್ಮಿಬ್ಬರಿಗೂ 'ಹೋಗು ಬಾ ಹೋಗು' ಎಂದಿದ್ದಾನೆ. ನಮ್ಮ ಗುರುಗಳು ಹೇಳಿದ ಮಾತಿನ ಪ್ರಕಾರ ನಾನು ಹೋಗಿದ್ದೇನೆ ಪುನಃ ಬಂದಿದ್ದೇನೆ. ಹಾಗೇ ಇಂದಿಗೂ ಅಲ್ಲಿಗೆ ಹೋಗಿ ಬರುತ್ತಾ ಗುರುಗಳ ಮಾತನ್ನು ತಪ್ಪದೆ ಪ್ರವರ್ತಿಸುತ್ತಿದ್ದೇನೆ. ನಮ್ಮ ಗುರುಗಳು ಹೇಳಿದ ಮಾತು ನನ್ನ ಜೊತೆಯಲ್ಲಿರುವ ಶಿಷ್ಯನಿಗೆ ಅರ್ಥವಾಗದೆ, ಆತನು ಹೋದಾಗಿನಿಂದ ಇಲ್ಲಿಯವರೆಗು ಬರಲಿಲ್ಲ. ಮೇಲಾಗಿ ಗುರುವು ತನ್ನನ್ನು ಮೋಸಮಾಡಿದ್ದಾನೆಂದು ಗುರುಗಳ ಮೇಲೆಯೇ ದಾಳಿ ಮಾಡಿ ಆತನ ಮರಣಕ್ಕೆ ಕಾರಣವಾಗಿದ್ದಾನೆಂದು ಹೇಳಿದಾಗ ಆಗ ಗುರುಗಳು ಹೇಳಿದ ಮಾತು ನಿನಗೇನೆಂದು ಅರ್ಥವಾಗಿದೆಯೆಂದು ನ್ಯಾಯಾಧಿಪತಿ ಕೇಳಿದ್ದಾನೆ. ಜಡ್ಜಿ ಕೇಳಿದ ಮಾತಿಗೆ ಕೂಡಲೇ ಮೊದಲ ಶಿಷ್ಯನು ಹೀಗೆ ಸಮಾಧಾನವನ್ನು ಹೇಳಿದ್ದಾನೆ. “ನನ್ನನ್ನು

ಆಗ ಅಲ್ಲಿಂದ ಹೋಗಬಹುದೆಂದು "ಹೋಗು" ಎಂದಿದ್ದಾನೆ. ಹೋದವನು ಪುನಃ ಬರುವಂತೆ "ಬಾ" ಎಂದಿದ್ದಾನೆ. ಬಂದಿರುವ ನಾವು ಅಲ್ಲೇ ಇರದೇ ತಿರುಗಿ ಹೋಗಬೇಕೆಂದು ಬಾ ನಂತರ "ಹೋಗು" ಎಂದಿದ್ದಾನೆ. ನೀವು ಹೋಗಿ ನಂತರ ಬಂದು ಪುನಃ ಹೋಗುತ್ತಿರಿ ಎಂದು ನಮಗೆ ಅರ್ಥವಾಗುವಂತೆ 'ಹೋಗು ಬಾ ಹೋಗು' ಎಂದು ಐದು ಅಕ್ಷರಗಳ ಪದವನ್ನು ಹೇಳಿದರೇ, ಅವುಗಳನ್ನು ಎಂದರೆ ಆ ಮಾತನ್ನು ನಾನು ಅರ್ಥ ಮಾಡಿಕೊಂಡು ಗುರುಗಳು ಹೇಳಿದಂತೇ ಮಾಡುತ್ತಾ ಬಂದಿದ್ದೇನೆ. ನನಗೆ ವಿರಾಮ ಸಿಕ್ಕಿದಾಗಲೆಲ್ಲಾ ಗುರುಗಳ ಹತ್ತಿರಕ್ಕೆ ಹೋಗಿ ಪುನಃ ಬರುತ್ತಿದ್ದೆನು. ಆದರೆ ನನ್ನ ಜೊತೆಗಿರುವ ಶಿಷ್ಯನಿಗೆ ಗುರುಗಳು ಹೇಳಿದ ಮಾತು ಅರ್ಥವಾಗದೆ ಆತನು ಪುನಃ ಬರಲಿಲ್ಲ" ಎಂದು ಹೇಳಿದ್ದಾನೆ.

ಆ ಸಮಾಚಾರವನ್ನೆಲ್ಲಾ ಸಾಕ್ಷಿಯಾಗಿ ಕೇಳಿಸಿಕೊಂಡ ಜಡ್ಜಿಯವರು ಅಪರಾಧಿಯಾಗಿರುವ ಶಿಷ್ಯನನ್ನು ವಿಚಾರಿಸಿದಾಗ ಆತನು ಹೀಗೆ ಹೇಳಿದ್ದಾನೆ. "ಗುರುಗಳು ಇಬ್ಬರು ಶಿಷ್ಯರನ್ನು ಎರಡನೆಯ ದಿನ ಬೆಳಗ್ಗೆ ಆರು ಗಂಟೆಗಳಿಗೆ ಬರಲು ಹೇಳುವುದರಿಂದ ನಾವು ಸರಿಯಾದ ಸಮಯಕ್ಕೆ ಅಲ್ಲಿಗೆ ಹೋಗಿದ್ದೇವೆ. ಗುರುಗಳ ಮಾತನ್ನು ತಪ್ಪದೆ ಕೇಳಬೇಕೆಂದು ಹೇಳಿದ ಆತನು, ನಾವು ಅಲ್ಲಿಗೆ ಹೋಗುತ್ತಲೇ ನಮ್ಮನ್ನು ನೋಡಿ "ಹೋಗು ಬಾ ಹೋಗು" ಎಂದಿದ್ದಾನೆ. ಆತನು ತನ್ನ ಮಾತಲ್ಲಿ ಎರಡು ಬಾರಿ ಹೋಗಲು ಹೇಳುವುದರಿಂದ, ನಂತರ ನಮ್ಮನ್ನು ಶಿಷ್ಯರೆಂದುಕೊಳ್ಳದೇ ಕನಿಷ್ಟ ಹೆಸರಿಂದಲೂ ಸಹ ಕರೆಯದಂತೆ, 'ಹೋಗು' ಎಂದು ಹೇಳಿ ನಂತರ 'ಹೋಗು' ಎನ್ನುವುದರಿಂದ, ನಂತರ ತನ್ನ ಹತ್ತಿರಕ್ಕೆ ಬರಬೇಡವೆಂದು ಹೇಳಿದಂತೆ ಅರ್ಥವಾಗಿದೆ. ಆತನ ಮಾತಿನಲ್ಲಿನ ಭಾವವನ್ನು ಗ್ರಹಿಸಿದ ನಾನು ಆತನ ಮಾತನ್ನು ಆಚರಿಸಬೇಕೆಂಬ ಗೌರವದಿಂದ ಅಂದಿನಿಂದ ಇಂದಿನವರೆಗು ಗುರುಗಳ ಹತ್ತಿರಕ್ಕೆ ಹೋಗಲಿಲ್ಲ. ಆದರೂ ಕೆಲವು ಸಂವತ್ಸರಗಳು ಆತನ ಸೇವೆ ಮಾಡಿದ ನಾನು, ಏನು ತಪ್ಪು ಮಾಡದೇ ತನ್ನ ಹತ್ತಿರಕ್ಕೆ ಬರಬೇಡವೆಂದು ಬಹಿಷ್ಕರಿಸಿದಂತಾಯಿತು. ಆಗ ಗುರು ಎಂಬ

ಭಾವದಿಂದ ಆತನ ಮಾತನ್ನು ಗೌರವಿಸಿ ನಾನು ಅಲ್ಲಿಗೆ ಹೋಗದಂತೆ ನಿಜಾಯಿತೀಯಾಗಿ ಆತನ ಮಾತನ್ನು ಕೇಳಿ ಆಚರಿಸಿದ್ದೇನೆ. ಆದರೇ ಈಗ ಬಂದು ನಾನು ಆತನ ಮಾತನ್ನು ಕೇಳದಂತೆ ಆತನು ಹೋಗೆಂದು ಹೇಳದಂತೆ ಏಕೆ ನನ್ನ ಹತ್ತಿರಕ್ಕೆ ಬರಲಿಲ್ಲವೆಂದು ಕೇಳುವುದರಿಂದ ನನಗೆ ಕೋಪಬಂದು ಆವೇಶವನ್ನು ಸಹಿಸಿಕೊಳ್ಳಲಾರದೆ ಹೊಡೆದಿದ್ದೇನೆ." ಎಂದು ಹೇಳಿದ್ದಾನೆ. ಅಗ ಜಡ್ಜಿಯವರು ಎರಡನೆಯ ಶಿಷ್ಯನು ಗುರು ಹೇಳಿದ ಮಾತನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ತಪ್ಪಾಗಿ ಅರ್ಥೈಸಿಕೊಂಡಿದ್ದಾನೆಂದು, ಗುರು ಹೇಳಿದ ಮಾತಿನಲ್ಲಿನ ಹೋಗು,ಬಾ,ಹೋಗು ಎಂಬ ಐದು ಅಕ್ಷರಗಳನ್ನು ತಪ್ಪಾಗಿ ಅರ್ಥ ಮಾಡಿಕೊಂಡು ಗದರಿಸಿ ಹೋಗು ಎಂದಂತೆ, ಇನ್ನು ಪುನಃ ತನ್ನ ಹತ್ತಿರಕ್ಕೆ ಬರಬೇಡವೆಂದು ಬೆಸರಗೊಂಡು ಹೇಳಿದಂತೆ ಅರ್ಥ ಮಾಡಿಕೊಂಡಿರುವು ದರಿಂದ, ಹೇಳಿದ ವಿಷಯವೇನೋ ಆತನಿಗೆ ಅವಗಾಹನೆ ಆಗದಿರುವುದರಿಂದ ಅರ್ಥ ಹೋಗಿ ಅನರ್ಥವಾಗಿದೆ. ಆತನಿಗೆ ತಿಳಿದ ಅನರ್ಥದಿಂದ ಕೊನೆಗೆ ಅದು ಹಿಂಸೆಯಾಗಿ ಬದಲಾಗಿದೆ. ಆತನಿಗೆ ಗುರು ಕೆಟ್ಟದ್ದನ್ನು ಹೇಳದಿದ್ದರೂ ತನಗೆ ಅನ್ಯಾಯ ಮಾಡಿದಂತೆ ತಿಳಿದಿದ್ದಾನೆ. ಕೆಟ್ಟದಾಗಿ ಅರ್ಥ ಮಾಡಿ ಕೊಂಡಿದ್ದಾನೆ.

ಗುರುಗಳು ಹೇಳಿರುವ ಒಂದೇ ಮಾತನ್ನು ಇಬ್ಬರು ಶಿಷ್ಯರು ಹೇಗೆ ಎರಡು ವಿಧಗಳಲ್ಲಿ ಅರ್ಥ ಮಾಡಿಕೊಂಡಿದ್ದಾರೋ, ಹಾಗೇ ದೇವರು ಹೇಳಿದ ಒಂದೇ ಮಾತನ್ನು ಎರಡು ಮತಗಳವರು, ಎರಡು ವಿಧಗಳಲ್ಲಿ ಯಾರಿಗೆ ಅವರು ಅರ್ಥ ಮಾಡಿಕೊಳ್ಳುವುದರಿಂದ, ಮನುಷ್ಯರ ಮಧ್ಯದಲ್ಲಿ ಹಿಂಸೆ ಜಾಗ ಮಾಡಿಕೊಳ್ಳುತ್ತಿದೆ. ಒಬ್ಬರು ಒಳ್ಳೆಯ ಭಾವದಿಂದ ಹೇಳಿದ ಮಾತು ಇನ್ನೊಬ್ಬನಿಗೆ ಕೆಟ್ಟ ಭಾವದಿಂದ ಅರ್ಥವಾದರೇ, ಹೇಳಿದವನ ಮೇಲೆ ಮನುಷ್ಯನಿಗಿರುವ ಸ್ನೇಹ ಹೋಗಿ ಶತ್ರುತ್ವ ಉಂಟಾಗುತ್ತದೆ. ಅದೇ ಮಾತು ಒಳ್ಳೆಯದಾಗಿ ಅರ್ಥವಾದರೇ ಶತ್ರುತ್ವ ಹೋಗಿ ಸ್ನೇಹ ಏರ್ಪಡುತ್ತದೆ. ಒಂದು ಮಾತು ಎದುರಿಗಿರುವ ಮನುಷ್ಯನನ್ನು ಬದಲಾಯಿಸುವ ಪ್ರಭಾವವಿರುವುದಾಗಿ

ಇರುವುದರಿಂದ, ಮಾತನ್ನು ಮಂತ್ರ ಎಂದಿದ್ದಾರೆ. ದೇವರಿಗೆ ಸಂಬಂಧಿಸಿದ ಮಾತು ಅರ್ಥವಾದರೇ ಅದು ಮನುಷ್ಯನಿಗೆ ಜ್ಞಾನವಾಗಿ ಕಾಣಿಸುತ್ತದೆ. ಅರ್ಥ ವಾಗದೇ ಹೋದರೇ ಅಜ್ಞಾನವಾಗಿ ಕಾಣಿಸುತ್ತದೆ. ದೇವರು ತನ್ನ ಜ್ಞಾನವನ್ನು ಮೂವರಿಗೆ ಮೂರು ಬಾರಿ ಹೇಳಿದ್ದಾನೆ. ಹೇಳಿದವನು ಒಬ್ಬನೇ, ಹೇಳಿರುವುದು ಒಂದೇ ಜ್ಞಾನವನ್ನೇ. ಆದರೇ ಕೇಳಿದವರು ಮೂವರು ಆಗಿರುವುದರಿಂದ, ಅವರು ಬೇರೆಬೇರೆಯಾಗಿ ಬೇರೆಬೇರೆ ಸಮಯಗಳಲ್ಲಿ ಕೇಳುವುದರಿಂದ, ಕೇಳಿದ ಮೂವರು ಒಂದೇ ಜ್ಞಾನವನ್ನೇ ಮೂರು ವಿಧಗಳಲ್ಲಿ ಅರ್ಥ ಮಾಡಿಕೊಂಡಿದ್ದಾರೆ. ದೇವರು ಮನುಷ್ಯನೊಂದರ ಸಾವು ಹುಟ್ಟುಗಳನ್ನು ಕುರಿತು ಹೇಳಿದರೇ, ಮನುಷ್ಯರು ಆ ಮಾತನ್ನು ಎರಡು ವಿಧಗಳಲ್ಲಿ ಅರ್ಥ ಮಾಡಿಕೊಳ್ಳುವುದು ನಡೆದಿದೆ. ಕೆಲವರು ಮನುಷ್ಯ ಒಂದು ಬಾರಿ ಹುಟ್ಟಿ, ಒಂದು ಬಾರಿ ಮಾತ್ರವೇ ಸಾಯಬಲ್ಲನೆಂದು, ಅದೇ ವಿಷಯವನ್ನೇ ಸಾವು ಹುಟ್ಟುಗಳೆಂದು ದೇವರು ಹೇಳಿದ್ದಾನೆಂದು ಎನ್ನುತ್ತಿದ್ದಾರೆ. ಮತ್ತೆ ಕೆಲವರೇನೊ ಮನುಷ್ಯ ಸತ್ತ ನಂತರ ಪುನಃ ಹುಟ್ಟುವನೆಂದು ತಿಳಿಸುತ್ತಾ, ದೇವರು ಸತ್ತು ಹುಟ್ಟುವುದು ಎಂದು ಮನುಷ್ಯರನ್ನು ಕುರಿತು ಹೇಳಿದ್ದಾನೆಂದು ಅನ್ನುತ್ತಿದ್ದಾರೆ.

ಒಂದು ಗುಂಪಿನವರು (ಒಂದು ಮತದವರು) ಸಾವು ಹುಟ್ಟುವುದೆಂದೂ, ಒಂದು ಸಾವು ಒಂದು ಹುಟ್ಟುವಿಕೆಯನ್ನು ಕುರಿತು ದೇವರು ಹೇಳಿದ್ದಾನೆ, ಅಂದರೇ ಮನುಷ್ಯ ಒಂದುಬಾರಿಯೇ ಹುಟ್ಟಿ ಒಂದುಬಾರಿಯೇ ಸತ್ತುಹೋಗುವನೆಂದೂ ಅನ್ನುತ್ತಿದ್ದಾರೆ. ಮತ್ತೊಂದು ಗುಂಪಿನ(ಮತದ)ವರು ದೇವರ ಮಾತನ್ನು ಚೆನ್ನಾಗಿ ಪರಿಶೀಲಿಸಿ ನೋಡಿದರೇ ಮೊದಲು ಸಾವು, ನಂತರ ಹುಟ್ಟುವಿಕೆ ಎಂದು ಹೇಳಿರುವುದರಿಂದ, ನಾವು ಈಗ ಬದುಕಿದ್ದೇವೆ ಆದ್ದರಿಂದ ನಂತರ ಬರುವುದು ಸಾವುಯೆಂದೂ, ಸಾವು ಎಂದು ಹೇಳಿದ ನಂತರ ಹುಟ್ಟುವಿಕೆ ಎಂದು ಇರುವುದರಿಂದ, ಸತ್ತುಹೋದವನು ಹುಟ್ಟುವನೆಂದು ವರಸೆ ಕ್ರಮವನ್ನನುಸರಿಸಿ ಅರ್ಥವಾಗಿದೆಯೆಂದು ಹೇಳಬಹುದು. ಸಾವು ನಂತರ ಹುಟ್ಟುವಿಕೆ ಅಂದರೇ ಮನುಷ್ಯ ಎಷ್ಟು ಜನ್ಮಗಳೆತ್ತಿದರೂ ಸಾಯುವುದು ಪುನಃ

ಹುಟ್ಟುವುದು ನಡೆಯುತ್ತದೆಂದು ತಿಳಿಯುತ್ತಿದೆ. ಹಾಗಲ್ಲದೆ ಅದೇ ಪದವನ್ನು ಒಂದು ಸಾವು ಒಂದು ಹುಟ್ಟುವಿಕೆ ಎಂದು ಲೆಕ್ಕಿಸಿ ಅರ್ಥ ಮಾಡಿಕೊಂಡರೇ ಒಂದು ಬಾರಿ ಹುಟ್ಟಿ ಒಂದು ಬಾರಿ ಸತ್ತುಹೋಗುವುದು ಹೊರತು ಮನುಷ್ಯನಿಗೆ ಜನ್ಮಗಳು ಇಲ್ಲ ಎಂದು ಹೇಳಬಹುದು. ಹೀಗೆ ಒಂದೇ ವಾಕ್ಯ ಎರಡು ವಿಧಗಳಲ್ಲಿ ಅರ್ಥ ಕೊಡುವುದು ನಡೆಯುತ್ತಿದೆ. ಅದೇ ವಿಧವಾಗಿ ದೇವರ ಜ್ಞಾನದಲ್ಲಿ ಅನೇಕ ಪದಗಳು, ಅನೇಕ ವಾಕ್ಯಗಳು ಎರಡು ವಿಧಗಳಲ್ಲಿ ಅರ್ಥ ಕೊಡುತ್ತಿವೆ. ಇಂತಹ ದ್ವಂದ್ವ ಅರ್ಥಗಳಿರುವ ಕಡೆ ಏಕಪಕ್ಷ ನಿರ್ಣಯ ತೆಗೆದುಕೊಳ್ಳದಂತೆ ಜಾಗ್ರತೆಯಿಂದ ಯೋಚಿಸಬೇಕು. ಅರ್ಥವಾಗದೇ ಹೋದರೇ ಇತರರೊಂದಿಗೆ ಚರ್ಚಿಸಿ ತಿಳಿದುಕೊಳ್ಳಬೇಕು. ಒಬ್ಬನೇ ವ್ಯಕ್ತಿ ತನ್ನ ಶಿಷ್ಯರಿಗೆ ಹೇಳಿದ ಒಂದೇ ಪದ ಕೇವಲ ಐದು ಅಕ್ಷರಗಳು "ಹೋಗುಬಾಹೋಗು" ಎನ್ನುವವು ಯಾವ ವಿಧವಾಗಿ ಇಬ್ಬರಿಗು ಎರಡು ವಿಧಗಳಲ್ಲಿ ಅರ್ಥವಾಗಿವೆಯೋ, ಹಾಗೇ ಸಾವು ಹುಟ್ಟುಗಳು ಎಂಬ ಒಂದೇ ಪದ ಎರಡು ಮತಗಳವರಿಗೂ ಬೇರೆಬೇರೆಯಾಗಿ ಅರ್ಥವಾಗಿ ಒಬ್ಬನು ಒಂದೇ ಬಾರಿ ಸತ್ತು ಹುಟ್ಟುವನೆಂದು ಹೇಳಿದರೇ, ಮತ್ತೊಬ್ಬರು ಹಾಗಲ್ಲ ಸಾವು ಹುಟ್ಟುಗಳು ಮನುಷ್ಯನಿಗೆ ಶಾಶ್ವತವಾಗಿ ಇವೆ ಎನ್ನುತ್ತಿದ್ದಾರೆ. ದೇವರು ಹೇಳಿದಂತೆ ಮೊದಲು ಸಾವು ನಂತರ ಹುಟ್ಟುವಿಕೆ ಆದರೇ ಸಾವುಹುಟ್ಟುಗಳು ಶಾಶ್ವತವಾಗಿ ಇರುವಂತೇ ಅಲ್ಲವೆ! ಎಂದು ಅನ್ನುತ್ತಿದ್ದಾರೆ. ಇಲ್ಲಿ ಸಾವುಹುಟ್ಟುಗಳ ವಿಷಯದಲ್ಲಿ ಮನುಷ್ಯರು ಎರಡು ಗುಂಪುಗಳಾಗಿ ಬೇರ್ಪಟ್ಟು ಯಾರಮಾತು ಅವರಿಗೆ ಸತ್ಯ ಎನ್ನುತ್ತಿದ್ದಾರೆ. ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೇ ಒಂದು ಮಾತು ಯಾವುದಾದರೂ ಸರಿಯಾಗಿ ಅರ್ಥವಾಗದೇ ಹೋದರೇ ಅದು ವಿರುದ್ಧ ಭಾವವನ್ನುಂಟುಮಾಡಿ ನನ್ನದು ಸತ್ಯವೆಂದರೇ, ನನ್ನದು ಸತ್ಯ ಅನಿಸುತ್ತದೆ. ಆಗ ಒಬ್ಬರಮೇಲೆ ಮತ್ತೊಬ್ಬರು ಆಧಿಕಾರವನ್ನು ಪ್ರದರ್ಶಿಸಿ ತನ್ನ ಮಾತನ್ನೇ ನೆಗ್ಗಿಸಿಕೊಳ್ಳಬೇಕೆಂದು ನೋಡುವರು. ಆಗ ನನಗೆ ಇತರರಿಗಿಂತ ಹೆಚ್ಚಾಗಿ ತಿಳಿದಿದೆಯೆಂಬ ಗರ್ವ ಮನುಷ್ಯನಲ್ಲಿ ಹುಟ್ಟುತ್ತದೆ. ಗರ್ವ ಹುಟ್ಟಿದ ನಂತರ ತನ್ನ ಮಾತನ್ನು ಅಲ್ಲಗಳೆದವನ ಮೇಲೆ ಅಸೂಯೆ ಹುಟ್ಟುತ್ತದೆ. ಅಸೂಯೆ ನಂತರ ಕೋಪ ಹುಟ್ಟುತ್ತದೆ. ಮನುಷ್ಯನ

ತಲೆಯಲ್ಲಿ ಕೋಪ ಹುಟ್ಟುವುದರಿಂದ ಅದು ಹೊರಗಿನ ಪ್ರಪಂಚದಲ್ಲಿ ಹಿಂಸೆಯಾಗಿ ಬದಲಾಗುತ್ತದೆ. ಆಗಲೇ ಭೂಮಿಮೇಲೆ ಉಗ್ರವಾದ ಬೀಜಗಳು ಹುಟ್ಟುತ್ತಿವೆ.

ಪ್ರಪಂಚ ಜ್ಞಾನ, ಪರಮಾತ್ಮ ಜ್ಞಾನ ಎಂದು ಎರಡು ವಿಧಗಳ ಜ್ಞಾನ ಭೂಮಿಮೇಲೆ ಇದೆ. ಪ್ರಪಂಚ ಜ್ಞಾನವನ್ನು ಪ್ರಾಥಮಿಕ ಪಾಠಶಾಲೆಯೊಂದಿಗೆ ಆರಂಭಗೊಂಡು ವಿಶ್ವವಿದ್ಯಾಲಯಗಳವರೆಗು ಕಲಿಸುತ್ತಿರುವುದರಿಂದ ಮತ್ತು ಪ್ರಪಂಚ ಜ್ಞಾನಕ್ಕೆ ನಾಲ್ಕು ಶಾಸ್ತ್ರಗಳು ಇರುವುದರಿಂದ ಒಬ್ಬರು ಕಲಿತಿರುವುದನ್ನು ಮತ್ತೊಬ್ಬರು ಕಲಿಯುತ್ತಿದ್ದಾರೆ. ಪ್ರಪಂಚ ಜ್ಞಾನದಲ್ಲಿ ಎಲ್ಲಿಯೂ ಕಾರಭಾರಿಗಳಾಗಲೀ, ಛಲಗಳಾಗಲೀ ನಾನು ದೊಡ್ಡವ ಎನ್ನುವುದಾಗಲೀ ಇರುವುದಿಲ್ಲ. ಒಬ್ಬ ಪರಮಾತ್ಮನ ಜ್ಞಾನವನ್ನು ಕಲಿಸುವ ಕಾಲೇಜೀಗಳು, ಯೂನಿವರ್ಸಿಟೀಗಳು ಇಲ್ಲದಿರುವುದರಿಂದ, ಪರಮಾತ್ಮ ಜ್ಞಾನಕ್ಕೆ ಒಂದು ಶಾಸ್ತ್ರ ಇದೆಯೆಂದು ತಿಳಿಯದೇ ಹೋಗುವುದರಿಂದ ಯಾರಿಗೆ ತಿಳಿದಿರುವುದನ್ನು ಅವರು ಜ್ಞಾನ ಎಂದುಕೊಳ್ಳುವುದು ನಡೆಯುತ್ತಿದೆ. ಅಷ್ಟೇ ಅಲ್ಲ ಜ್ಞಾನದಲ್ಲಿ ನಾನು ದೊಡ್ಡವ ಎಂದರೆ ಅಲ್ಲ ನಾನು ದೊಡ್ಡವ ಎಂದು ಅಂದುಕೊಳ್ಳುವುದು ನಡೆಯುತ್ತಿದೆ. ಯಾರಿಗೆ ಅವರು ನಾನು ಜ್ಞಾನಿ ಎಂದುಕೊಳ್ಳುವುದರಿಂದ ಎರಡನೆಯವನನ್ನು ಅಜ್ಞಾನಿಯಾಗಿ ಹೇಳುತ್ತಿದ್ದಾನೆ. ಆಗ ಮನುಷ್ಯರ ಮಧ್ಯ ಗರ್ವ, ಅಸೂಯೆ, ಕೋಪಗಳು ಹುಟ್ಟುತ್ತಿವೆ. ಆಗಲೇ ಹಿಂಸೆಗೆ ದಾರಿ ಏರ್ಪಡುತ್ತಿದೆ. ಪ್ರಪಂಚ ಜ್ಞಾನಕ್ಕೆ ಸಂಬಂಧಿಸಿದ ಪ್ರಪಂಚ ವಿಷಯಗಳಿಗೆ ಇದು ನ್ಯಾಯ, ಇದು ಅನ್ಯಾಯ ಎಂದು ನಿರ್ಣಯ ಮಾಡುವ ಕಾನೂನು, ಕೋರ್ಟ್‌ಗಳು (ನ್ಯಾಯಸ್ಥಾನಗಳು) ಇವೆ. ಆದರೇ ಪರಮಾತ್ಮ ಜ್ಞಾನಕ್ಕೆ ಸಂಬಂಧಿಸಿದ ಧರ್ಮಗಳನ್ನು, ಅಧರ್ಮಗಳನ್ನು ನಿರ್ಣಯ ಮಾಡುವ ಕಾನೂನಾಗಲೀ, ಕೋರ್ಟುಗಳಾಗಲೀ ಇಲ್ಲ. ಆದ್ದರಿಂದ ಯಾರಿಗೆ ತಿಳಿದಿರುವುದನ್ನು ಅವರು ಧರ್ಮ ಎಂದುಕೊಳ್ಳುವುದು, ಇತರರಿಗೆ ತಿಳಿದಿರುವುದೆಲ್ಲಾ ಅಧರ್ಮ ಎಂದು ಅಂದುಕೊಳ್ಳುವುದು ನಡೆಯುತ್ತಿದೆ.

ದೈವಜ್ಞಾನ ವಿಷಯದಲ್ಲಿ ಇಂತಹ ಲೋಪವಿರುವುದರಿಂದ, ಇದು ಧರ್ಮ ಎಂದು ತೀರ್ಮಾನಿಸಿ ಹೇಳುವವರು ಯಾರೂ ಇಲ್ಲದಿರುವುದರಿಂದ,

ದೇವರ ಜ್ಞಾನವನ್ನು ದೇವರೇ ನಿರ್ಣಯಿಸಿ ಹೇಳಬೇಕಾಗಿರುವುದರಿಂದ, ದೇವರ ವಿಷಯದಲ್ಲಿ ಅಜ್ಞಾನಿಗಳು ಸಹಿತ ತಲೆತೂರಿಸಿ ನಾವು ಹೇಳುವುದು ಜ್ಞಾನ ಎಂದು ಅನ್ನಬಹುದು. ಇಲ್ಲೇ ಕೆಲವರು ತಮ್ಮ ಆಧಿಕಾರವನ್ನು ಸಂಪಾದಿಸಿಕೊಳ್ಳಬೇಕೆಂದುಕೊಳ್ಳುತ್ತಿದ್ದಾರೆ. ಜನಸಂಖ್ಯೆಯಲ್ಲಿ ಅಧಿಕವಾಗಿರುವ ಕ್ರೈಸ್ತವಮತವನ್ನು ದಾಟುವುದಕ್ಕೆ ಎರಡನೆ ಸ್ಥಾನದಲ್ಲಿರುವ ಮುಸ್ಲೀಮ್‌ರು ಪ್ರಯತ್ನ ಮಾಡುತ್ತಿದ್ದಾರೆನ್ನುವುದು ಪೂರ್ತಿ ಸತ್ಯ. ಸಂಖ್ಯೆಯನ್ನು ಬೆಳೆಸಿ ಮತವನ್ನು ಬಲಗೊಳಿಸಬೇಕೆಂದು ಮಾಡುವುದಕ್ಕೆ ಮುಸ್ಲೀಮ್‌ರು ಎರಡು ವಿಧಾನಗಳನ್ನು ಅನುಸರಿಸುತ್ತಿದ್ದಾರೆ. ತಮ್ಮ ಬೋಧನೆಯನ್ನು ಬೋಧಿಸಿ, ತಮ್ಮ ಬೋಧನೆಗಳಿಗೆ ಆಕರ್ಷಿತರನ್ನಾಗಿ ಮಾಡಿ, ಇತರರನ್ನು ತಮ್ಮ ಮತದಲ್ಲಿ ಸೇರಿಸಿ ಸಂಖ್ಯೆಯನ್ನು ಬೆಳೆಸಿಕೊಳ್ಳುವುದು ಒಂದು ವಿಧಾನವಾದಾಗ, ಎರಡನೆ ವಿಧಾನ ಇತರರ ಸಂಖ್ಯೆಯನ್ನು ಸಾಧ್ಯವಿದ್ದಷ್ಟು ಕಡಿಮೆ ಮಾಡಿದರೇ ಸಂಖ್ಯೆಯಲ್ಲಿ ತಮಗೆ ಅಗ್ರಸ್ಥಾನ ಬೇಗನೇ ಲಭಿಸುವಂತೆ ಮಾಡುವುದು. ತಮಗೆ ತಿಳಿದ ತಮ್ಮ ಮತದಲ್ಲಿನ ಬೋಧನೆಗಳಿಂದ ಇತರ ಮತದವರನ್ನು ಆ ಮತದಲ್ಲಿ ಇಲ್ಲದಂತೆ ಮಾಡಿ ತಮ್ಮ ಮತದಲ್ಲಿ ಬೆರೆಸಿಕೊಳ್ಳುವುದರಿಂದ ಒಂದು ಕಡೆ ತಮ್ಮ ಮತ ಸಂಖ್ಯೆ ಬೆಳೆಯುತ್ತದೆ. ಮತ್ತೊಂದು ಕಡೆ ಇತರರ ಸಂಖ್ಯೆ ಇಳಿಕೆಯಾಗುತ್ತದೆ. ಹಾಗೆ ತಮ್ಮ ಮತಬೋಧನೆಗಳು ಇಷ್ಟವಿಲ್ಲದವರು, ತಮ್ಮ ಮತಜ್ಞಾನವೇ ದೊಡ್ಡದೆನ್ನುವವರು ಯಾರಾದರೂ ಇದ್ದರೇ, ಅವರು ತಮ್ಮ ಮತ ಜ್ಞಾನವನ್ನು ಒಪ್ಪಿಕೊಳ್ಳುವುದಿಲ್ಲ ಆದ್ದರಿಂದ ಅವರು ತಮ್ಮ ಮತದೊಳಗೆ ಬರುವುದಿಲ್ಲ. ಆದ್ದರಿಂದ ಅಂಥವರನ್ನು ಭೌತಿಕವಾಗಿ ಇಲ್ಲದಂತೆ ಮಾಡುವುದು ಎರಡನೆ ವಿಧಾನವಾಗಿ ಇದೆ. ಪ್ರಸ್ತುತ ಕಾಲದಲ್ಲಿ ಮುಸ್ಲೀಮ್‌ರಲ್ಲಿ ತಮ್ಮ ಮತವನ್ನು, ಮತ ಸಂಖ್ಯೆಯನ್ನು ವೇಗವಾಗಿ ಬೆಳಸಿಕೊಳ್ಳಬೇಕೆಂಬ ಯೋಚನೆ ಹೆಚ್ಚಾಗಿ ಇರುವುದರಿಂದ, ಎರಡನೆ ವಿಧದ ಕಾರ್ಯಗಳಿಗೆ ಶ್ರೀಕಾರ ಮಾಡಿದ್ದಾರೆ.

ಮೊದಲ ವಿಧಾನದಲ್ಲಿ ತಮ್ಮ ಬೋಧನೆಗಳನ್ನು, ಬೋಧಿಸುವುದಕ್ಕೆ ಪ್ರತಿ ಪಟ್ಟಣದಲ್ಲಿಯೂ ಕೆಲವು ಆಧ್ಯಾತ್ಮಿಕ ಸಂಘಗಳನ್ನು ಏರ್ಪಡಿಸುವುದು,

ಆ ಸಂಘಗಳಲ್ಲಿ ಮುಸ್ಲೀಮ್‌ರಲ್ಲಿರುವ ಮೇಧಾವಿಗಳನ್ನು ಇಡುವುದು, ಅವರಿಂದ ಬೋಧನೆಗಳು ಹೇಳಿಸುವುದು, ಬಹಿರಂಗ ಉಪನ್ಯಾಸಗಳು ಹೇಳಿಸುವುದು ನಡೆಯುತ್ತಿದೆ. ಆ ಬೋಧನೆಗಳಲ್ಲಿ, ಉಪನ್ಯಾಸಗಳಲ್ಲಿ ತಮ್ಮ ಮೇಧಾಶಕ್ತಿಯನ್ನು ಉಪಯೋಗಿಸಿ ಹೇಳುವುದರಿಂದ, ಇತರ ಮತಗಳಲ್ಲಿನ ವೇದಗಳನ್ನು, ಉಪನಿಷತ್ತುಗಳನ್ನು, ಪುರಾಣಗಳನ್ನು, ಭಗವದ್ಗೀತೆಯನ್ನು ಕಂಠಾಪಾಟವಾಗಿ ಹೇಳುತ್ತಾ ಇತರರನ್ನು ಅವರ ಬೋಧನೆಗಳಿಗೆ ಆಕರ್ಷಿತರನ್ನಾಗಿ ಮಾಡುತ್ತಿದ್ದಾರೆ. ಅವರ ಉಪನ್ಯಾಸಗಳನ್ನು ಕೇಳಿದವರು ಯಾರಾದರೂ ಅವರನ್ನು ಶಭಾಷ್ ಎನ್ನುವಂತೆ, ಅವರು ಹೇಳಿರುವುದೇ ನಿಜ ಜ್ಞಾನವೆನ್ನುವಂತೆ ಮಾಡುತ್ತಿರುವರು. ಉಪನ್ಯಾಸಗಳಿಂದ ಹೆಚ್ಚಾಗಿ ಪ್ರಜೆಗಳ ದೃಷ್ಠಿಯನ್ನು ತಮ್ಮ ಕಡೆ ತಿರುಗಿಸಿ ಕೊಳ್ಳುತ್ತಿದ್ದಾರೆ. ಅವರ ಉಪನ್ಯಾಸಗಳಲ್ಲಿ ಭಗವದ್ಗೀತೆಯಿದ್ದರೂ, ಬೈಬಲ್ ಯಿದ್ದರೂ, ವೇದಗಳಿದ್ದರೂ ಎಲ್ಲವನ್ನು ಬೋಧಿಸಿದರೂ ಕೊನೆಗೆ ಎಲ್ಲ ಮತಗಳಿಗಿಂತ ಇಸ್ಲಾಮ್‌ಮತವೇ ದೊಡ್ಡದೆಂದು ಹೇಳುತ್ತಿರುವರು. ಬಹಿರಂಗ ಉಪನ್ಯಾಸಗಳಲ್ಲಿ ಎಲ್ಲಾ ಮತಗ್ರಂಥಗಳ ವಿಷಯಗಳು ಪ್ರಸ್ತಾಪಿಸುತ್ತಾ ಎಲ್ಲ ಮತಸ್ಥರನ್ನು ಆಕರ್ಷಿಸುಕೊಂಡು ತಮ್ಮ ಬೋಧನೆಗಳನ್ನು ಕೇಳುವಂತೆ ಮಾಡುತ್ತಿದ್ದಾರೆ. ಎಲ್ಲ ಮತಗಳ ಗ್ರಂಥಗಳಲ್ಲಿನ ಜ್ಞಾನವನ್ನು ಹೇಳಿದರೂ ಕೊನೆಗೆ ಮುಸ್ಲೀಮ್ ಮತಕ್ಕಿಂತ ಮೀರಿರುವುದು ಇಲ್ಲವೆಂದು, ಈ ಮತ ನವೀನವಾಗಿ ಬಂದಿದೆಯೆಂದು, ಉಳಿದ ಮತಗಳೆಲ್ಲವೂ ಹಳೆಯವಾದ ಧರ್ಮಗಳಿಂದ ಕೂಡಿಕೊಂಡಿವೆಯೆಂದು, ತಮ್ಮ ಮತ ಸ್ವಚ್ಛವಾಗಿರುವುದೆಂದೂ, ಎಲ್ಲ ವಿಧಗಳಲ್ಲಿ ದೊಡ್ಡದೆಂದು ಹೇಳುತ್ತಾ ಹೇಳದೆಯೇ ತಮ್ಮ ಮತದೊಳಗೆ ಆಹ್ವಾನಿಸುತ್ತಿರುವರು. ಉಳಿದ ಮತಗಳಲ್ಲಿನ ಶ್ಲೋಕಗಳನ್ನಾಗಲೀ, ವಾಕ್ಯಗಳನ್ನಾಗಲೀ ಅವರಿಗೆ ಅನುಕೂಲವಾಗಿರುವವುಗಳನ್ನು ಮಾತ್ರವೇ ಹೇಳುತ್ತಿರುವರು. ಅವರಿಗೆ ಅನುಕೂಲವಾಗಿ ಇಲ್ಲದ ವಾಕ್ಯಗಳನ್ನಾಗಲೀ, ಶ್ಲೋಕಗಳನ್ನಾಗಲೀ ಯಾವ ಕಾರಣಕ್ಕೂ ಹೇಳುವುದಿಲ್ಲ. ಜ್ಞಾನ ವಿಷಯದಲ್ಲಿ ಯಾರಾದರೂ ಇದಲ್ಲ ಎಂದರೇ ಅವರನ್ನು ಡಿಬೇಟ್‌ಗೆ (ಚರ್ಚೆಗೆ) ಕರೆಯುತ್ತಾರೆ. ಒಂದುವೇಳೆ ಚರ್ಚೆ ನಡೆದರೆ ಅದರಲ್ಲಿ ಅವರ ಮೇಧಾಶಕ್ತಿಯನ್ನು, ವಾಕ್‌ಚಾತುರ್ಯವನ್ನು ಪ್ರದರ್ಶಿಸುತ್ತಾರೆ.

ಎದುರಿಗಿರುವವನು ಹೇಳುವುದು ನಿಜವಾದರೂ ಅಸತ್ಯವೆನ್ನುವಂತೆ ಮಾಡುತ್ತಾರೆ. ಅದೆಲ್ಲವೂ ವೀಡಿಯೊ ತೆಗೆದು 'ಯೂ ಟ್ಯೂಬ್"ನಲ್ಲಿಟ್ಟು ತಾವೇ ದೊಡ್ಡವರು, ತಮ್ಮ ಜ್ಞಾನವೇ ದೊಡ್ಡದೆನ್ನುವಂತೆ ಪ್ರಚಾರ ಮಾಡಿಕೊಳ್ಳುತ್ತಾರೆ. ಆ ವೀಡಿಯೋಗಳನ್ನು ವಿದೇಶಗಳಿಗೆ ಕಳುಹಿಸಿ, ಇಸ್ಲಾಮ್ ಮತವನ್ನು ತಾವು ಚೆನ್ನಾಗಿ ಪ್ರಚಾರ ಮಾಡುವಂತೆ ಹೇಳಿ, ಅಲ್ಲಿಂದ ವಿಪರೀತವಾದ ಹಣವನ್ನು ತಂದುಕೊಳ್ಳುತ್ತಿದ್ದಾರೆ. ಆ ಹಣದಿಂದ ತಮ್ಮವರಲ್ಲಿ ಮುಖ್ಯವಾಗಿ ಯುವಕರಲ್ಲಿ ಯಾರಾದರೂ ಮೇಧಾಶಕ್ತಿ, ಜ್ಞಾಪಕಶಕ್ತಿ ಇರುವವರನ್ನು ಹುಡುಕಿ ಅಂತಹವರನ್ನು ತಮ್ಮ ಸಂಸ್ಥೆಯಲ್ಲಿ ಸೇರಿಸಿಕೊಂಡು ಅವನಿಗೆ ಹಣ ಸಹಾಯವನ್ನು ಮಾಡಿ, ಆತನನ್ನು ತಮಗೆ ಕೆಲಸಕ್ಕೆ ಬರುವ ಬೋಧನೆಗಳನ್ನು, ಎಲ್ಲ ಮತಗ್ರಂಥಗಳಿಂದ ಕಲಿಸಿ, ವಾದನೆಯಲ್ಲಿ ದಿಟ್ಟನಾಗಿ ತಯಾರುಮಾಡುವರು. ಹಾಗೆ ಜ್ಞಾಪಕಶಕ್ತಿಯಲ್ಲಿ ದೊಡ್ಡದಾಗಿದ್ದು ಯಾವ ಸಮಯದಲ್ಲಾದರೂ, ಯಾವ ಗ್ರಂಥದಲ್ಲಾದರೂ, ಯಾವ ಪುಟದಲ್ಲಿರುವ ಶ್ಲೋಕವನ್ನಾಗಲೀ, ಪದ್ಯವನ್ನಾಗಲೀ, ವಾಕ್ಯವನ್ನಾಗಲೀ ಹೇಳುವವರನ್ನು ಅವರ ಸಂಸ್ಥೆಯಲ್ಲಿ ಇಟ್ಟುಕೊಳ್ಳುವುದೇ ಅಲ್ಲದೆ ಅಂಥವರು ಸಿಗುತ್ತಿದ್ದರೆ, ಆಧ್ಯಾತ್ಮಿಕ ಸಂಸ್ಥೆಗಳಿಗೆ ಯಾವುದೋ ಒಂದು ಹೆಸರನ್ನಿಟ್ಟು ತಯಾರು ಮಾಡಿದ ಸಂಘಗಳನ್ನು ಚಿಕ್ಕ ಪಟ್ಟಣಗಳನ್ನು ಮೊದಲುಗೊಂಡು, ದೊಡ್ಡ ನಗರದವರೆಗು ತಯಾರಿಸಿ, ಆ ಸಂಘಗಳಿಂದ ತಮ್ಮ ಆಧ್ಯಾತ್ಮಿಕ ಕಾರ್ಯಗಳನ್ನು ನಡೆಸುತ್ತಾ, ಮೇಲ್ನೋಟಕ್ಕೆ ಎಲ್ಲ ಮತಗಳಿಗಿಂತ ಹೆಚ್ಚಿನ ಜ್ಞಾನವನ್ನು ಪ್ರಚಾರ ಮಾಡುವವರಾಗಿ ಕಾಣಿಸುತ್ತಿದ್ದಾರೆ. ಅವಕಾಶವಿರುವಕಡೆಯೆಲ್ಲಾ "ಮತಗಳ ಐಕ್ಯತೆ", "ಎಲ್ಲರಿಗೂ ದೇವರು", "ಮತಕ್ಕಿಂತ ಜ್ಞಾನದೊಡ್ಡದು" ಎಂದು ಎಲ್ಲರಿಗು ಸಂಬಂಧಿಸಿದ ಜ್ಞಾನವನ್ನು ಹೇಳುವಂತೆ ಕಾಣಿಸುತ್ತಿದ್ದಾರೆ.

ಕಳೆದ ಹತ್ತು ಅಥವಾ ಹದಿನೈದು ಸಂವತ್ಸರಗಳಿಂದ ಆಧ್ಯಾತ್ಮಿಕ ಸಂಘಗ ಳಾಗಿ ಒಂದು ಆಂಧ್ರಾ, ತೆಲಂಗಾಣಾ ರಾಜ್ಯಗಳಲ್ಲಿಯೇ ನೂರಾರು ಸಂಖ್ಯೆಗಳಲ್ಲಿ ಇಸ್ಲಾಮಿಕ್ ಸಂಬಂಧ ಸಂಘಗಳು ತಯಾರಾಗಿವೆ. ಗತದಲ್ಲಿಲ್ಲದ ಇಸ್ಲಾಮಿಕ್ ಸಂಘಗಳು ಈದಿನ ಪ್ರತಿ ಜಿಲ್ಲೆದಲ್ಲಿಯೂ, ಜಿಲ್ಲಾ ಸೆಂಟರ್ ಆಗದ ದೊಡ್ಡ

ಪಟ್ಟಣಗಳಲ್ಲಿಯೂ ತಯಾರಾಗಿವೆ. ಅಲ್ಲಿ ಎಲ್ಲ ಮತಗಳಿಗು ಸಂಬಂಧಿಸಿದ ಪಾಠಗಳು ಕಲಿತವರನ್ನು ನೋಡಿದರೇ ಯಾರಾದರೂ ಆಶ್ಚರ್ಯಪಡುತ್ತಾರೆ. ಹಿಂದೂಗಳಲ್ಲಿ ಸಂಸ್ಕೃತ ಭಾಷೆ ಪರಿಚಯವಿರುವವರು, ಸಂಸ್ಕೃತ ಶ್ಲೋಕಗಳು ಹೇಳುವವರು ಒಂದು ಬ್ರಾಹ್ಮಣರು ಹೊರತು ಯಾರೂ ಇಲ್ಲ. ಅದರೇ ಅವರಿಗಿಂತ ಚೆನ್ನಾಗಿ ಸಂಸ್ಕೃತ ಶ್ಲೋಕಗಳನ್ನು ಹೇಳುವವನನ್ನು ಇಸ್ಲಾಮಿಕ್ ಸಂಘಗಳಲ್ಲಿ ನೋಡಬಹುದು. ಅವರು ಗಡ್ಡಗಳು ಬೆಳೆಸಿ ಮುಸ್ಲೀಮ್‌ರಾಗಿ ಕಾಣಿಸುತ್ತಿದ್ದರೂ, ಹಿಂದೂಗಳಲ್ಲಿ ಇಲ್ಲದ ಪಾಂಡಿತ್ಯವನ್ನು ಅವರು ವ್ಯಕ್ತ ಮಾಡುತ್ತಿದ್ದಾರೆ. ಅವರಲ್ಲಿ ಕಾಣಿಸುವ ಪಾಂಡಿತ್ಯವನ್ನು ನೋಡಿಯಾರಾದರೂ ಆಶ್ಚರ್ಯಪಡುತ್ತಾರೆ. ಹೊರಗೆ ಸಾಧಾರಣ ಮನುಷ್ಯರಿಗೇ ಅಲ್ಲದೆ ಜ್ಞಾನದಲ್ಲಿ ಅಷ್ಟೋ ಇಷ್ಟೋ ಅನುಭವವಿರುವವರನ್ನು ಸಹಿತ ಅವರ ಮಾತುಗಳಿಂದ ಸೋಲಿಸಿ ನಾವೇ ದೊಡ್ಡವರು, ನಮ್ಮ ಜ್ಞಾನವೇ ದೊಡ್ಡದೆನ್ನುವಂತೆ ಮಾಡುತ್ತಿದ್ದಾರೆ. ನಾವು ಬಹಳ ಸಲ ಇಸ್ಲಾಮಿಕ್ ಸಂಘಗಳವರೊಂದಿಗೆ ಮಾತನಾಡುವುದು ನಡೆದಿದೆ. ನಾವು ಸರ್ವ ಸಾಧಾರಣವಾಗಿ ಮಾತನಾಡಿ ಅವರ ಹತ್ತಿರವಿರುವ ಜ್ಞಾನವನ್ನು ತಿಳಿಯುವುದಕ್ಕೆ ಬಹಳ ಪ್ರಶ್ನೆಗಳಿಗೆ ಉತ್ತರಗಳು ನನಗೆ ತಿಳಿಯದೆನ್ನುವಂತೆ ಕೇಳಿದ್ದೇವೆ. ಯಾರಿಗಾದರೂ ಹೇಳಬಲ್ಲೆವು ಎನ್ನುವಂತಿರುವವರು ಹೇಳಿದ ಉತ್ತರಗಳೆಲ್ಲವನ್ನೂ ನೋಡಿದ್ದೇವೆ. ನಾವು ಪ್ರಶ್ನಿಸಿದಾಗ ಅವರು ಏನು ಹೇಳಿದರೂ ಮಧ್ಯದಲ್ಲಿ ಮಾತನಾಡದಂತೆ ಶ್ರದ್ಧೆಯಿಂದ ಕೇಳಿದ್ದೇವೆ. ಅದರಿಂದ ಅವರು ನಾವು ಕೇಳಿದ ಪ್ರಶ್ನೆಗಳೆಲ್ಲವುಗಳಿಗೂ ಉತ್ತರವನ್ನು ಹೇಳಿದ್ದಾರೆ. ಅವರು ಹೇಳಿರುವವುಗಳಲ್ಲಿ ಕೇಳುವುದಕ್ಕೆ ಎಲ್ಲಾ ಚೆನ್ನಾಗಿದ್ದರೂ, ಯಾವುದು ಶಾಸ್ತ್ರಬದ್ಧವಾಗಿದೆಯೋ, ಯಾವುದು ಶಾಸ್ತ್ರಬದ್ಧವಾಗಿಲ್ಲವೋ ನಾವು ನಮ್ಮ ಅನುಭವದಿಂದ ಗ್ರಹಿಸಿದ್ದೇವೆ.

ನಾವು ಕೇಳಿದ ಪ್ರಶ್ನೆಯನ್ನು ನಮಗೆ ತಿಳಿಯದಂತೆ, ಇತರರು ನಮ್ಮನ್ನು ಕೇಳಿದರೇ ನಾವು ಏನು ಉತ್ತರ ಹೇಳಬೇಕು? ಎಂದು ಕೇಳಿದ್ದೇವೆ. ಆಗ ಅವರು ಜ್ಞಾಪಕಶಕ್ತಿಯಿಂದ ಎಲ್ಲೆಲ್ಲೋ ಇರುವ ಶ್ಲೋಕಗಳನ್ನೋ, ವಾಕ್ಯಗಳನ್ನೋ

ಹೇಳಿದರೂ ಅದರಲ್ಲಿ ಜ್ಞಾನ ಶಾಸ್ತ್ರಬದ್ಧವಾಗಿ ಇಲ್ಲವೆಂದು ತಿಳಿದಿದೆ. ಸತ್ತುಹೋದವರೆಲ್ಲಾ ಭೂಸಮಾಧಿಗಳಲ್ಲಿ ಇದ್ದರೇ ಹೊಸದಾಗಿ ಬಂದು ಹುಟ್ಟುವವರು ಎಲ್ಲಿಂದ ಬರುತ್ತಿದ್ದಾರೆಂದು ಕೇಳಿದರೇ ಅದಕ್ಕೆ ಅವರು ಹೀಗೆ ಹೇಳಿದ್ದಾರೆ. "ದೇವರು ಭೂಮಿ ಮೇಲೆ ಹುಟ್ಟಿಸುವವರೆಲ್ಲರನ್ನೂ ಮೊದಲೇ ತಯಾರಿಸಿ ಒಂದು ಮೈದಾನದಲ್ಲಿ ಇಟ್ಟುಕೊಂಡಿರುತ್ತಾನೆ. ಅಲ್ಲಿ ಮೈದಾನದಲ್ಲಿರುವ ವರನ್ನು ಪ್ರತಿ ದಿನ ಸ್ವಲ್ಪ ಜನರನ್ನು ಹುಟ್ಟುವಂತೆ ಮಾಡುತ್ತಿದ್ದಾನೆ" ಎಂದು ಹೇಳಿದ್ದಾರೆ. ಅದು ಶಾಸ್ತ್ರಬದ್ಧವಿಲ್ಲದ ಮಾತೆಂದು ತಿಳಿದುಹೋಗುತ್ತಿದೆ. ಯಾವ ಗ್ರಂಥದಲ್ಲಿಲ್ಲದ ವಿಷಯಗಳನ್ನು ಅವರು ಸ್ವತಃವಾಗಿ ಹೇಳಿ ಸರಿಮಾಡುತ್ತಿದ್ದಾರೆ. "ಮನುಷ್ಯರಿರುವ ಮೈದಾನ ಎಲ್ಲಿದೆ? ಅಲ್ಲಿ ಎಷ್ಟು ಜನ ನೆಲೆಸಿದ್ದಾರೆ" ಎಂದು ಕೇಳಿದರೇ ಆಕಾಶದಲ್ಲಿ ಒಂದು ಮೈದಾನವಿದೆ ಅಲ್ಲಿ ಸಾವಿರ ಸಂವತ್ಸರಗಳಿಗೆ ಸರಿಹೋಗುವ ಮನುಷ್ಯರನ್ನು ದೇವರು ತಯಾರಿಸಿ ಇಟ್ಟುಕೊಂಡಿದ್ದಾನೆ" ಎಂದು ಉತ್ತರ ಹೇಳಿದ್ದಾರೆ. ಈ ರೀತಿ ಅವರ ಮಾತುಗಳನ್ನು ನಂಬುವವರಿಗೆ ಶಾಸ್ತ್ರಬದ್ಧವಾಗದ ವಿಷಯಗಳನ್ನು ಸಹ ಹೇಳಿ ನಂಬಿಸುತ್ತಿದ್ದಾರೆ. ನಾವು ಜ್ಞಾನದಲ್ಲಿ ಪರಿಚಯವಿಲ್ಲದವರಾಗಿ ಬಹಳ ಸಲ ಅನೇಕ ಇಸ್ಲಾಮಿಕ್ ಸಂಘಗಳೊಂದಿಗೆ ಭೇಟಿಯಾಗಿ, ಅವರು ಹೇಳಿದ ಮಾತುಗಳಿಗೆ ಎದುರು ಮಾತನಾಡದಂತೆ ಹೇಳಿರುವವೆಲ್ಲಾ ಕೇಳುತ್ತಾ ಬಂದಿದ್ದೇವೆ. ಹಾಗೆ ಕೇಳಿ ಅವರಲ್ಲಿನ ಉದ್ದೇಶವೇನು? ಅವರು ದೇವರ ಜ್ಞಾನವನ್ನೇ ಹೇಳುತ್ತಿದ್ದಾರಾ? ಮತವನ್ನು ಅಭಿವೃದ್ಧಿ ಮಾಡುತ್ತಿದ್ದಾರಾ? ಎಂದು ತಿಳಿಯುವುದಕ್ಕೆ ಪ್ರಯತ್ನಿಸಿದ್ದೇವೆ. ನಮ್ಮ ಪ್ರಯತ್ನದಲ್ಲಿ ಅವರಿಗೆ ಖುರ್‌ಆನ್ ಗ್ರಂಥವೊಂದರ ಜ್ಞಾನ ಎಷ್ಟು ಮಾತ್ರ ತಿಳಿದಿಲ್ಲವೆಂದು ಅರ್ಥವಾಗಿದೆ. ಇಸ್ಲಾಮಿಕ್ ಜ್ಞಾನ ಸಂಘಗಲಾಗಿ ಹೆಸರು ಇಟ್ಟುಕೊಂಡು, ಇತರರಿಗೆ ಬೋಧಿಸುವುದೇ ನಮ್ಮ ಕೆಲಸವೆಂದು ಹೇಳುವವರಿಗೆ, ಖುರ್‌ಆನ್ ಗ್ರಂಥದಲ್ಲಿನ ಒಂದು ಆಯತ್‌ಗೂ ಸಹ ವಿವರ ಸರಿಯಾಗಿ ತಿಳಿದಿಲ್ಲವೆಂದು ತಿಳಿದುಹೋಯಿತು. ಮುಸ್ಲೀಮ್‌ರು ನಮ್ಮ ಗ್ರಂಥವೆಂದು ಹೇಳಿಕೊಳ್ಳುವ ಖುರ್‌ಆನ್‌ನಲ್ಲಿಯೂ ಸಹ ಒಂದು ವಾಕ್ಯಕ್ಕೂ ಸಹ ಸರಿಯಾಗಿ ವಿವರ ತಿಳಿಯದಿರುವಾಗ, ಭಗವದ್ಗೀತೆ ಶ್ಲೋಕಗಳು ಬಾಯಿಂದ ಹೇಳಿದಷ್ಟು ಮಾತ್ರಕ್ಕೆ

ಅವುಗಳಿಗೆ ವಿವರ ತಿಳಿದಿದೆ ಯೆಂದುಕೊಳ್ಳುವುದು ತಪ್ಪಾಗುತ್ತದೆ. ಒಟ್ನಲ್ಲಿ ನಾವು ದೊಡ್ಡ ಜ್ಞಾನಿಗಳೆಂದು ಹೆಳಿಕೊಳ್ಳುವ ಇಸ್ಲಾಮ್ ಆಧ್ಯಾತ್ಮಿಕ ಸಂಘಗಳವರಿಗೆ, ದೇವರ ಜ್ಞಾನ ತಿಳಿದಂತೆ ಮೇಲ್ನೋಟಕ್ಕೆ ಕಾಣಿಸಿದರೂ, ಅವರಿಗೆ ಒಳಗೆ ಜ್ಞಾನ ತಿಳಿಯದೆಂದೇ ಹೇಳಬಹುದು.

ಭಾರತದೇಶದಲ್ಲಿ ಅನೇಕ ಕಡೆ, ಅನೇಕ ಆಧ್ಯಾತ್ಮಿಕ ಸಂಘಗಳನ್ನು ಸ್ಥಾಪಿಸಿ, ಅದರಲ್ಲಿ ಆಧ್ಯಾತ್ಮಿಕ ಬೋಧನೆಗಳು ಸಾಗುವಂತೆ ಮಾಡಿ, ಉಪನ್ಯಾಸ ಗಳಿಂದ ಅವರೊಂದಿಗೆ ಪೋಟೀಗೆ ಬಂದು ಮಾತನಾಡುವವರಿಗೆ ಚರ್ಚೆಗಳಿಂದ ತಮ್ಮ ಮತ ಜ್ಞಾನವನ್ನು ಹೊರಗಡೆ ಹೇಳಿ, ಅವರ ಜ್ಞಾನದ ಕಡೆಗೆ ಆಕರ್ಷಿಸುವಂತೆ ಮಾಡಿಕೊಂಡು, ಕ್ರಮೇಣ ಅವರ ಮತವನ್ನು ಅಭಿವೃದ್ಧಿ ಮಾಡಿಕೊಳ್ಳ ಬೇಕೆನ್ನುವುದೇ ಅವರ ಮುಖ್ಯ ಉದ್ದೇಶ. ಆದರೇ ಅದು ಮೇಲ್ನೋಟಕ್ಕೆ ಅವರಿಗೆ ಎಲ್ಲರಿಗೂ ತಿಳಿಯುವಂತಿರುವ ವಿಧಾನ ಮಾತ್ರವೇ ಎಂದು ತಿಳಿಯುತ್ತಿದೆ. ಮೇಲ್ನೋಟಕ್ಕೆ ಕಾಣಿಸದೆ ಸದ್ದಾಗದಂತೆ ನಡೆದುಹೋಗುವ ವಿಧಾನ ಮತ್ತೊಂದು ವಿಧಾನದಲ್ಲಿ ನೋಡಿದರೆ ಚೆನ್ನಾಗಿ ಕಾಣಿಸಬಲ್ಲದು. ತಮಗೆ ತಿಳಿದಿರುವ ಜ್ಞಾನಪ್ರಚಾರದಿಂದ ಕೆಲವು ಜನರನ್ನು ತಮ್ಮ ಮತದಕಡೆಗೆ ಎಳೆದುಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತಾ, ಇತರ ಮತಗಳ ಸಂಖ್ಯೆಯನ್ನು ಕಡಿಮೆ ಮಾಡಿ ತಮ್ಮ ಮತದಲ್ಲಿನ ಸಂಖ್ಯೆಯನ್ನು ಬೆಳೆಸಿಕೊಳ್ಳಬೇಕೆಂಬ ಉದ್ದೇಶ ಒಂದು ವಿಧಾನದಲ್ಲಿ ಹೊಂದಿದ್ದಾರೆ. ಇನ್ನೊಂದು ವಿಧಾನದಿಂದ ಇತರ ಮತದವರ ಸಂಖ್ಯೆಯನ್ನು ಕಡಿಮೆ ಮಾಡುವುದು ಎಂಬ ಮುಖ್ಯಉದ್ದೇಶ್ಯವನ್ನು ಸಹ ಹೊಂದಿದ್ದಾರೆ. ಆ ವಿಧಾನದಲ್ಲಿ ಜ್ಞಾನದಿಂದಲ್ಲದೆ ಹಿಂಸೆಯಿಂದ ಮನುಷ್ಯರನ್ನು ಭೌತಿಕವಾಗಿ ಇಲ್ಲದಂತೆ ಮಾಡಿದಾಗ, ಇತರರ ಸಂಖ್ಯೆ ಕಡಿಮೆಯಾಗುವುದಲ್ಲದೆ ಲೆಕ್ಕಾಚಾರದಲ್ಲಿ ಅವರ ಸಂಖ್ಯೆ ಹೆಚ್ಚಾಗುತ್ತದೆ. ಹಿಂಸೆಯನ್ನು ಆಯುಧವನ್ನಾಗಿ ಮಾಡಿಕೊಂಡು ಇತರ ಮನುಷ್ಯರನ್ನು ಸಾಯಿಸುವುದಕ್ಕೆ ಅಗತ್ಯವಾಗಿರುವುದು ಉಗ್ರವಾದ ಮಾತ್ರವೇ. ಅಂತಹ ಉಗ್ರವಾದವನ್ನು ಹಿಂದೂಗಳ ದೇಶವಾದ ಭಾರತದೇಶದಲ್ಲಿಯೇ ಅಭಿವೃದ್ಧಿ ಮಾಡಿ ಹಿಂದುಗಳನ್ನು ಇಲ್ಲದಂತೆ ಮಾಡಬೇಕೆಂದುಕೊಂಡಿದ್ದಾರೆ.

ಭಾರತದೇಶದಲ್ಲಿರುವ ಮುಸ್ಲಿಮ್‌ರು ಎಷ್ಟೋ ಮಂದಿಯಿದ್ದರೂ ಅವರ ಕೆಲಸ ಅವರು ಮಾಡಿಕೊಂಡು, ಅವರ ಬದುಕು ಅವರು ಬದುಕುತ್ತಿದ್ದಾರೆ. ಜೀವನದಲ್ಲಿ ಎಂತಹ (ತಾಪತ್ರಯ, ತಗಾದೆಗಳು) ಇಲ್ಲದಂತೆ ಅವರ ಜೀವನವನ್ನು ಅವರು ಕಳೆಯಬೇಕೆಂದುಕೊಂಡ ಮುಸ್ಲೀಮ್‌ರು 90 ರಿಂದ 95 ರಷ್ಟು ಮಂದಿ ಇದ್ದಾರೆ. ಆದರೇ ದುರುದ್ದೇಶದಿಂದ ಮತವನ್ನು ಬೆಳಸಿಕೊಳ್ಳಬೇಕೆಂದುಕೊಳ್ಳುವವರು ಅವರ ಸಮಾಜದಲ್ಲಿನ ಅಮಾಯಕ ಜನರನ್ನು, ಬಡತನದಲ್ಲಿ ಬದುಕು ಭಾರವಾಗಿರುವವರನ್ನು ನೋಡಿ, ಹಣವನ್ನು ಆಸೆಯಾಗಿ ತೋರಿಸಿ, ತಮ್ಮ ಮಾತನ್ನು ಕೇಳುವಂತೆ ಮಾಡಿಕೊಂಡು ಅವರಿಗೆ ತರಭೇತಿಯನ್ನು ಕೊಟ್ಟು, ದೇವರಿಗಾಗಿಯೇ ತಮ್ಮ ಹೋರಾಟವೆಂದು ಹೇಳಿ, ದೇವರಿಗೆ ವಿರುದ್ಧವಾಗಿ ಮಾತನಾಡುವವರನ್ನು, ದೇವರನ್ನು ಬಿಟ್ಟು ಇತರರನ್ನು ದೇವರಾಗಿ ಭಾವಿಸಿದವರನ್ನು, ಇಸ್ಲಾಮ್ ಜ್ಞಾನವನ್ನು, ಇಸ್ಲಾಮ್‌ನ್ನು ಒಪ್ಪಿಕೊಳ್ಳದವರನ್ನು, ಒಪ್ಪಿಕೊಳ್ಳದೆ ಅವರಿಗೆ ವಿರುದ್ಧವಾಗಿ ಇರಬೇಕೆಂದು ಹೇಳುತ್ತಿದ್ದಾರೆ.

ಅವರ ಮಾತುಗಳನ್ನು ಅವರ ಸಮಾಜದಲ್ಲಿ ಕೆಲವರು ಇಷ್ಟಪಟ್ಟಿರುವಾಗ, ಅವರಲ್ಲಿನ ಯುವಕರನ್ನು ಮೊದಲು ತಮ್ಮ ಆಧ್ಯಾತ್ಮಿಕ ಕೇಂದ್ರಗಳೊಂದಿಗೆ ಪರಿಚಯ ಮಾಡುವರು. ಇಸ್ಲಾಮಿಕ್ ಆಧ್ಯಾತ್ಮಿಕ ಕೇಂದ್ರಗಳಲ್ಲಿ ಆಧ್ಯಾತ್ಮಿಕ ಎಂಬ ಮುಸುಗಿನಲ್ಲಿ ತಮ್ಮ ಕಡೆ ಬಂದಿರುವ ಯುವಕರನ್ನು ನಿದಾನವಾಗಿ ಉಗ್ರವಾದವನ್ನು ಕುರಿತು ಹೇಳಿ, ಅವರಲ್ಲಿ ಉಗ್ರವಾದ ಬೀಜಗಳನ್ನು ನಾಟುವರು. ನಿದಾನವಾಗಿ ತಮ್ಮ ಹತ್ತಿರ ತಮ್ಮ ಸಂಘದಲ್ಲಿ ಕೆಲಸಮಾಡುತ್ತಿರುವ ಯುವಕರನ್ನು ಉಗ್ರವಾದಿಗಳನ್ನಾಗಿ ತಯಾರು ಮಾಡುತ್ತಿದ್ದಾರೆ. ಇಸ್ಲಾಮಿಕ್ ಆಧ್ಯಾತ್ಮಿಕ ಕೇಂದ್ರಗಳಲ್ಲಿಯೇ ಉಗ್ರವಾದ ಬೀಜಗಳು ನಾಟಲಾಗುತ್ತಿವೆ. ಉಗ್ರವಾದಿಗಳು ವಿದೇಶಗಳಲ್ಲಿ ಆಯುಧಗಳನ್ನು ಉಪಯೋಗಿಸುವ ಟ್ರಯಿನಿಂಗ್ ಪಡೆಯುತ್ತಿದ್ದಾರೆಂದು ಭಾರತ ಸರ್ಕಾರ ಅಂದುಕೊಳ್ಳುತ್ತಿದೆ. ಅಲ್ಲಿಗೆ ಹೋಗಿ ಆಯುಧಗಳನ್ನು ಉಪಯೋಗಿಸುವ ತರಭೇತಿಯನ್ನು ಪಡೆಯುವುದಕ್ಕೆ ಮುಂಚಿತವಾಗಿ ಭಾರತದೇಶದಲ್ಲಿಯೇ ಮಾನಸಿಕವಾಗಿ ಉಗ್ರವಾದ ಭಾವಗಳನ್ನು ಹೊಂದುತ್ತಿದ್ದಾರೆ.

ಮನಸ್ಸಿನಲ್ಲಿ ಪೂರ್ತಿ ಉಗ್ರವಾದ ತುಂಬಿಹೋದನಂತರ, ಕೇವಲ ಆಯುಧಗಳನ್ನು ಉಪಯೋಗಿಸುವ ತರಭೇತಿಗಾಗಿಯೇ ಇತರ ದೇಶಗಳಿಗೆ ಹೋಗುತ್ತಿದ್ದಾರೆ. ಕೆಲವರು ಹಾಗೆ ಆಯುಧವನ್ನು ಉಪಯೋಗಿ ಸುವುದಕ್ಕೂ ಸಹ ಹೋಗದೇ ಇಲ್ಲೇ ಕಂಪ್ಯೂಟರ್ ಪರಿಜ್ಞಾನವನ್ನು ಹೊಂದಿ, ಅಜ್ಞಾತದಲ್ಲಿಯೇ ಉಗ್ರವಾದ ಕಾರ್ಯಕಲಾಪಗಳನ್ನು ಮಾಡುತ್ತಿದ್ದಾರೆ. ಉಗ್ರವಾದ ಇದು ಅದು ಎಂದು ಹೇಳುವುದಕ್ಕೆ ಅವಕಾಶವಿಲ್ಲದ ರೀತಿಯಲ್ಲಿ ಇಲ್ಲೇ ತಯಾರಾಗುತ್ತಿದ್ದರೂ, ಉಗ್ರವಾದ ಬೀಜಗಳು ಇಲ್ಲೇ ಮಹಾವೃಕ್ಷಗಳಾಗಿ ಬದಲಾಗುತ್ತಿದ್ದರೂ, ಉಗ್ರವಾದ ಬೀಜಗಳು ಇಲ್ಲೇ ಮಹಾವೃಕ್ಷಗಳಾಗಿ ಬದಲಾಗುತ್ತಿದ್ದರೂ ಯಾವ ಕಾರಣಕ್ಕೂ ಸರ್ಕಾರವಾಗಲೀ, ಪ್ರಜೆಗಳಾಗಲೀ ಗುರುತಿಸಲಾರದ ಸ್ಥಿತಿಯಲ್ಲಿ ಇದ್ದಾರೆ. ಎಲ್ಲ ಇಸ್ಲಾಮಿಕ್ ಸಂಘಗಳು ಕೆಟ್ಟ ಕೆಲಸಗಳನ್ನು ಮಾಡುತ್ತಿವೆಯೆಂದು ನಾವು ಹೇಳಲಿಲ್ಲ ಆದರೇ, ಕೆಲವು ಇಸ್ಲಾಮಿಕ್ ಸಂಘಗಳು ಮೇಲ್ನೋಟಕ್ಕೆ ಒಂದು ವಿಧವಾಗಿ ಕಾಣಿಸುತ್ತಲೇ ಒಳಗೆ ಯಾರಿಗೂ ತಿಳಿಯದ ವಿಧವಾಗಿ, ಒಂದೇ ಬಾರಿ ಅಲ್ಲದೆ, ಒಂದೇ ತಿಂಗಳಲ್ಲಿ ಅಲ್ಲದೆ ತಮ್ಮ ಕಡೆ ಬಂದಿರುವವರನ್ನು ಹಂತ ಹಂತವಾಗಿ ಮನಸ್ಸಿನಲ್ಲಿ ಉಗ್ರವಾದ ಬೀಜಗಳನ್ನು ನಾಟುತ್ತಿದ್ದಾರೆ. ಅಂಥವರು ಪೂರ್ಣ ಮಟ್ಟದ ಉಗ್ರವಾದ ಅವರಲ್ಲಿ ಬೆಳೆಯುವುದಕ್ಕೆ, ಸುಮಾರು ಎರಡರಿಂದ ಮೂರು ಸಂವತ್ಸರಗಳ ಕಾಲ ಬೇಕಾಗುತ್ತದೆ. ಪ್ರತಿ ಇಸ್ಲಾಮಿಕ್ ಆಧ್ಯಾತ್ಮಿಕ ಸಂಘಗಳಲ್ಲಿಯೂ ಜ್ಞಾನದಿಂದಿರುವ ವರು ಕಾಣಿಸುತ್ತಿದ್ದರೂ, ಕೆಲವು ಕಡೆ ಉಗ್ರವಾದಿಗಳಾಗಿ ತಯಾರಾಗುವವರು ಒಬ್ಬರಿಂದ ಇಬ್ಬರು ಅಥವಾ ಮೂವರು ಇದ್ದಾರೆಂದು ಹೇಳಹುದು. ಒಂದೇ ಕಡೆ ಬಹಳ ಜನರಿದ್ದರೇ ಅವರಲ್ಲಿ ಬೇಧಗಳು ಬಂದು ಹೊರಬೀಳುವ ಅವಕಾಶವಿರುವುದರಿಂದ, ಒಂದು ಸಂಘದಲ್ಲಿ ಒಬ್ಬರು ಅಥವಾ ಇಬ್ಬರಿಗಿಂತ ಹೆಚ್ಚಾಗಿ ಇಲ್ಲದಂತೆ ನೋಡಿಕೊಳ್ಳುತ್ತಿದ್ದಾರೆ. ಎಲ್ಲೋ ಅಪರೂಪವಾಗಿ ಮೂವರಿದ್ದಾರೆಂದು ಹೇಳಬಹುದು. ಒಟ್ಟಾರೆ ಭಾರತದೇಶದಲ್ಲಿ ಉಳಿದ ಮತಗಳನ್ನು ನಾಶಮಾಡಿ, ತಮ್ಮ ಮತವನ್ನು ವೃದ್ಧಿ ಮಾಡಬೇಕೆನ್ನುವವರು ಪೂರ್ತಿ ಉಗ್ರವಾದ ಭಾವಗಳಿಂದ ಒಂದು ಸಂವತ್ಸರಕ್ಕೆ ಸುಮಾರು ನೂರರಿಂದ ಎರಡು ನೂರು ಮಂದಿವರೆಗು ತಯಾರಾಗುತ್ತಿದ್ದಾರೆ. ವಿದೇಶಗಳಿಂದ ಭಾರತ

ದೇಶಕ್ಕೆ ಬಂದಿರುವ ಉಗ್ರವಾದಿಗಳು ಕಡಿಮೆ ಆದರೆ, ಭಾರತದೇಶದಿಂದ ಇತರ ದೇಶಗಳಿಗೆ ಉಗ್ರವಾದಿಗಳಾಗಿ ಹೋದವರು ಬಹಳ. ವಿದೇಶಗಳಿಗೆ ಹೋದ ಉಗ್ರವಾದಿಗಳು ಯಾವ ಟ್ರೈನಿಂಗ್ ಇಲ್ಲದಂತೆ ನೇರವಾಗಿ ಉಗ್ರವಾದ ಕಾರ್ಯಕಲಾಪಗಳಲ್ಲಿ ಭಾಗವಹಿಸುತ್ತಿದ್ದಾರೆ.

ಭಾರತದೇಶದಲ್ಲಿನ ಅನೇಕ ರಾಷ್ಟ್ರಗಳಲ್ಲಿ ಚಾಪೆಕೆಳಗೆ ನೀರಿನಂತೆ ಉಗ್ರವಾದ ಬೆಳೆದುಹೋಗುತ್ತಿದೆ. ಭಾರತದೇಶ ಭೌಗೋಳಿಕವಾಗಿ ಪೂರ್ವ ಪಶ್ಚಿಮ ದಿಶೆಗಳಲ್ಲಿ(ದಿಕ್ಕು) ಹೆಚ್ಚಾಗಿ ಇಸ್ಲಾಮಿಕ್ ದೇಶಗಳಿರುವುದರಿಂದ, ಮಧ್ಯದಲ್ಲಿ ಹಿಂದೂ ಮತಕ್ಕೆ ಸಂಬಂಧಿಸಿದ ಭಾರತದೇಶವಿರುವುದರಿಂದ, ಮುಸ್ಲೀಮ್ ಉಗ್ರವಾದಿಗಳ ದೃಷ್ಟಿ ಭಾರತದೇಶದ ಮೇಲೆ ಬಿದ್ದಿದೆ. ಭಾರತದೇಶವನ್ನು ಇಸ್ಲಾಮಿಕ್ ದೇಶವಾಗಿ ಮಾಡುವುದಾದರೇ, ಇಂಡೋನೇಷಿಯಾ ದೇಶದಲ್ಲಿ ಮುಸ್ಲೀಮ್‌ರ ಸಂಖ್ಯೆ ಹೆಚ್ಚಾಗಿರುವುದರಿಂದ, ಪೂರ್ವ ಪಶ್ಚಿಮ ಮಧ್ಯದಲ್ಲಿರುವ ಭಾರತದೇಶ ಎಲ್ಲಾ ಇಸ್ಲಾಮಿಕ್ ದೇಶಗಳಾಗಿ ಹೋಗಿ ಇಸ್ಲಾಮಿಕ್ ಸಾಮ್ರಾಜ್ಯ ಏರ್ಪಡುತ್ತದೆಂದು ಅಂದುಕೊಂಡಿದ್ದಾರೆ. ಆದ್ದರಿಂದ ಇತರ ದೇಶಗಳಿಂದ ಬಂದಿರುವ ಉಗ್ರವಾದಿಗಳು ಭಾರತದೇಶದ ಪ್ರಜೆಗಳನ್ನು ಕಾರಣ ಇಲ್ಲದಂತೆ ಸಾಯಿಸುವುದಕ್ಕೆ ಕಾರಣ ಅದೇಯೆಂದು ಹೇಳಬಹುದು. ಇತರ ದೇಶಗಳ ಉಗ್ರವಾದಿಗಳು ಭಾರತದೇಶದಲ್ಲಿ ದಾಳಿಗಳು ಮಾಡುವುದಕ್ಕೆ ಭಾರತದೇಶದಲ್ಲಿನ ಉಗ್ರವಾದಿಗಳ ಸಹಕಾರವೂ ಸಹ ಇದೆಯೆಂದು ಹೇಳಬಹುದು. ಈದಿನ ಭಾರತ ದೇಶದಲ್ಲಿನ ಇಸ್ಲಾಮಿಕ್ ಆಧ್ಯಾತ್ಮಿಕ ಕೇಂದ್ರಗಳಲ್ಲಿ ಮೊದಲು ಜೀವನದ ಮೇಲೆ ಜಿಗುಪ್ಸೆ ಉಂಟುಮಾಡುವ ಜ್ಞಾನವನ್ನು ಹೇಳಿ, ನಂತರ ದೇವರಿಗಾಗಿ ಸತ್ತುಹೋಗಬೇಕೆಂದು ಹೇಳುವುದು ನಡೆಯುತ್ತಿದೆ. ದೇವರಿಗಾಗಿ ಸತ್ತುಹೋದವನಿಗೆ ಸ್ವರ್ಗ ಬರುತ್ತದೆಂದು, ಅದರಲ್ಲಿ ಶಾಶ್ವತವಾಗಿ ಸುಖಗಳನ್ನು ಅನುಭವಿಸಬಹುದೆಂದು ಆಧ್ಯಾತ್ಮಿಕವನ್ನು ಮೇಳೈಸಿ ಹೇಳುವರು. ಅವರ ಭಾವಗಳಿಗೆ ಹತ್ತಿರವಾಗಿ ಬರುವ ಯುವಕರನ್ನು ಗಮನಿಸಿ ಪೂರ್ಣ ಮಟ್ಟದ ಉಗ್ರವಾದಿಗಳಾಗಿ ಬದಲಾಯಿಸುತ್ತಿದ್ದಾರೆ. ಪೂರ್ಣ ಮಟ್ಟದಲ್ಲಿ ಉಗ್ರವಾದಿಯಾಗಿ

ಬದಲಾದವನನ್ನು ಕದಲಿಸಿ ನೋಡಿದರೇ ಅವನದು ಉಗ್ರವಾದ ಅಲ್ಲವೆಂದೂ, ಅವನದು ದೇವರ ಸೇವೆಯೆಂದೂ, ದೇವರಿಗಾಗಿ ಪ್ರಾಣವನ್ನಾದರೂ ಕೊಡುತ್ತೇನೆಂದು ಅನ್ನುತ್ತಿದ್ದಾನೆ. ದೇವರಿಗಾಗಿ ಪ್ರಾಣವನ್ನಾದರೂ ಕೊಡುವುದು ತ್ಯಾಗವೆಂದು, ತನಗಿಂತ ದೊಡ್ಡ ತ್ಯಾಗ ಮಾಡುವವರು ಭೂಮಿ ಮೇಲೆ ಇಲ್ಲ ಎನ್ನುತ್ತಿದ್ದಾನೆ.

ಪ್ರಾಣವನ್ನು ಸಹ ತ್ಯಾಗ ಮಾಡುವುದಕ್ಕೆ ಸಿದ್ಧವಾಗಿ ಇರುವವನು ತಾನು ಯಾವುದಕ್ಕಾಗಿ ಪ್ರಾಣತ್ಯಾಗ ಮಾಡುವುದಕ್ಕೆ ಸಿದ್ಧವಾಗಿದ್ದೇನೆಂದು ಅಲೋಚಿಸಲಿಲ್ಲ. ದೇವರಿಗಾಗಿ ಎಂದು ಹೇಳಿದರೂ, ಅತನು ಮತಕ್ಕಾಗಿ ಸಾಯುವುದಕ್ಕೂ ಹಿಂಜರಿಯಲಿಲ್ಲವೆಂದು ಅರ್ಥವಾಗುತ್ತಿದೆ. ಆಧ್ಯಾತ್ಮಿಕದಿಂದ ಪ್ರಾರಂಭಮಾಡಿ, ಜೀವನದ ಮೇಲೆ ಜಿಗುಪ್ಸೆ ಉಂಟಾಗುವಂತೆ ಮಾಡಿ, ಆ ಜಿಗುಪ್ಸೆಯನ್ನು ಉಗ್ರವಾದದಲ್ಲಿ ವಿನಿಯೋಗಿಸುವಂತೆ ಮಾಡಿ 'ಸಾಯಿಸು ಸಾಯಿ" ಎಂಬ ನಿನಾದವನ್ನು ಕಲಿಸುತ್ತಿದ್ದಾರೆ. ಅದನ್ನು ಕಲಿತ ಉಗ್ರವಾದಿಗಳು ತಮ್ಮದು ಉಗ್ರವಾದವಲ್ಲವೆಂದು, ದೇವರಿಗಾಗಿ, ದೇವರ ವಾಕ್ಯಕ್ಕಾಗಿ ಮಾಡುವ ಸೇವೆ ಎಂದು ಹೇಳಿಕೊಳ್ಳುತ್ತಿದ್ದಾರೆ. ಅವರ ದೃಷ್ಟಿಯಲ್ಲಿ ಅವರು ಆಚರಿಸುವ ಉಗ್ರವಾದ ದೇವರ ಸೇವೆಯಂತೆ ಕಾಣಿಸಿದಾಗ, ಅಲ್ಲಾಹ್‌ನ್ನು ಅನುಸರಿಸದವರನ್ನು, ಮುಸ್ಲೀಮ್‌ನಾಗಿ ಬದಲಾಗದವನನ್ನು ಸಾಯಿಸುವುದಕ್ಕೆ ಪ್ರಯತ್ನಮಾಡುತ್ತಿದ್ದಾರೆ. ಆ ಕೆಲಸಕ್ಕೆ ಅನುಗುಣವಾಗಿ 'ಸಾಯಿಸು ಸಾಯಿ' ಎಂಬ ನಿನಾದವನ್ನು ಹೇಳುತ್ತಾ, ದೇವರಿಗೆ ವಿರುದ್ಧವಾಗಿರುವವರನ್ನು ಮಾತ್ರವೇ ಸಾಯಿಸುವನೆಂದು ಅದು ದೇವರ ಸೇವೆಯೇಯಾಗಲೀ, ಅದಕ್ಕೆ ಉಗ್ರವಾದ ಎಂಬ ಹೆಸರು ಇಡಬಾರದು ಎನ್ನುತ್ತಿದ್ದಾರೆ. ತನಗೆ ಇಷ್ಟವಿಲ್ಲದವನನ್ನು ಸಾಯಿಸುವುದು ದೇವರ ಸೇವೆಯಾದರೆ, ಉಗ್ರವಾದವೆಂದು ಯಾವುದನ್ನು ಅನ್ನಬೇಕು? ಎಂದು ನಾವು ಪ್ರಶ್ನಿಸುತ್ತಿದ್ದೇವೆ.

ಉಗ್ರವಾದಿಯಾಗಿ ತಯಾರಾದವನ ದೃಷ್ಠಿಯಲ್ಲಿ ಅವನದು ಉಗ್ರವಾದ ವಲ್ಲವೆಂದು, ದೇವರ ಮಾರ್ಗದಲ್ಲಿ ನಡೆಯುತ್ತಿರುವ ಭಕ್ತಿಮಾರ್ಗವೆಂದು ಅವನು ಹೇಳಿಕೊಳ್ಳುತ್ತಿದ್ದಾನೆ. ಆ ರೀತಿ ಅವನಿಗೆ ಅರ್ಥವಾಗಿದೆಯೆಂದರೇ, ಅವನು

ತಯಾರಾದ ಇಸ್ಲಾಮಿಕ್ ಸಂಘದಲ್ಲಿರುವ ಹಿರಿಯರೇ ಹಾಗೆ ಕಲಿಸಿದ್ದಾರೆ. ಕಳ್ಳತನ ಮಾಡುವವನ ದೃಷ್ಟಿಯಲ್ಲಿ ತನ್ನದು ಕಳ್ಳತನವೆನ್ನುವುದಿಲ್ಲವೆಂದು, ಬದುಕುವುದಕ್ಕಾಗಿ ಅನ್ನುತ್ತಾರೆಂದು ಹೇಳುತ್ತಿದ್ದಾನೆ. ಯಾರದು ಅವನಿಗೆ ಒಳ್ಳೆಯ ಕೆಲಸವಾಗಿ ಕಾಣಿಸಿದರೂ, ಅದು ದೇವರ ದೃಷ್ಟಿಯಲ್ಲಿ ಏನಾಗುತ್ತದೆಂದು ಆಲೋಚಿಸಬೇಕು. ಹಾಗಾಗದಂತೆ ಇತರರು ಹೇಳುವ ಮಾತನ್ನು ಕೇಳಿ ತನ್ನದು ಒಳ್ಳೆಯದೆಂದುಕೊಳ್ಳಬಾರದು. **"ದೇಶ ಮೋಸ – ದೇಹ ಮೋಹ"** ಎಂಬ ನಾಣ್ನುಡಿ ಪ್ರಕಾರ ಪ್ರಪಂಚದಲ್ಲಿನ ಮನುಷ್ಯರು ಮೋಸದಿಂದ ಕೂಡಿಕೊಂಡಿದ್ದಾರೆ. ಆದ್ದರಿಂದ ತನ್ನ ಮತದವರಾಗಲೀ, ಕೊನೆಗೆ ತನ್ನ ಮನೆಯವರಾಗಲೀ, ತನ್ನನ್ನು ಮೋಸ ಮಾಡುತ್ತಿದ್ದಾರಾ! ಇಲ್ಲಾ? ಎಂದು ಪ್ರತಿ ವಿಷಯದಲ್ಲಿಯೂ ಗಮನಿಸಬೇಕಾಗಿದೆ. ಇಲ್ಲದೇ ಹೋದರೇ ಯಾರಾದರಾಗಲೀ, ಎಷ್ಟು ಬುದ್ಧಿವಂತನಾಗಲೀ ಮೋಸಹೋಗದೆ ತಪ್ಪುವುದಿಲ್ಲ. ನೀನು ಮಾಡುವ ಕೆಲಸ ದೇವರಿಗಾಗಿ ಎಂದು, ಅದರಿಂದ ನಿನಗೆ ಸ್ವರ್ಗ ಬರುತ್ತದೆಂದು, ಅಲ್ಲಿ ಸುಂದರವಾದ ಹೆಂಗಸರೊಂದಿಗೆ ಸುಖವಾಗಿ ಇರಬಹುದೆಂದು ಹೇಳಿ, ಮೋಸದಿಂದ ಮನುಷ್ಯನನ್ನು ಉಗ್ರವಾದದೊಳಗೆ ಇಳಿಸುತ್ತಿದ್ದಾರೆ. ಅಸತ್ಯ, ಮೋಸ ಎನ್ನುವವು ಎರಡು ಪ್ರಾಣಿಗಳ ಮೆದುಳಿನಲ್ಲಿ ಇಲ್ಲವಾಗಲೀ, ಮನುಷ್ಯರ ಮೆದುಳಿನಲ್ಲಿ ಮೊದಲನೆಯದು ಮೋಸ, ಎರಡನೆಯದು ಅಸತ್ಯ ಎಂಬ ಎರಡೂ ಹೆಚ್ಚಾಗಿ ಇವೆ. ಆದ್ದರಿಂದ ಪ್ರತಿ ವಿಷಯದಲ್ಲಿಯೂ ಒಬ್ಬ ಮನುಷ್ಯ ಇನ್ನೊಬ್ಬ ಮನುಷ್ಯನನ್ನು ಮೋಸ ಮಾಡುತ್ತಿದ್ದಾನೆ. ಅದೇ ರೀತಿಯಲ್ಲಿ ಕೆಲವು ಇಸ್ಲಾಮಿಕ್ ಸಂಸ್ಥೆಗಳು ಸಹಾ ಆಧ್ಯಾತ್ಮಿಕ, ದೇವರ ವಿಶ್ವಾಸ ಎಂದು ಮಾತುಗಳು ಹೇಳಿ ಅಮಾಯಕ ಮುಸ್ಲೀಮ್ ಯುವಕರನ್ನು ಉಗ್ರವಾದದೊಳಗೆ ಇಳಿಸುತ್ತಿದ್ದಾರೆ.

ಅನೇಕ ಹೆಸರುಗಳಿಂದ ಕೆಲವು ರಿಜಿಸ್ಟರ್ ಆದ ಇಸ್ಲಾಮಿಕ್ ಸಂಸ್ಥೆ ಗಳಿರುವಾಗ, ಕೆಲವು ರಿಜಿಷ್ಟರ್ ಆಗದ ಸಂಸ್ಥೆಗಳು, ಸಂಘಗಳು ಅನೇಕ ಇವೆ. ಇಸ್ಲಾಮಿಕ್ ಸಂಘಗಳಲ್ಲಿ ಸ್ಥಾನಿಕವಾಗಿರುವ ಕೆಲವರು ಆ ಸಂಘಗಳನ್ನು ನಡೆಸುತ್ತಿರುವರು. ಕೆಲವು ಸಂಘಗಳು ಬೋಧನೆಗೇ ಹೆಚ್ಚಿನ ಪ್ರಾಧಾನ್ಯತೆ

ಕೊಟ್ಟಿರುವಾಗ, ಕೆಲವು ಸಂಘಗಳು ಉಗ್ರವಾದಕ್ಕೇ ಹೆಚ್ಚಿನ ಪ್ರಾಧಾನ್ಯತೆ ಕೊಡುತ್ತಿವೆ. ಸ್ಥಾನಿಕವಾಗಿ ಒಂದು ನಗರದಲ್ಲಿ ಒಂದು ಇಸ್ಲಾಮಿಕ್ ಸಂಘ ಇದೆಯೆಂದುಕೊಳ್ಳಿ. ಹಾಗೇ ಒಂದು ರಾಷ್ಟ್ರ(ರಾಜ್ಯ)ದಲ್ಲಿ 20ರಿಂದ 30ರವರೆಗು ಇಸ್ಲಾಮಿಕ್ ಸಂಘಗಳು ಅನೇಕ ಹೆಸರುಗಳಿಂದ ಇರಬಹುದು. ಆ ಸಂಘಗಳನ್ನು ನಡೆಸುತ್ತಿರುವವರು ಸ್ಥಾನಿಕವಾಗಿಯೇ ಇರುವರು. ಸ್ಥಾನಿಕವಾಗಿದ್ದು ಉಳಿದ ಕೆಲಸಗಳೊಂದಿಗೆ ಸಂಘಗಳನ್ನು ಕೆಲವರು ನಡೆಸುತ್ತಿರುವಾಗ, ಕೆಲವರು ಎಲ್ಲ ಕೆಲಸಗಳೂ ಬಿಟ್ಟು ಸಂಘಗಳಲ್ಲಿಯೇ ಕೆಲಸ ಮಾಡುತ್ತಿರುವರು. ಅಂಥವರಲ್ಲಿ ಕೆಲವರು ಅವರಿಗೆ ತಿಳಿದ ಜ್ಞಾನದವರೆಗು ಸಂಘವನ್ನು ನಡೆಸುತ್ತಿರುವಾಗ, ಕೆಲವರು ಮಾತ್ರ ಮೇಲ್ನೋಟಕ್ಕೆ ಆಧ್ಯಾತ್ಮಿಕತೆಯನ್ನು ಹೇಳುತ್ತಿದ್ದರೂ, ಒಳಗೆ ಉಗ್ರವಾದವನ್ನು ಪ್ರೇರೇಪಿಸುತ್ತಿದ್ದಾರೆ. ಹಾಗೆ ಅವರು ಉಗ್ರವಾದವನ್ನು ಪ್ರೇರೇಪಿಸುವುದಕ್ಕೆ, ತಯಾರು ಮಾಡಿದ ಉಗ್ರವಾದಿಗಳನ್ನು ಏನು ಮಾಡಬೇಕೆನ್ನುವುದಕ್ಕೆ ಪ್ರತ್ಯೇಕಿಸಿ, ಒಂದು ರಾಷ್ಟ್ರಕ್ಕೆಲ್ಲಾ ಒಬ್ಬ ವ್ಯಕ್ತಿಯಾಗಲೀ ಇಲ್ಲವೆ ಇಬ್ಬರು ವ್ಯಕ್ತಿಗಳಾಗಲೀ ಮೂಲ ಕಾರಕರಾಗಿ ಇರುತ್ತಾರೆ. ದೊಡ್ಡ ರಾಷ್ಟ್ರವಾದರೇ ಇಬ್ಬರು, ಚಿಕ್ಕ ರಾಷ್ಟ್ರವಾದರೇ ಒಬ್ಬರು ರಾಷ್ಟ್ರ ನಿರ್ವಹಣಾಧಿಕಾರಿ ಇರುತ್ತಾರೆ. ಕರ್ನಾಟಕ ರಾಷ್ಟ್ರಕ್ಕೆಲ್ಲಾ ಒಬ್ಬ ವ್ಯಕ್ತಿ ನಿರ್ವಹಣಾಧಿಕಾರಿ ಇದ್ದಾನೆಂದುಕೋ, ಆತನು ಎಲ್ಲಾ ಇಸ್ಲಾಮಿಕ್ ಆಧ್ಯಾತ್ಮಿಕ ಸೆಂಟರ್‌ಗಳೊಂದಿಗೆ ಸಂಬಂಧ ಇಟ್ಟುಕೊಂಡಿರುತ್ತಾನೆ. ಆತನು ಸಾಧಾರಣ ವ್ಯಕ್ತಿಯಾಗಿದ್ದೂ ರಾಜ್ಯವೆಲ್ಲಾ ತಿರುಗುತ್ತಾ ಪ್ರತಿ ಪಟ್ಟಣದಲ್ಲಿರುವ ಇಸ್ಲಾಮಿಕ್ ಸಂಘಗಳೊಂದಿಗೆ ಭೇಟಿಯಾಗಿ ಮಾತನಾಡುತ್ತಿರುವನು. ಆತನು ಇಸ್ಲಾಮಿಕ್ ಸಂಘಗಳನ್ನು ಉತ್ಸಾಹಪಡಿಸುತ್ತಾ, ಚೆನ್ನಾಗಿ ಆಸಕ್ತಿಯಾಗಿ ಕೆಲಸ ಮಾಡುವ ಸಂಘಗಳೊಂದಿಗೆ ಭೇಟಿಯಾಗಿ ಅವರಿಗಿರುವ ಶ್ರದ್ಧೆಯನ್ನನುಸರಿಸಿ, ಅವರು ಕೆಲಸ ಮಾಡುತ್ತಿರುವ ವಿಧಾನವನ್ನನುಸರಿಸಿ ಆರ್ಥಿಕ ಸಹಾಯ ಮಾಡುತ್ತಿರುವನು. ಆತನು ಒಂದು ರಾಷ್ಟ್ರದಲ್ಲಿನ ಎಲ್ಲಾ ಇಸ್ಲಾಮಿಕ್ ಸಂಘಗಳಿಗು ರಥಸಾರಥಿಯಾಗಿ ಕೆಲಸ ಮಾಡುತ್ತಿದ್ದರೂ, ಆತನು ಅಂತಹ ಕೆಲಸ ಮಾಡುತ್ತಿದ್ದಾನೆಂದು ಯಾರೂ ಗುರುತಿಸದಂತಿರುತ್ತಾನೆ.

ರಾಷ್ಟ್ರದಲ್ಲಿನ ಮುಸ್ಲೀಮ್ ಸಂಘಗಳಿಗೆಲ್ಲಾ ಒಬ್ಬ ಏಜೆಂಟಾಗಿ ಕೆಲಸ ಮಾಡುತ್ತಿರುವ ಆ ವ್ಯಕ್ತಿ, ಸಂಘಗಳನ್ನು ಪ್ರೇರೇಪಿಸಿ ಚೆನ್ನಾಗಿ ಕೆಲಸ ಮಾಡಿಸುವುದಲ್ಲದೆ, ವಿದೇಶೀ ಮುಸ್ಲೀಮ್‌ರಿಗೂ ಸ್ವದೇಶೀ ಮುಸ್ಲೀಮ್ ಸಂಘಗಳಿಗೂ ಮಧ್ಯವರ್ತಿಯಾಗಿ ಇರುತ್ತಾನೆ. ತನ್ನ ಹತ್ತಿರ ವಿದೇಶೀ ಹಣವನ್ನು ಕೂಡಿಟ್ಟುಕೊಂಡು ಯಾವಾಗಾದರೂ ಯಾವ ಸಂಘಕ್ಕಾದರೂ ಆರ್ಥಿಕ ಅವಶ್ಯಕತೆಬಂದರೆ, ಆ ಅವಶ್ಯಕ್ಕೆ ಹಣಕೊಡುತ್ತಿರುವನು. ಒಂದು ರಾಷ್ಟ್ರದಲ್ಲಿನ ಸಂಘಗಳೆಲ್ಲವುಗಳಿಗೂ ಆರ್ಥಿಕ ಸಹಾಯ ಮಾಡುತ್ತಾ ಮೂಲವ್ಯಕ್ತಿಯಾಗಿದ್ದ ಆತನು, ಮೊದಲು ಇಸ್ಲಾಮಿಕ್ ಸಂಘಗಳಲ್ಲಿ ಉಗ್ರವಾದ ಬೀಜಗಳನ್ನು ನೆಡುತ್ತಿದ್ದಾನೆ. ಆತನ ಕೆಲಸ ರಾಷ್ಟ್ರವೆಲ್ಲಾ ತಿರುಗುವ ಕೆಲಸವೇ, ಆದ್ದರಿಂದ ರಾಷ್ಟ್ರದಲ್ಲಿ ಅವರ ಮುಸ್ಲೀಮ್‌ರಲ್ಲಿ ಯಾರು ಎಷ್ಟು ಬುದ್ಧಿವಂತರೆಂದು ನಿಘಾ ಇಟ್ಟು ನೋಡುತ್ತಿರುವನು. ಎಲ್ಲಾದರೂ ಬುದ್ಧಿವಂತನಾದ ಮುಸ್ಲೀಮ್ ಯುವಕನು ಇದ್ದಾನೆಂದರೇ, ಆತನೊಂದಿಗೆ ಮುಸ್ಲೀಮ್ ಸಂಘದವರು ಭೇಟಿಯಾಗುವಂತೆ ಪರಿಚಯ ಏರ್ಪಡುವಂತೆ ಮಾಡಿ, ನಿದಾನವಾಗಿ ಸಂಘವನ್ನು ಕುರಿತು ತಿಳಿಸಿ, ಆ ಸಂಘಕ್ಕೆ ಸಹಾನುಭೂತಿ ತೋರಿಸುವನಾಗಿಯೊ, ಅಥವಾ ಸದಸ್ಯನನ್ನಾಗಿಯೊ ಇರುವಂತೆ ಮಾಡುತ್ತಾನೆ. ನಂತರ ಸ್ವಲ್ಪ ಕಾಲದಿಂದ ಬಂದಿರುವ ಯುವಕರಲ್ಲಿ ನಿದಾನವಾಗಿ ಆಧ್ಯಾತ್ಮಿಕ ಬೋಧನೆಯೆಂದು ಕಲಿಸುತ್ತಾ, ಸಂಘದಿಂದ ಉಗ್ರವಾದವನ್ನು ಬೋಧಿಸುವಂತೆ ಮಾಡುತ್ತಾನೆ. ಆ ರೀತಿ ರಾಷ್ಟ್ರದಲ್ಲಿನ ಬುದ್ಧಿವಂತರಾದ ಯುವಕರು ಉಗ್ರವಾದ ಗಾಳದಲ್ಲಿ ಸಿಲುಕಿಕೊಳ್ಳುತ್ತಿದ್ದಾರೆ. ಒಂದು ಬಾರಿ ಅತ್ತ ಹೆಜ್ಜೆ ಹಾಕಿದ ಯಾರೇಯಾಗಲೀ ಹಿಂತಿರುಗಿ ಬರುವುದಿಲ್ಲ. ಏಕೆಂದರೇ ಇಸ್ಲಾಮಿಕ್ ಆಧ್ಯಾತ್ಮಿಕ ಸಂಘಗಳವರೇ ಬಂದಿರುವವರನ್ನು ತಿರುಗಿ ಹೋಗದಂತೆ ಬದಲಾಯಿಸಿಕೊಳ್ಳುತ್ತಿದ್ದಾರೆ. ಅಷ್ಟೇ ಅಲ್ಲದೆ ರಾಷ್ಟ್ರಕ್ಕೆ ಉಗ್ರವಾದ ಏಜೆಂಟಾಗಿ ಕೆಲಸ ಮಾಡುವ ವ್ಯಕ್ತಿ ಮೇಲಿಂದ ಎಲ್ಲ ಗಮನಿಸುತ್ತಿರುವನು. ರಾಷ್ಟ್ರಕ್ಕೆಲ್ಲಾ ಮೂಲಕಾರಕನಾದ ವ್ಯಕ್ತಿ ವಿದೇಶೀ ಉಗ್ರವಾದ ಸಂಸ್ಥೆಗಳಿಂದ ಬರುವ ಆರ್ಥಿಕ ಸಹಾಯವನ್ನು ತಂದು ನೇರವಾಗಿ ಉಗ್ರವಾದಿಗಳನ್ನು ಬೆಳೆಸಿ

ಪೋಷಿಸುವ ಸಂಘಗಳಿಗೆ ಒದಗಿಸುತ್ತಿದ್ದಾನೆ. ಆದ್ದರಿಂದ ಕೆಲವು ಸಂಘಗಳು ಉಗ್ರವಾದವನ್ನು ಬೆಳೆಸುವುದರಲ್ಲಿ ಉತ್ಸಾಹದಿಂದ ಇವೆ.

ಎರಡು ಅಥವಾ ಮೂರು ಸಂವತ್ಸರಗಳಿಗೆ ಮಾನಸಿಕವಾಗಿ ಪೂರ್ತಿ ಉಗ್ರವಾದಿಗಳಾಗಿ ಬದಲಾದ ಅವರು, ಸ್ವತಃವಾಗಿ ಉಗ್ರವಾದ ಕಾರ್ಯಗಳಲ್ಲಿ ಭಾಗವಹಿಸುವುದಕ್ಕೆ ಇತರ ದೇಶಗಳಿಗೆ ಹೋಗುತ್ತಿದ್ದಾರೆ. ಎಲ್ಲಾದರೇ ಇಸ್ಲಾಮಿಕ್ ಆಧ್ಯಾತ್ಮಿಕ ಕೇಂದ್ರಗಳಿವೆಯೋ, ಅಲ್ಲೇ ಉಗ್ರವಾದ ಬೀಜಗಳು ಮೊಳಕೆಯೊಡೆದು ವೃಕ್ಷಗಳಾಗಿ ತಯಾರಾಗುತ್ತಿವೆ. ಉಗ್ರವಾದಿಗಳಾಗಿ ತಯಾರಾದವರು ತಾವು ಜ್ಞಾನವನ್ನು ತಿಳಿದುಕೊಳ್ಳಲಾರದೆ ಹೋಗಿದ್ದೇವೆಂದು ಚಿಂತಿಸದೆ, ಈಗಿನಿಂದ ಇತರ ಮತಗಳವರನ್ನು ಸಾಯಿಸಿ ತಮ್ಮ ಮತವನ್ನು ಉದ್ಧರಿಸಬೇಕೆಂಬ ಯೋಚನೆಯಲ್ಲೇ ಇರುವರು. ಪೂರ್ಣ ಮಟ್ಟದ ಉಗ್ರವಾದಿಗಳಾದ ನಂತರ ರಾಷ್ಟ್ರದಲ್ಲಿ ಉಗ್ರವಾದ ಬೀಜಗಳನ್ನು ನಾಟಿ ಏನೂ ತಿಳಿಯದ ವ್ಯಕ್ತಿಯಾಗಿ ತಿರುಗುತ್ತಿರುವ ಏಜೆಂಟ್ ಎಂಬ ವ್ಯಕ್ತಿ ತಯಾರಾದ ಉಗ್ರವಾದಿಗಳನ್ನು ಆಯ್ಕೆ ಮಾಡಿಕೊಂಡು, ಅವರಿಗೆ ಆರ್ಥಿಕ ಸಹಾಯವನ್ನು ಮಾಡಿ ವಿದೇಶಗಳಿಗೆ ಕಳುಹಿಸುತ್ತಿರುವನು. ವಿದೇಶಗಳಲ್ಲಿನ ಉಗ್ರವಾದಿಗಳಿಗು ಸ್ವದೇಶದಲ್ಲಿ ತಯಾರಾದ ಉಗ್ರವಾದಿಗಳಿಗು ಅನುಬಂಧವಾಗಿರುವ ವ್ಯಕ್ತಿ ಹೊಸದಾಗಿ ತಯಾರಾದವರನ್ನು ಎಲ್ಲಿಗೆ ಅವಶ್ಯಬಂದರೆ ಅಲ್ಲಿಗೆ ಕಳುಹಿಸುವನು. ಭಾರತದೇಶದಲ್ಲಿನ ಮುಸ್ಲೀಮ್‌ರೇ ವಿದೇಶಗಳವರಿಗೆ ಏಜೆಂಟುಗಳಾಗಿ ಕೆಲಸ ಮಾಡುತ್ತಿದ್ದಾರೆ. ಭಾರತದೇಶದಲ್ಲಿ ಕಾಶ್ಮೀರದಲ್ಲಿ ಒಂದು ವಿಧ, ಆಂಧ್ರಾದಲ್ಲಿ ಒಂದು ವಿಧದ ವಿಧಾನವನ್ನು ಅನುಸರಿಸುತ್ತಾ ಉಗ್ರವಾದಿಗಳನ್ನು, ಏಜೆಂಟುಗಳಾಗಿದ್ದವರು ತಯಾರು ಮಾಡುತ್ತಿದ್ದಾರೆ. ಎಲ್ಲಿ ಅನುಕೂಲವನ್ನನುಸರಿಸಿ ಅಲ್ಲಿ ವಿದೇಶೀ ಏಜೆಂಟ್‌ಗಳಾಗಿರುವವರು ಉಗ್ರವಾದವನ್ನು ತಯಾರುಮಾಡುತ್ತಿದ್ದಾರೆ. ಈ ಮಧ್ಯಕಾಲದಲ್ಲಿ ವಿದೇಶಗಳಲ್ಲಿ ಮರಣಿಸಿದ ಉಗ್ರವಾದಿಗಳು ಭಾರತದೇಶದಿಂದ ಬಂದಿರುವವರೇಯೆಂದು ತಿಳಿದಿದೆ. ಇತರ ರಾಷ್ಟ್ರಗಳಲ್ಲಿ ನಡೆದ ಕೆಲವು ಉಗ್ರವಾದ ಕಾರ್ಯಗಳಲ್ಲಿ ನಮ್ಮ ರಾಷ್ಟ್ರಗಳಿಗೆ ಸಂಬಂಧಿಸಿರುವಂತೆ ತಿಳಿದಿದೆ. ಹೈದರಾಬಾದ್

ನಿಂದ ಹೋಗಿರುವ ಉಗ್ರವಾದಿಗಳು ಇರಾಕ್, ಸಿರಿಯಾ ದೇಶಗಳಲ್ಲಿಯೂ ಸಹ ದಬ್ಬಾಳಿಕೆ ವಿಷಯ ತಿಳಿದಿರುವುದೇ. ವಿದೇಶಗಳಿಗೆ ಹೋಗುತ್ತಾ ದಬ್ಬಾಳಿಕೆ ನಡೆಸುತ್ತಿರುವ ಮುಸ್ಲೀಮ್ ಯುವಕರ ವಿಷಯ ಎಲ್ಲರಿಗೂ ತಿಳಿದಿರುವುದೇ. ಕೆಲವು ಕಡೆ ಉಗ್ರವಾದಿಗಳನ್ನು ಗುರುತಿಸಿದ ಪೋಲೀಸರು ಉಗ್ರವಾದ ತಯಾರಾಗುವುದಕ್ಕೆ ಮೂಲಕರ್ತರಾದ ವಿದೇಶೀ ಏಜೆಂಟ್‌ಗಳಾಗಿ ಕೆಲಸ ಮಾಡುವ ಸ್ವದೇಶೀಯರನ್ನು ಗುರುತಿಸಲಾರದೆ ಹೋಗಿದ್ದಾರೆ.

ಒಂದು ಏರಿಯಾದಲ್ಲಿ ನಕ್ಸಲ್ಸ್ ತಯಾರಾಗುವುದಕ್ಕೆ ಒಬ್ಬ ವ್ಯಕ್ತಿ ಮೂಲಕರ್ತನಾಗಿ ವ್ಯವಹರಿಸಿ, ಯಾರಿಗೂ ತಿಳಿಯದಂತೆ ಆ ಪ್ರಾಂತದಲ್ಲಿ ನಕ್ಸಲ್ಸ್‌ರನ್ನು ತಯಾರು ಮಾಡುವನು. ಹಾಗೆ ತಯಾರಾದ ನಕ್ಸಲ್ಸ್‌ರನ್ನು ಬೆಳೆಸಿ ಪೋಷಿಸುವುದಕ್ಕೆ, ಅವರಿಗೆ ಬೇಕಾದ ವಿಷಯಗಳನ್ನು ತಿಳಿಸುವುದಕ್ಕೂ, ಸೇಕರಿಸುವುದಕ್ಕೂ ಮುಖ್ಯಪಾತ್ರ ವಹಿಸುತ್ತಿರುವ ವ್ಯಕ್ತಿ ಸರ್ವಸಾಧಾರಣವಾಗಿ ಯಾರೂ ಗುರುತಿಸದಂತೆ ಮನುಷ್ಯರ ಮಧ್ಯದಲ್ಲಿದ್ದು, ತನ್ನ ಕಾರ್ಯಕಲಾಪಗಳನ್ನು ಮುಂದುವರೆಸಿಕೊಳ್ಳುವನು. ಅದೇ ವಿಧವಾದ ಪದ್ಧತಿಯನ್ನು ಉಗ್ರವಾದವನ್ನು ತಯಾರು ಮಾಡುವವರು ಸಹ ಅನುಸರಿಸುತ್ತಿದ್ದಾರೆ. ಇಲ್ಲಿ ಇಲ್ಲಿಯವರೆಗು ಮುಸ್ಲೀಮ್‌ರ ವಿಷಯವನ್ನೇ ಹೇಳಿದ್ದೇವೆ. ಮುಸ್ಲೀಮ್‌ರು ಹಾಗೆ ಬದಲಾಗುವುದಕ್ಕೆ ಜ್ಞಾನ ವಿಷಯದಲ್ಲಿ ಬೇಧಾಭಿಪ್ರಾಯಗಳು ಇರುವುದರಿಂದಲೇ ಎಂದು ಹೇಳಿಕೊಂಡಿದ್ದೇವೆ. ದೇವರು ಹೇಳಿದ ಒಂದೇ ಜ್ಞಾನ ಹಿಂದುಗಳಿಗೆ ಒಂದು ವಿಧ, ಮುಸ್ಲೀಮ್‌ರಿಗೆ ಮತ್ತೊಂದು ವಿಧವಾಗಿ ಅರ್ಥವಾಗುವುದರಿಂದ ನಾನೇ ಸತ್ಯ, ನಾನೇ ಸಕ್ರಮವೆಂದು, ಇತರರು ಸರಿಯಲ್ಲವೆಂದು ಒಬ್ಬರಿಗೊಬ್ಬರು ಸಾಯಿಸಿಕೊಳ್ಳುವ ಸ್ಥಿತಿಗೆ ಬಂದಿದ್ದಾರೆ. ವಿದೇಶಗಳಲ್ಲಿ ಕೆಲವು ಕಡೆ ಒಂದೇ ಮುಸ್ಲೀಮ್‌ರೇ ಒಬ್ಬರಿಗೊಬ್ಬರು ಉಗ್ರವಾದಿಗಳಾಗಿ ಅವರನ್ನು ಅವರೇ ಸಾಯಿಸಿಕೊಳ್ಳುತ್ತಿದ್ದಾರೆಂದರೇ ಅಲ್ಲಿ ಅವರಲ್ಲಿಯೂ ಸಹ ಜ್ಞಾನದಲ್ಲಿ ಎತ್ತಿ ತೋರಿಸಿದ ಅಭಿಪ್ರಾಯ ಬೇಧಭಾವಗಳೇ ಕಾರಣವೆಂದು ಹೇಳಬಹುದು. ಉಗ್ರವಾದ ಒಂದು ಮತಕ್ಕೇ ಪರಿಮಿತಿಯಲ್ಲ, ಎಲ್ಲ ಮತಗಳಲ್ಲಿಯೂ ಅಷ್ಟೋ

ಇಷ್ಟೋ ಇದೆ. ಆದರೇ ಮುಸ್ಲೀಮ್‌ರಲ್ಲಿಯೇ ಇನ್ನೂ ಹೆಚ್ಚಾಗಿ ಇದೆ. ಚೆನ್ನಾಗಿ ಗಮನಿಸಬೇಕಾದ ವಿಷಯ ಏನೆಂದರೇ! ಎಲ್ಲಿ ಉಗ್ರವಾದವಿದ್ದರೂ ಅಲ್ಲಿ ಅದಷ್ಟಕ್ಕದೇ ತಯಾರಾಗುತ್ತಿಲ್ಲ. ಸಾಮಾನ್ಯ ಪ್ರಜೆಗಳನ್ನು ಉಗ್ರವಾದಿಗಳಾಗಿ ಬದಲಾಯಿಸುವ ಅದೃಶ್ಯಶಕ್ತಿಗ ಳಾಗಿರುವವರು ಅಲ್ಲಿ ಇದ್ದೇ ಇರುತ್ತಾರೆ.

ಭೂಮಿಮೇಲೆ ತಯಾರಾದ ಉಗ್ರವಾದಿಗಳನ್ನು ಎಷ್ಟು ಜನರನ್ನು ಬಂಧಿಸಿದರೂ, ಎಷ್ಟು ಜನರನ್ನು ಸಾಯಿಸಿದರೂ, ಪುನಃ ಹೊಸ ಉಗ್ರವಾದಿಗಳು ತಯಾರಾಗುತ್ತಿರುತ್ತಾರೆ. ಉಗ್ರವಾದ ಸಮೂಲವಾಗಿ ಹೋಗಬೇಕೆಂದರೇ ಹೊಸಬರನ್ನು ತಯಾರು ಮಾಡುತ್ತಾ, ಯಾರಿಗೂ ಕಾಣಿಸದಂತಿರುವ ಮೂಲಕರ್ತರನ್ನು ಇಲ್ಲದಂತೆ ಮಾಡಬೇಕು. ಆಗಲೇ ಭೂಮಿ ಮೇಲೆ ಉಗ್ರವಾದ ಇಲ್ಲದಂತೆ ಹೋಗಬಲ್ಲದು. ನಾವು ಈ ರೀತಿ ಬರೆಯುವುದರಿಂದ ಮುಸ್ಲೀಮ್‌ರು ಸ್ವಚ್ಛವಾದ ಜ್ಞಾನಿಗಳಾಗಿ ತಯಾರಾಗಬಲ್ಲರೆಂದೂ, ಉಗ್ರವಾದದ ಕಡೆ ಹೋಗದಂತೆ ಇರುವರೆಂದು ಆಶಿಸುತ್ತಿದ್ದೇವೆ. ಉಗ್ರವಾದ ಮನುಸ್ಯನ ತಲೆಯಲ್ಲಿ ಹುಟ್ಟುತ್ತಿದೆ. ಮನುಷ್ಯರ್‍ಯಾರಾದರಾಗಲಿ ಅವನ ಭಾವನೆಗಳಲ್ಲಿನ ಬದಲಾವಣೆಯಿಂದ ಉಗ್ರವಾದ ತಯಾರಾಗುತ್ತಿದೆ. ಆದ್ದರಿಂದ ಉಗ್ರವಾದ ಒಂದು ಮತಕ್ಕೇ ಪರಿಮಿತವಲ್ಲ. ಈ ದಿನ ಇಸ್ಲಾಮ್ ಮತದಲ್ಲಿ ಹೆಚ್ಚಾಗಿರುವ ಉಗ್ರವಾದ ನಾಳೆ ಇನ್ನೊಂದು ಮತದಲ್ಲಿ ಹೆಚ್ಚಾಗಿ ಕಾಣಬಹುದು. ಈದಿನ ಭಾರತದೇಶದಲ್ಲಿನ ಪರಿಸ್ಥಿತಿಯನ್ನು ನೋಡಿದರೇ, ಕಳೆದ ಕೆಲವು ವರ್ಷಗಳಿದ ಮುಸ್ಲೀಮ್‌ರು ತಮ್ಮ ಸಂಖ್ಯೆಯನ್ನು ಬೆಳಸಿಕೊಳ್ಳಬೇಕೆಂಬ ಉದ್ದೇಶದಿಂದ, ಆ ಮತದಲ್ಲಿನ ಕೆಲವರು ಉಗ್ರವಾದವನ್ನು ತಯಾರು ಮಾಡಿದ್ದಾರೆಂದು ಹೇಳಿದ್ದೇವೆ. ಕಳೆದ ಇಪ್ಪತ್ತು ಅಥವಾ ಮೂವತ್ತು ವರ್ಷಗಳಿಂದ ಇಸ್ಲಾಮ್ ಮತದಲ್ಲಿ ಬೆಳೆದ ವೇಗವನ್ನನುಸರಿಸಿ ನೋಡಿದರೇ ತಿಳಿಯುತ್ತದೆ. ಇಸ್ಲಾಮ್ ಮತ ತಮ್ಮ ಮತವನ್ನು ಬೆಳಸಿಕೊಳ್ಳುವುದರಲ್ಲಿ ಮಗ್ನರಾಗಿರುವಾಗ, ಕಳೆದ ಹತ್ತು ವರ್ಷಗಳಿಂದ ಹಿಂದೂಮತದವರು ತಮ್ಮ ಮತವನ್ನು ರಕ್ಷಿಸಿಕೊಳ್ಳುವ ದಿಶೆಯಲ್ಲಿ ಅವರೂ ಸಹ ಹಿಂಸಾಮಾರ್ಗವನ್ನು ಅವಲಂಭಿಸುತ್ತಿದ್ದಾರೆ. ಹಿಂದೂಗಳು ಕ್ರೈಸ್ತಮತದಿಂದ

ಹಿಂದೂಮತ ಕ್ಷೀಣಿಸಿ ಹೋಗುತ್ತಿದೆಯೆಂದು ಕ್ರೈಸ್ತರ ಮೇಲೆ ದ್ವೇಷ ಬೆಳೆಸಿಕೊಂಡಿದ್ದಾರೆ.

ದ್ವೇಷ ಕೊನೆಗೆ ಹಿಂಸೆಯಾಗಿ ಬದಲಾಗುತ್ತದೆಂದು, ಹಿಂಸೆ ಮಾಡುವುದನ್ನೇ ಉಗ್ರವಾದವೆನ್ನುತ್ತೇವೆಂದು ಸಹ ಹೇಳಿಕೊಂಡಿದ್ದೇವೆ. ಹಿಂದೂ ಮತ ಕ್ಷೀಣಿಸಿ ಹೋಗುತ್ತಿದೆಯೆಂಬ ದ್ವೇಷದಿಂದ, ಹಿಂದೂಗಳು ಕ್ರೈಸ್ತವರಾಗಿ ಬದಲಾಗಿದ್ದಾರೆಂಬ ಉದ್ದೇಶದಿಂದ ಹಿಂದೂಗಳು ಕ್ರೈಸ್ತರಮೇಲೆ ಹೆಚ್ಚಾಗಿ ದ್ವೇಷವನ್ನು ಬೆಳೆಸಿಕೊಂಡಿದ್ದಾರೆ. ತಮ್ಮ ಮತವನ್ನು ರಕ್ಷಿಸುವುದಕ್ಕೆಂದು ಹೇಳಿ ಹಿಂದೂಗಳು ಸಹ ಕೆಲವು ಸಂಘಗಳಾಗಿ ತಯಾರಾಗಿದ್ದಾರೆ. ಹಿಂದೂಗಳಲ್ಲಿ ತಯಾರಾದ ಸಂಘಗಳು ಆಧ್ಯಾತ್ಮಿಕ ಸಂಘಗಳಹಾಗೆ ಇದ್ದರೂ ಅವು ಪೂರ್ತಿ ರಾಜಕೀಯ ಬಣ್ಣ ಹಚ್ಚಿಕೊಂಡಿವೆ. ಹಿಂದೂ ಮತರಕ್ಷಣೆ, ಹಿಂದೂ ಧರ್ಮರಕ್ಷಣೆ ಎಂಬ ಮುಖ್ಯ ಉದ್ದೇಶದಿಂದ ವಿಶ್ವಹಿಂದೂಪರಿಷತ್, ಶಿವಸೇನೆ, ಭಜರಂಗದಳ್, ಹಿಂದೂ ಧರ್ಮರಕ್ಷಣೆ ಸಮಿತಿ ಎಂಬ ಮೊದಲಾದ ಸಂಘಗಳು ತಯಾರಾದರೂ, ಅವು ಮತ ರಕ್ಷಣೆ ಎಂಬ ಉದ್ದೇಶದಿಂದ ಇದ್ದರೂ, ಕೊನೆಗೆ ರಾಜಕೀಯಬಣ್ಣ ಹಚ್ಚಿಕೊಂಡು ಕ್ರೈಸ್ತವರನ್ನು ಮತಪ್ರಚಾರ ಮಾಡದಂತೆ ಎಲ್ಲಿಯೆಂದರಲ್ಲೆ ಅಡ್ಡಿ ಮಾಡಬೇಕೆಂದುಕೊಂಡಿದ್ದಾರೆ. ಕ್ರೈಸ್ತ ಪ್ರಚಾರವನ್ನು ತಡೆಗಟ್ಟಬೇಕೆಂದು ಕೊಂಡವರು, ಅವರ ಪ್ರಚಾರವನ್ನು ತಡೆಗಟ್ಟದಂತೆ ನೇರವಾಗಿ ಅವರ ಮೇಲೆ ದಾಳಿಗೆ ಇಳಿಯುವುದು ಪ್ರಾರಂಭಿಸಿದ್ದಾರೆ. ಎಲ್ಲಾದರೇ ಮತವನ್ನು ಕುರಿತು, ಜ್ಞಾನವನ್ನು ಕುರಿತು ಹಿಂಸೆಬೆಳೆಯುತ್ತಿದೆಯೋ, ಅಲ್ಲೇ ಉಗ್ರವಾದ ತಯಾರಾ ಗುತ್ತಿದೆ. ಇದನ್ನನುಸರಿಸಿ ಹಿಂದೂ ದೇಶದಲ್ಲಿನ ಹಿಂದೂಗಳಲ್ಲಿಯೂ ಸಹ ಉಗ್ರವಾದ ವಿದೆಯೆಂದು ಹೇಳಬಹುದು.

ಮುಸ್ಲೀಮ್‌ರಲ್ಲಿ ಹಣದ ಆಸೆ ತೋರಿಸಿ ಕೆಲವು ಮಂದಿ ಬಡವರಾದ ಮುಸ್ಲೀಮ್‌ರನ್ನು ಉಗ್ರವಾದಿಗಳಾಗಿ ಬದಲಾಯಿಸುತ್ತಿರುವಾಗ, ಹಿಂದೂಮತದಲ್ಲಿ ಹಾಗೆ ಹಣ ಕೊಡುವವರು ಯಾರೂ ಇಲ್ಲ. ಹಿಂದೂಮತಕ್ಕಾಗಿ ಸ್ವಯಂಕೃಷಿ ಮಾಡಬೇಕಾಗಿದೆ. ಆದ್ದರಿಂದ ಮತಕ್ಕಾಗಿ ಕೆಲಸ ಮಾಡುವವರನ್ನು ಸ್ವಯಂಸೇವಕ್

ಎಂದು ಸಹ ಎನ್ನುತ್ತಿದ್ದಾರೆ. ಇಸ್ಲಾಮ್ ಮತದಲ್ಲಿರುವವರು ದೇವರಿಗು, ದೇವರ ಜ್ಞಾನಕ್ಕೂ ವಿರುದ್ಧವಾಗಿರುವವರ ಮೇಲೆ ಶತ್ರುತ್ವವನ್ನು ತೋರಿಸುತ್ತಿದ್ದಾರೆ. ಅಲ್ಲಿ ಪೂರ್ತಿ ದೇವರ ಜ್ಞಾನದಿಂದ ಮುಡಿಪಟ್ಟಿರುವ ಹೇತುವಾದವಿರುವಾಗ, ಹಿಂದೂಮತದಲ್ಲಿ ತಮ್ಮ ಜ್ಞಾನದಿಂದ ಮುಡಿಪಟ್ಟಿರುವ ವಿಷಯವೇ ಅಲ್ಲದೆ, ಮತ ರಕ್ಷಣೆಯಿಂದ ಮುಡಿಪಟ್ಟಿರುವ ವಿಷಯವಾಗಿದೆ. ಆದರೇ ಭಾರತದೇಶದಲ್ಲಿ ಹಿಂದೂಗಳ ದೃಷ್ಠಿಯೆಲ್ಲಾ ಕ್ರೈಸ್ತರಮೇಲೆಯೇ ಇದೆ. ಮುಸ್ಲೀಮ್‌ರ ದೃಷ್ಠಿಯೆಲ್ಲಾ ಹಿಂದೂಗಳ ಮೇಲೆ ಇದೆ. ಮುಸ್ಲೀಮ್‌ರು ಹಿಂದೂಗಳನ್ನು ಹಿಂಸಿಸಬೇಕೆಂದು ನೋಡುತ್ತಿದ್ದಾರೆ. ಹಿಂದೂಗಳು ಕ್ರೈಸ್ತರನ್ನು ಹಿಂಸಿಸಬೇಕೆಂದು ನೋಡುತ್ತಿದ್ದಾರೆ. ಮೊದಲು ಕ್ರೈಸ್ತ ಮತ ಪ್ರಚಾರವನ್ನು ನಿಲ್ಲಿಸಬೇಕೆಂದು ತಿಳಿದ ಹಿಂದೂಗಳು, ಅದಕ್ಕಾಗಿ ಅನೇಕ ಸಂಘಗಳನ್ನು ತಯಾರು ಮಾಡಿಕೊಂಡಿದ್ದಾರೆ. ಅ ಉದ್ದೇಶ ಕೆಲವು ಸಂದರ್ಭಗಳಲ್ಲಿ ಹಿಂಸೆಯಾಗಿ ಬದಲಾಗುತ್ತಿದೆ. ಹಿಂದೂಗಳಲ್ಲಿ ಮುಖ್ಯ ಲೋಪ ಒಂದು ಇದೆ. ಇಂದಿನ ಕಾಲದಲ್ಲಿ ಯಾವುದು ಜ್ಞಾನವೋ, ಯಾವುದು ಜ್ಞಾನವಲ್ಲವೋ ಅವರಿಗೆ ತಿಳಿಯದಂತೆ ಹೋಗಿದೆ. ಅಷ್ಟೇ ಅಲ್ಲದೆ ಯಾವುದು ಕ್ರೈಸ್ತವ ಜ್ಞಾನವೋ, ಯಾವುದು ಹಿಂದೂ ಜ್ಞಾನವೋ ಸಹ ತಿಳಿಯದಂತಾಗಿದೆ. ಇನ್ನೂ ಆಳವಾಗಿ ಹೇಳಿದರೇ ಹಿಂದೂಗಳ ಗ್ರಂಥಯಾವುದೋ, ಕ್ರೈಸ್ತರ ಗ್ರಂಥಯಾವುದೋ ಸಹ ತಿಳಿಯದ ಸ್ಥಿತಿಯಲ್ಲಿ ಇಂದಿನ ಹಿಂದೂಗಳು ಇದ್ದಾರೆಂದು ಹೇಳಬಹುದು. ಅಂತಹವರು ಎಲ್ಲಿ ಜ್ಞಾನ ಪ್ರಚಾರ ನಡೆಯುತ್ತಿದ್ದರೂ ಅದು ಕ್ರೈಸ್ತರದೆಂದು ತಡೆಗಟ್ಟುವುದು ನಡೆಯುತ್ತಿದೆ.

ಕ್ರೈಸ್ತರು ಅವರ ಮತವನ್ನು ಅವರು ಪ್ರಚಾರ ಮಾಡಿಕೊಳ್ಳುತ್ತಿದ್ದಾರೆ. ಅದಕ್ಕೆ ಆಕರ್ಷಿತರಾದ ಹಿಂದೂಗಳು ಕ್ರೈಸ್ತರಾಗಿ ಬದಲಾಗುತ್ತಿರುವುದು ವಾಸ್ತವವೇ. ಆದರೇ ಹಿಂದೂಗಳು ಏಕೆ ಕ್ರೈಸ್ತವರಾಗಿ ಬದಲಾಗುತ್ತಿದ್ದಾರೆಂದು ಆಲೋಚಿಸದೇ ಕ್ರೈಸ್ತ ಪ್ರಚಾರವನ್ನು ತಡೆಗಟ್ಟುತ್ತಿದ್ದಾರೆ. ಹಿಂದೂಗಳಿಗೆ ಹಿಂದೂ ಜ್ಞಾನವನ್ನು ಯಾರೂ ಹೇಳದೇ ಇರುವುದರಿಂದ, ಕ್ರೈಸ್ತದಲ್ಲಿ ಜ್ಞಾನ ಚೆನ್ನಾಗಿ ಕಾಣಿಸುವುದರಿಂದ, ಅದರೊಳಗೆ ಬಹಳ ಮಂದಿ ಹೋಗಿದ್ದಾರೆ. ಹಿಂದೂಗಳು

ಕ್ರೈಸ್ತರಾಗಿ ಬದಲಾಗುವುದಕ್ಕೆ ಕಾರಣ ತಿಳಿದ ನಾವು, ಅದಕ್ಕೆ ವಿರುದ್ಧವಾಗಿ ಹಿಂದೂ ಜ್ಞಾನವನ್ನು ಭಗವದ್ಗೀತೆ ಬೋಧನೆಯನ್ನು ಪ್ರಚಾರ ಮಾಡಬೇಕೆಂದು ಪ್ರಚಾರವನ್ನು ಆರಂಭಿಸಿದರೇ, ತಮ್ಮ ಜ್ಞಾನಯಾವುದೋ ಪರಮತ ಜ್ಞಾನಯಾವುದೋ ತಿಳಿಯದ ಹಿಂದೂಗಳು ನಮ್ಮ ಪ್ರಚಾರಕರ ಮೇಲೆ ದಾಳಿಮಾಡಿದ ಸಂದರ್ಭಗಳು ಅನೇಕ ಇವೆ. ಮುಸ್ಲೀಮ್‌ರಲ್ಲಿ ಉಗ್ರವಾದವಿದೆ ಅದು ಇತರರ ಮೇಲೆ ಪ್ರಯೋಗಿಸಲ್ಪಡುತ್ತಿದೆ. ಹಿಂದೂಗಳಲ್ಲಿ ಸಹ ಹಿಂಸೆಯಿಂದ ಕೂಡಿಕೊಂಡ ಉಗ್ರವಾದವಿದೆಯಾಗಲೀ ಅದು ತಮ್ಮ ಮತಯಾವುದೋ, ಇತರ ಮತಯಾವುದೋ ಗುರುತಿಸದ ಸ್ಥಿತಿಯಲ್ಲಿ ತಮ್ಮ ಮತದ ಮೇಲೆಯೇ ದಾಳಿಮಾಡುತ್ತಿದೆ. ಕಣ್ಣು ಕಾಣಿಸದ ಸರ್ಪ ತನ್ನ ಮರಿಗಳನ್ನು ತಾನೇ ತಿಂದಹಾಗೆ ಹಿಂದೂಗಳಲ್ಲಿನ ಅಜ್ಞಾನಿಗಳು ತಮ್ಮ ಮತದಮೇಲೆಯೇ ತಾವು ದಾಳಿ ಮಾಡುವುದು ನಡೆಯುತ್ತಿದೆ. ಯುಗಾದಿಯೊಂದಿಗೆ ಪ್ರಾರಂಭವಾದ ಕ್ಯಾಲೆಂಡರ್ ಹಿಂದುಗಳಿಗೆ ಪರಮತ ಕ್ಯಾಲೆಂಡರಾಗಿ ಕಾಣಿಸಿದೆ. ಭಗವದ್ಗೀತೆ ಹಿಂದೂತ್ವಕ್ಕೆ ಸಂಬಂಧಿಸಿರುವುದೆಂದು ತಿಳಿಯದ ಹಿಂದೂ ಉಗ್ರವಾದಿಗಳು ಭಗವದ್ಗೀತೆಯನ್ನು ನಡುರಸ್ತೆಯಲ್ಲಿ ಸುಡುವುದು ನಡೆದಿದೆ. ಅನಂತಪುರಂ ಜಿಲ್ಲೆಯಲ್ಲಿ ಗುಂತಕಲ್ಲು ಪಟ್ಟಣದಲ್ಲಿ ಹಿಂದೂ ಸಂಘಗಳಿರುವ ಕಡೆ ಯುಗಾದಿ ಕ್ಯಾಲೆಂಡರನ್ನು, ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಪರಮತ ಪ್ರಚಾರವೆಂದು ಹೇಳಿ ಸುಡುವುದರಿಂದ ಹಿಂದೂತ್ವದಲ್ಲಿನ ಉಗ್ರವಾದ ಹೊರಬೀಳುವುದೇ ಅಲ್ಲದೆ, ಹಿಂದೂಗಳಲ್ಲಿನ ಉಗ್ರವಾದ ಕುರುಡುದೆಂದು ತಿಳಿದುಹೋಗಿದೆ.

ಕೊನೆಯದಾಗಿ ನಾವು ಹೇಳುವ ಮಾತು ಏನೆಂದರೆ, ದೇವರು ನಮಗೆ ಕೊಟ್ಟಿರುವ ಜ್ಞಾನ ಭಗವದ್ಗೀತೆ (ತೌರಾತು) ಗ್ರಂಥವಾಗಿ ನಮ್ಮಮುಂದಿದೆ. ಅದೇ ಜ್ಞಾನ ಇನ್ನೂ ಎರಡು ಗ್ರಂಥಗಳಾಗಿ ಇತರ ದೇಶಗಳಲ್ಲಿ ಹೇಳಲಾಗಿದೆ. ಒಂದೇ ದೇವರ ಜ್ಞಾನವೇ ಮೂರು ಗ್ರಂಥಗಳಾಗಿದೆಯೆಂದು ಖುರ್‌ಆನ್‌ನಲ್ಲಿ ಐದನೆಯ ಮತ್ತು ಆರನೆಯ ಸೂರಾದಲ್ಲಿ ಹೇಳುವುದು ನಡೆದಿದೆ. ಅದರೇ ಒಬ್ಬನೇ ದೇವರು ಹೇಳಿದ ಒಂದೇ ಜ್ಞಾನವನ್ನು ಮನುಷ್ಯ ಒಂದೇ ವಿಧವಾಗಿ

ಅರ್ಥ ಮಾಡಿಕೊಳ್ಳದಿರುವುದರಿಂದ ಜ್ಞಾನ ಮೂರು ವಿಧಗಳಲ್ಲಿ ಅರ್ಥವಾಗಿ, ಮೂರು ಮತಗಳಾಗಿ ಬದಲಾಗಿಹೋಗಿದೆ. ಇಂದಿಗಾದರೂ ನಡೆದುಹೋದ ತಪ್ಪನ್ನು ತಿಳಿದುಕೊಂಡು, ಮತಗಳ ಹುಚ್ಚು ಬಿಟ್ಟು ದೇವರ ಜ್ಞಾನದ ಮೇಲೆ ಧ್ಯಾಸವನ್ನು ಬೆಳೆಸಿಕೊಳ್ಳಿರೆಂದು ಮತ್ತೆ ಮತ್ತೆ ತಿಳಿಸುತ್ತಾ ಇಲ್ಲಿಗೆ ಮುಗಿಸುತ್ತಿದ್ದೇವೆ.

**ಸಮಾಪ್ತಿ**



# ನನ್ನ ಕೊನೆಯ ಮಾತು

ಈ ಗ್ರಂಥವನ್ನು ಓದಿದ ನಂತರ ಕೆಲವರು ನಮ್ಮ ಬರವಣಿಗೆಯನ್ನು ಮೆಚ್ಚಿಕೊಳ್ಳುವುದು, ಮತ್ತು ಕೆಲವರು ನೊಂದುಕೊಳ್ಳುವುದು ನಡೆಯುತ್ತದೆ. ಇದರಲ್ಲಿ ಹೇಳಿದ ಜ್ಞಾನ ಅರ್ಥವಾದವರು ಬಹಳ ಮಂದಿ ಸಂತೋಷಿಸುತ್ತಾರೆ. ಅರ್ಥವಾಗದವರು ಸ್ವಲ್ಪ ಇಕ್ಕಟ್ಟು ಕಲುಗಿದವರಾಗಿ ನನ್ನನ್ನು ದೂಷಿಸಬಲ್ಲರು, ದ್ವೇಷಿಸಬಲ್ಲರು. ಪ್ರಪಂಚದಿಂದ ಬರುವ ದೂಷಣ, ಭೂಷಣಗಳು ಎರಡೂ ನನಗೆ ಸಮಾನವೇ. ಯಾವ ಕಾರ್ಯದಲ್ಲಿ ಆದರೂ ದೂಷಣ, ಭೂಷಣಗಳು ಎರಡೂ ಇರುತ್ತವೆ. ಆದರೇ ನಾನು ಮಾಡಿದ ಕೆಲಸ ಒಳ್ಳೆಯದಾ, ಕೆಟ್ಟದಾ? ಜ್ಞಾನ ಉಂಟಾಗಿದೆಯಾ. ಅಜ್ಞಾನ ಉಂಟಾಗಿದೆಯಾ? ಎಂದು ನೋಡಿಕೊಳ್ಳಬೇಕಾಗಿದೆ. ಒಂದು ಕೆಲಸ ಮಾಡುವುದರಲ್ಲಿ ನಮ್ಮ ಪಾತ್ರ ಎಷ್ಟು ಎಂದು ನೋಡಿದರೇ, ಆಡಿಸುವವನು ಆಡಿಸಿದಂತೆ ಆಡುವುದೇ ನನ್ನ ಪಾತ್ರ ಎಂದು ತಿಳಿದುಹೋಗಿದೆ. ಸ್ವತಹವಾಗಿ ನಾನೇ ಅಲ್ಲ ಪ್ರಪಂಚದಲ್ಲಿ ಯಾರೂ ಆಡಲಾರರು. ಖುರ್‌ಆನ್‌ನಲ್ಲಿ ಸೂರಾ 50, ಆಯತ್ 21ರಲ್ಲಿ ಹೇಳಿದಂತೆ **"ಪ್ರತಿ ಮನುಷ್ಯ ಒಬ್ಬ ಆಡಿಸುವವನೊಂದಿಗೂ, ಸಾಕ್ಷಿಯಾಗಿ ನೋಡುವವ ನೊಂದಿಗೂ ಸೇರಿ ಬರುತ್ತಾನೆ"** ಎಂದು ಹೇಳಿದಂತೆ, ಮನುಷ್ಯನಾದ ನಾನು ನನ್ನನ್ನು ಆಡಿಸುವ ಆತ್ಮನೊಂದಿಗೆ ಸೇರಿ ಇದ್ದೇನೆ. ಪ್ರತಿಯೊಂದು ಕೆಲಸವನ್ನು ಆಟವಾಗಿ ತಿಳಿದರೇ ಈ ಗ್ರಂಥವನ್ನು

ಬರೆಯಿಸಿರುವುದು ನನ್ನಲ್ಲಿರುವ ಆತ್ಮಯೆಂದು, ನಾನಲ್ಲವೆಂದು, ಆಡಿಸುವವನು ಆಡಿಸಿದರೇ ಅದಕ್ಕೆ ಅನುಗುಣವಾಗಿ ನಾನು ಕದಲಬೇಕಾಗಿ ಬಂದಿದೆಯೆಂದು ಹೇಳಬಹುದು. ಆದ್ದರಿಂದ ಈ ಗ್ರಂಥ ಬರೆಯುವ ಕಾರ್ಯದಲ್ಲಿ ಸ್ವತಃವಾಗಿ ನನ್ನ ಪ್ರಮೇಯವೇ ಇಲ್ಲ. ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಮೋಕ್ಷಸನ್ನ್ಯಾಸ ಯೋಗವೆಂಬ ಅಧ್ಯಾಯದಲ್ಲಿ 61ನೇ ಶ್ಲೋಕದಲ್ಲಿ **"ಜಾದುಗಾರನು ಗೊಂಬೆಗಳನ್ನು ಆಡಿಸಿದಂತೆ ಸರ್ವ ಪ್ರಾಣಿಗಳನ್ನು ನಾನು ಆಡಿಸುತ್ತಿದ್ದೇನೆ"** ಎಂದು ಹೇಳಿದಂತೆ, ಅಂತಿಮ ದೈವಗ್ರಂಥವಾದ ಖುರ್‌ಆನ್‌ನಲ್ಲಿ (50–21) ವಾಕ್ಯದ ಪ್ರಕಾರ ಮೇಲ್ನೋಟಕ್ಕೆ ನಾನು ಬರೆದಂತೆ ನನ್ನ ಶರೀರ ಕದಲಿಕೆಗಳನ್ನನುಸರಿಸಿ ಕಾಣಿಸಿದರೂ, ಶರೀರದೊಳಗಿದ್ದು ಬರೆಯಿಸಿರುವವನು ನನಗೂ ದೇವರಿಗೂ ಮಧ್ಯದಲ್ಲಿರುವ ಆತ್ಮಯೆಂದು ನನಗೆ ಚೆನ್ನಾಗಿ ತಿಳಿದಿದೆ. ಆದ್ದರಿಂದ ಈ ಗ್ರಂಥವೊಂದರ ದೂಷಣ, ಭೂಷಣಗಳಾಗಲೀ, ಪಾಪಪುಣ್ಯ ಗಳಾಗಲೀ, ನನಗೆ ಸಂಬಂಧವಲ್ಲ. ಪ್ರತಿಯೊಂದು ಕೆಲಸವನ್ನು ಮಾಡಿಸುವುದು ಆತ್ಮನಾದಾಗ, ಸಾಕ್ಷಿಯಾಗಿ ದೇವರು ನೋಡುತ್ತಿದ್ದಾನೆ. ಆದ್ದರಿಂದ ನನ್ನ ಶರೀರದಲ್ಲಿನ ದೇವರಿಗೆ ತಿಳಿಯದಂತೆ ಯಾವುದೂ ನಡೆಯಲಿಲ್ಲ. ಇದೆಲ್ಲವೂ ಮನುಷ್ಯರಿಗೆ ಅನ್ವಯಿಸುವ ಸೂತ್ರವಾದ್ದರಿಂದ, ಎಲ್ಲರು ಮಾಡುವ ಕೆಲಸಗಳು ದೇವರಿಗೆ ತಿಳಿಯದಂತೆ ನಡೆಯುತ್ತಿಲ್ಲ. ಆದರೇ ಅಂತರ್ಗತ ಜ್ಞಾನ ತಿಳಿಯದ ಮನುಷ್ಯ ಎಲ್ಲ ಕೆಲಸಗಳನ್ನೂ ತಾನೇ ಮಾಡುತ್ತಿದ್ದೇನೆಂದು ಅಸತ್ಯ ಭಾವವನ್ನು ಹೊಂದಿದ್ದಾನೆ. ಆದ್ದರಿಂದ ನಡೆದ ಕಾರ್ಯದಲ್ಲಿನ ಪಾಪಪುಣ್ಯಗಳು ಅವನಿಗೇ ತಗುಲಿಕೊಳ್ಳುತ್ತಿವೆ. ನಾನು ಮಾತ್ರ ಮಾಡದ ಕೆಲಸವನ್ನು ನಾನು ಮಾಡಿದ್ದೇನೆಂದು ಅಸತ್ಯ ಭಾವವನ್ನು ಹೊಂದಲಿಲ್ಲ. ಆದ್ದರಿಂದ ನನಗೆ ಪಾಪಪುಣ್ಯಗಳು ಬರುವುದಿಲ್ಲ.

ನನ್ನ ಶರೀರದಲ್ಲಿ ಈಗಲೂ ಸಹ ದೇವರು ನೋಡುತ್ತಿರುವಾಗ ಮಧ್ಯ ಆತ್ಮನಾಗಿದ್ದ ಆತ್ಮ ನನ್ನ ಶರೀರವನ್ನು ಕದಲಿಸುತ್ತಾ ನನ್ನಿಂದ ಈ ರೀತಿ ಈ ಗ್ರಂಥದಲ್ಲಿ ಕೊನೆಯ ಮಾತನ್ನು ಬರೆಯಿಸುತ್ತಾ ಇದ್ದಾನೆ. ಅದು ಏನೋ ಈಗ ನೋಡೋಣ. ಮೊದಲು ದೇವರು ತನ್ನ ಪ್ರಕೃತಿಯಿಂದ ಮನುಷ್ಯನನ್ನು

ಸೃಷ್ಠಿಸಿದ್ದಾನೆ. ಆಗ ಸ್ವತಃವಾಗಿ ಯಾರೂ ಹುಟ್ಟಲಿಲ್ಲ. ಮನುಷ್ಯ ಒಂದುಬಾರಿ ಮೊದಲು ಹುಟ್ಟಿದ ನಂತರ ಅವನಿಗೆ ಮೊದಲು ಸಾವನ್ನು, ನಂತರ ಹುಟ್ಟುವಿಕೆಯನ್ನು ದೇವರು ಕೊಟ್ಟಿದ್ದಾನೆ. ಹುಟ್ಟಿದವನಿಗೆ ಮೊದಲು ದೇವರುಕೊಟ್ಟಿರುವ ಸಾವು ಬಂದಿದೆ, ನಂತರ ಹುಟ್ಟುವಿಕೆ ಬಂದಿದೆ. ದೇವರ ಮಾತಿನ ಪ್ರಕಾರ ಸಾವು, ಹುಟ್ಟುಗಳನ್ನು ಮನುಷ್ಯ ಹೊಂದುತ್ತಲೇ ಇದ್ದಾನೆ. ಸಾವು ನಂತರ ಹುಟ್ಟುವಿಕೆ ಆಗುವುದರಿಂದ ಮನುಷ್ಯ ಜನ್ಮಗಳು ಎಡಬಿಡದೆ ಉಂಟಾಗುತ್ತಲೇ ಇವೆ. ಹಾಗೆ ಹುಟ್ಟುವುದರಲ್ಲಿ ಕಳೆದುಹೋದ ಜನ್ಮಗಳು ಜ್ಞಾಪಕವಿಲ್ಲ. ನಡೆಯುತ್ತಿರುವ ಜನ್ಮ ಮಾತ್ರ ಜ್ಞಾಪಕವಿದೆ. ಕಳೆದುಹೋದ ಜನ್ಮದಲ್ಲಿ ಕ್ರೈಸ್ತನಾಗಿ ಇರುವವನು ಪ್ರಸ್ತುತ ಜನ್ಮದಲ್ಲಿ ಮುಸ್ಲೀಮ್‌ನಾಗಿ ಹುಟ್ಟಿರಬಹುದು. ಹಾಗೇ ಹೋದ ಜನ್ಮದಲ್ಲಿ ಮುಸ್ಲೀಮ್‌ನಾಗಿ ಇರುವವನು ಪ್ರಸ್ತುತ ಜನ್ಮದಲ್ಲಿ ಕ್ರೈಸ್ತನಾಗಿ ಹುಟ್ಟಿರಬಹುದು. ಹಾಗೇ ಹಿಂದೂ ಪ್ರಸ್ತುತ ಜನ್ಮದಲ್ಲಿ ಹಿಂದೂವಾಗಿಯೇ ಹುಟ್ಟಬಹುದು ಅಥವಾ ಮುಸ್ಲೀಮ್‌ನಾಗಿ ಯಾದರೂ ಅಥವಾ ಕ್ರೈಸ್ತವನಾಗಿ ಯಾದರೂ ಹುಟ್ಟಬಹುದು. ಯಾವ ಜನ್ಮದಲ್ಲಿ ಎಲ್ಲಿ, ಯಾವ ಮತಸ್ಥನಾಗಿ ಹುಟ್ಟಬೇಕು ಎನ್ನುವುದು ಕರ್ಮ ನಿರ್ಣಯದ ಪ್ರಕಾರ ನಡೆಯುವ ಕಾರ್ಯಗಳೇ ಆದರೆ, ಸ್ವಂತ ಇಷ್ಟದಿಂದ ಹುಟ್ಟುವುದಲ್ಲ. ಈ ಜನ್ಮದಲ್ಲಿ ಒಬ್ಬನು ಮುಸ್ಲೀಮ್‌ನಾಗಿದ್ದು ಹಿಂದೂಗಳನ್ನು ಹೆಚ್ಚಾಗಿ ದ್ವೇಷಿಸುತ್ತಿರುವನು. ಅಂತಹವನು ನಂತರ ಬರುವ ಜನ್ಮದಲ್ಲಿ ಹಿಂದುವಾಗಿಯೇ ಹುಟ್ಟುವುದರಿಂದ ಅವನು ಹಿಂದೂಗಳನ್ನು ದ್ವೇಷಿಸುವುದಿಲ್ಲ. ಆಗ ಮುಸ್ಲೀಮ್ ರನ್ನು ದ್ವೇಷಿಸುವನು. ಇದೆಲ್ಲವನ್ನೂ ಗಮನಿಸಿದರೇ ಯಾರೂ ಸ್ವತಂತ್ರವಾಗಿ ಜನ್ಮಿಸಲಿಲ್ಲವೆಂದು, ಜನ್ಮಗಳು ಯಾರ ಇಚ್ಛೆ ಪ್ರಕಾರ ಬರುವವಲ್ಲವೆಂದು ತಿಳಿಯುತ್ತಿದೆ. ಜನ್ಮಜನ್ಮಗಳಿಗು ಮತಗಳು ಬದಲಾಗಿ ವಿವಿಧ ಮತಗಳಲ್ಲಿ ಹುಟ್ಟುತ್ತಿರುವುದರಿಂದ, ಮತ ಎನ್ನುವುದು ಪ್ರಸ್ತುತ ಕಾಲದಲ್ಲಿ ಇರುವುದೇ ಯಾಗಲೀ, ಯಾವ ಮನುಷ್ಯನಿಗೂ ಶಾಶ್ವತವಾಗಿ ಇರುವಂಥದ್ದಲ್ಲ.

ಪ್ರಸ್ತುತ ಮಾತ್ರವಿದ್ದು ನಂತರ ಕಾಲದಲ್ಲಿ ಇಲ್ಲದ ಮತವನ್ನು ಹಿಡಿದು ಕೊಂಡು, "ನಾನು ಇಂತಹ ಮತಸ್ಥನು" ಎಂದುಕೊಳ್ಳುವುದು ತಪ್ಪಲ್ಲವೆ! ಈಗ

ಮುಸ್ಲೀಮ್ ಆದವನು ನಂತರ ಕ್ರೈಸ್ತನಾಗುವುದಿಲ್ಲವೆಂಬ ನಂಬಿಕೆಯೇನು? ಹಾಗೇ ಈದಿನ ಹಿಂದೂವಾಗಿ ಇರುವವನು ನಂತರ ಜನ್ಮದಲ್ಲಿ ಕ್ರೈಸ್ತನಾಗಿ ಹುಟ್ಟುವುದಿಲ್ಲವೆಂಬ ನಂಬಿಕೆಯೇನು? ಆದ್ದರಿಂದ ಸ್ವಲ್ಪ ಕಾಲವೇ ಇರುವ ಮತಕ್ಕಾಗಿ ನೀನು ನಿನ್ನ ಜೀವನವನ್ನು ವ್ಯಥಾ ಮಾಡಿಕೊಳ್ಳಬೇಡ. ಮತ ಮನುಷ್ಯ ಧರಿಸುವ ವಸ್ತ್ರವಂಥದ್ದು. ಒಂದು ದಿನ ಬಿಳಿಯ ವಸ್ತ್ರಗಳು, ಮತ್ತೊಂದು ದಿನ ಹಸಿರುಬಣ್ಣದ ವಸ್ತ್ರಗಳು, ಮೂರನೆಯ ದಿನ ಕೆಂಪು ವಸ್ತ್ರಗಳು ಒಬ್ಬನು ಧರಿಸಿದ್ದಾನೆಂದುಕೊಳ್ಳಿ. ಬಿಳಿಯ ವಸ್ತ್ರಗಳು ಧರಿಸಿದ ದಿನ ಅವನನ್ನು ಬಿಳಿ ಬಣ್ಣ ವಸ್ತ್ರಗಳನ್ನು ತೊಟ್ಟವನೆಂದು ಹೇಳುತ್ತಿದ್ದೇವೆ. ಹಾಗೇ ಬಿಳಿಬಣ್ಣದವನೆಂದು ಸಹ ಹೇಳಬಹುದು. ಒಂದು ದಿನ ಧರಿಸಿದ ಬಿಳಿಯಬಣ್ಣ ನಾಳೆ ಇರುವುದಿಲ್ಲ. ಆದ್ದರಿಂದ ಅದು ಪ್ರಸ್ತುತ ಹೇಳುವ ಹೆಸರೇಯಾಗಲೀ ಶಾಶ್ವತವಾಗಿ ಇರುವಂಥದ್ದಲ್ಲ. ಎರಡನೆಯ ದಿನ ಹಸಿರುಬಣ್ಣ ವಸ್ತ್ರಗಳು ಧರಿಸಿದ ದಿನ ಗುರುತಿಗೆ ಹಸಿರುಬಣ್ಣದವನು ಎಂದು ಅನ್ನಬಹುದಾಗಲೀ ಅದು ಆತನಿಗೆ ಶಾಶ್ವತ ಬಣ್ಣವಾಗಿರುವುದಿಲ್ಲ. ಹಾಗೆಯೇ ಒಂದು ಜನ್ಮದಲ್ಲಿ ಮಾತ್ರ ಇರುವ ಮತವನ್ನನುಸರಿಸಿ ಆಗ ಆ ಮತಸ್ಥನೆಂದು ಹೆಸರು ಬಂದರೂ ನಂತರ ಅವನು ಆ ಮತಸ್ಥನಾಗಿ ಇರುವುದಿಲ್ಲ. ಆದ್ದರಿಂದ ಅವನನ್ನು ಶಾಶ್ವತವಾಗಿ ಆ ಮತಸ್ಥನೆಂದು ಅಂದುಕೊಳ್ಳುವುದು ತಪ್ಪಾಗುತ್ತದೆ. ಒಂದು ನಾಟಕದಲ್ಲಿ ಸ್ವಲ್ಪ ಹೊತ್ತು ರಾಮನಾಗಿ ನಟಿಸುವ ಪಾತ್ರವನ್ನನುಸರಿಸಿ ಆಗ ಆತನನ್ನು ರಾಮನೆಂದು ಹೇಳಿದರೂ, ಅದು ಆ ನಾಟಕ ಮುಗಿಯುವವರಿಗೇಯಾಗಲಿ, ನಂತರ ಆತನು ಮನೆಗೆ ಹೋದಾಗ ರಾಮನಲ್ಲವಲ್ಲವೆ! ಹಾಗೇ ಜೀವಿಯು ಶರೀರವನ್ನು ಧರಿಸಿ ಒಂದೊಂದು ಜನ್ಮದಲ್ಲಿ ಒಂದೊಂದು ಮತಸ್ಥನಾಗಿ ಹುಟ್ಟಿದರೂ, ಅವನು ಆ ಸಮಯಕ್ಕೆ ಆ ಮತಸ್ಥನಾಗಿದ್ದರೂ ನಂತರ ಕಾಲದಲ್ಲಿ, ನಂತರ ಜನ್ಮಗಳಲ್ಲಿ ಆತನನ್ನು ಆ ಮತಸ್ಥನಾಗಿ ಹೇಳಲಾರೆವು. ಆದ್ದರಿಂದ ಪ್ರಸ್ತುತ ಕಾಲದಲ್ಲಿ ಹಿಂದೂವಾಗಿ ಹುಟ್ಟಿದವನಾಗಲೀ, ಮುಸ್ಲೀಮ್‌ನಾಗಿ ಹುಟ್ಟಿದವನಾಗಲೀ ಈಗ ಹಿಂದೂವೆಂದೋ, ಮುಸ್ಲೀಮ್ ಎಂದೋ ಕರೆಯಲ್ಪಟ್ಟರೂ ನಂತರ ಕಾಲದಲ್ಲಿ, ನಂತರ ಜನ್ಮದಲ್ಲಿ ಆತನು ಆ ಮತದಲ್ಲೇ ಹುಟ್ಟುವನೆಂಬ ನಂಬಿಕೆ ಇಲ್ಲ.

ಆದ್ದರಿಂದ ಮತ ಒಂದು ಜನ್ಮದಲ್ಲಿ ಒಂದು ದಿನ ಧರಿಸುವ ವಸ್ತ್ರವಂಥದ್ದು. ಇದರ ಪ್ರಕಾರ ಮತ ಯಾರಿಗೂ ಶಾಶ್ವತವಲ್ಲ. ಆದ್ದರಿಂದ ಮತವನ್ನು ಆಧಾರ ಮಾಡಿಕೊಂಡು ಮಾಡುವ ಕೆಲಸಗಳೆಲ್ಲವೂ ವ್ಯಥಾ ಕಾರ್ಯಗಳೇಯಾಗುತ್ತವೆ. ಅವುಗಳಿಂದ ಪಾಪಗಳೇ ಬರುತ್ತವಾಗಲೀ, ದೇವರಿಗೆ ಸಂಬಂಧಿಸಿದ ಜ್ಞಾನ ಮಾತ್ರ ಬರುವುದಿಲ್ಲ.

ಶಾಶ್ವತವಲ್ಲದ ಮತದಮೇಲೆ ಪ್ರತಿ ಮನುಷ್ಯ ಶ್ರದ್ಧೆಯನ್ನು ಬೆಳೆಸಿಕೊಂಡು ನಾನು ಇಂತಹ ಮತಸ್ಥನೆಂದು ಹೇಳಿಕೊಳ್ಳುವುದೇ ಅಲ್ಲದೆ. ಇತರ ಮತಗಳನ್ನು ದ್ವೇಷದಿಂದ ನೋಡುತ್ತಿದ್ದಾನೆ. ಮತದಮೇಲೆ ಶ್ರದ್ಧೆಯಿಂದ ಮನುಷ್ಯ ತಿಳಿಯಬೇಕಾದ ಜ್ಞಾನವನ್ನು ತಿಳಿಯಲಾಗದೆ ಹೋಗುತ್ತಿದ್ದಾನೆ. ಮತ ಮನುಷ್ಯನಿಗೆ ಹುಟ್ಟುವಿಕೆಯಲ್ಲಿ ಇಲ್ಲ. ಹುಟ್ಟಿದ ನಂತರ ಸ್ವಲ್ಪ ಕಾಲಕ್ಕೆ ಅವನು ಹುಟ್ಟಿದ ಕುಟುಂಬವನ್ನನುಸರಿಸಿ ಅವನಿಗೆ ಮತ ಅತ್ತಗಟ್ಟಲಾಗುತ್ತಿದೆ. ಹುಟ್ಟಿದಾಗ ಇಲ್ಲದ ಹೆಂಡತಿ ಯುಕ್ತವಯಸ್ಸಿಗೆ ಬಂದ ನಂತರ ಬಂದು ಜೀವನದಲ್ಲಿ ತಗುಲಿಕೊಂಡಹಾಗೆ, ಹುಟ್ಟಿದಾಗ ಇಲ್ಲದ ಮತ ಯುಕ್ತವಯಸ್ಸು ಬರುವುದಕ್ಕಿಂತ ಮೊದಲೇ ಜೀವನದಲ್ಲಿ ತಗುಲಿಕೊಳ್ಳುತ್ತಿದೆ. ಒಬ್ಬ ಮನುಷ್ಯ ಜೀವನದಲ್ಲಿ ಯುಕ್ತವಯಸ್ಸಿಗಿಂತ ಮೊದಲು ಮತ, ಯುಕ್ತ ವಯಸ್ಸಿನ ನಂತರ ಹೆಂಡತಿ ತಗುಲಿಕೊಳ್ಳುವುದು ನಡೆಯುತ್ತಿದೆ. ಹೆಂಡತಿ ಬಂದ ನಂತರ ಮನುಷ್ಯ ತನ್ನ ತಾಯಿತಂದೆಗೆ ದೂರವಾಗುತ್ತಿದ್ದಾನೆ. ಹೆಂಡತಿಗಿಂತ ಮೊದಲು ಮನುಷ್ಯ ಜೀವನದೊಳಗೆ ಬಂದಿರುವ ಮತದಿಂದ ಕಾಣಿಸದ ತಾಯಿ ತಂದೆಯಾದ ಪ್ರಕೃತಿ ಪರಮಾತ್ಮರಿಗೆ ದೂರವಾಗುತ್ತಿದ್ದಾನೆ. ಹೆಂಡತಿ ಮೇಲಿನ ಪ್ರೀತಿಯಿಂದ ತಾಯಿತಂದೆಯರ ಮೇಲೆ ಧ್ಯಾಸ ಇಲ್ಲದಂತೆ ಹೋದಹಾಗೆ, ಮತದ ಮೇಲೆ ಇರುವ ಪ್ರೀತಿಯಿಂದ ಪ್ರಕೃತಿ, ಪರಮಾತ್ಮರ ಜ್ಞಾನದ ಮೇಲಿನ ಧ್ಯಾಸ ಇಲ್ಲದಂತೆ ಹೋಗುತ್ತಿದೆ. ಮತವಾಗಲೀ, ಹೆಂಡತಿಯಾಗಲೀ ಜೀವನದ ಮಧ್ಯದಲ್ಲಿ ಬರುವವೇ ಎಂದು, ಈಗಿರುವ ಮತ, ಹೆಂಡತಿ ನಂತರ ಜನ್ಮದಲ್ಲಿ ಅವರೇ ಇರುತ್ತಾರೆಂಬ ನಂಬಿಕೆಯಿಲ್ಲವೆಂದೂ, ಮತ, ಹೆಂಡತಿ ಯಾರಿಗೂ ಶಾಶ್ವತವಲ್ಲವೆಂದು ತಿಳಿದವರು

ಮತ ಮಾಯೆಯಿಂದ, ಹೆಂಡತಿ ಮೋಜಿನಿಂದ ಹೊರಬೀಳಬಲ್ಲರು. ಹೆಂಡತಿಯ ಮೋಜಿನಲ್ಲಿ ಇಲ್ಲದವನು ತನ್ನ ತಾಯಿ ತಂದೆಯರನ್ನು ಶ್ರದ್ಧೆಯಿಂದ ನೋಡಿಕೊಳ್ಳುತ್ತಾನೆ. ಹಾಗೇ ಮತಮಾಯೆಯಲ್ಲಿ ಇಲ್ಲದವನು ಪ್ರಕೃತಿ ಪರಮಾತ್ಮರ ಜ್ಞಾನವನ್ನು ಶ್ರದ್ಧೆಯಿಂದ ತಿಳಿಯಬಲ್ಲನು. ಇದನ್ನನುಸರಿಸಿ ಪ್ರತಿ ಮನುಷ್ಯನಿಗೂ ಮತ ದೊಡ್ಡ ಮಾಯೆಯಾಗಿ ಇದೆಯೆಂದೂ, ಮತದ ಮೇಲಿನ ಧ್ಯಾಸದಿಂದ ಮನುಷ್ಯನಿಗೆ ದೇವರ ಮೇಲೆ ಶ್ರದ್ಧೆ ಕಡಿಮೆಯಾಗುತ್ತಿದೆಯೆಂದೂ ತಿಳಿಯುತ್ತಿದೆ.

ಮತದಲ್ಲಿಯೂ ಸಹ ಜ್ಞಾನವಿದೆಯಲ್ಲವೆ! ಮತದಲ್ಲಿ ಜ್ಞಾನವಿಲ್ಲದೇ ಹೋದರೇ ಅದನ್ನು ಬಿಡಬೇಕಾಗುತ್ತದೆ. ಮೂರು ಮತ ಗ್ರಂಥಗಳಲ್ಲಿ ದೇವರ ಜ್ಞಾನವಿದೆಯೆಂದು, ಅವು ದೈವಗ್ರಂಥಗಳೆಂದು ನೀವೇ ಹೇಳಿದ್ದೀರಲ್ಲವೆ! ಹಾಗಿರುವಾಗ ಮನುಷ್ಯ ಮತವನ್ನು ಏಕೆ ಇಲ್ಲದಂತೆ ಮಾಡಿಕೊಳ್ಳಬೇಕು ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಈ ರೀತಿ ಇದೆ. ಮೂರು ಗ್ರಂಥಗಳಲ್ಲಿನ ಜ್ಞಾನವನ್ನು ಮನುಷ್ಯ ತಿಳಿಯಬೇಕೆಂದರೇ ಅವನಿಗೆ ಮತವಿಲ್ಲದಂತೆ ಇರುವಾಗಲೇ ಅದು ಸಾಧ್ಯವಾಗುತ್ತದೆ. ಇಲ್ಲದೇ ಹೋದರೆ ಆ ಗ್ರಂಥಗಳಲ್ಲಿನ ಜ್ಞಾನ ಮನುಷ್ಯನಿಗೆ ಸರಿಯಾಗಿ ಅರ್ಥವಾಗದಂತೆ ತಪ್ಪಾಗಿ ಅರ್ಥವಾಗುತ್ತದೆ. ಅದಕ್ಕೆ ತಾರ್ಕಾಣವಾಗಿ ಒಂದು ವಿಷಯವನ್ನು ನೋಡೋಣ. ಒಬ್ಬ ಹಿಂದೂ ಗುರುವು, ಒಬ್ಬ ಮುಸ್ಲೀಮ್ ಗುರುವು ಇಬ್ಬರೂ ಸ್ನೇಹಿತರಾಗಿ ಇರುವುದರಿಂದ, ಅವರು ಆಗಾಗ ಅವರವರ ಜ್ಞಾನವನ್ನು ಚರ್ಚಿಸಿಕೊಳ್ಳುತ್ತಿದ್ದರು. ಒಂದು ದಿನ ಮಾವಿನತೋಟದಲ್ಲಿ ಇಬ್ಬರು ಗುರುಗಳು ಕುಳಿತುಕೊಂಡು ಜ್ಞಾನವನ್ನು ಮಾತನಾಡಿಕೊಳ್ಳುತ್ತಿದ್ದರು. ಆಗ ಹಿಂದೂ ಗುರುವು "ಮನುಷ್ಯ ಸತ್ತುಹೋಗುತ್ತಲೇ ಪುನಃ ಜನ್ಮಕ್ಕೆ ಹೋಗುವನು" ಎಂದು ಹೇಳಿದಾಗ ಮುಸ್ಲೀಮ್ ಗುರು "ಹಾಗೆ ನಡೆಯುವುದಿಲ್ಲ, ಮನುಷ್ಯ ಸತ್ತುಹೋದರೇ ಭೂಸಮಾಧಿಯಲ್ಲಿಯೇ ಪ್ರಳಯ ಬರುವವರೆಗು ಇರುತ್ತಾನೆ" ಎಂದನು. ಅವರಿಬ್ಬರಲ್ಲಿ ನಾನು ಹೇಳುವುದೇ ಸರಿಯಾದ ಜ್ಞಾನವೆಂದು ಒಬ್ಬರು ಅಂದಾಗ, ಅಲ್ಲ ನಾನು ಹೇಳಿರುವ ಜ್ಞಾನವೇ ಸತ್ಯವಾದದ್ದೆಂದು ಮತ್ತೊಬ್ಬರು ಹೇಳುತ್ತಿದ್ದರು. ಆದರೇ ಅಲ್ಲೇ ಅವರಿಗೆ ತಿಳಿಯದಂತೆ ಇಬ್ಬರು ವ್ಯಕ್ತಿಗಳು ಸತ್ತುಹೋದ ನಂತರ

ಅತ್ತ ಜನ್ಮಕ್ಕು ಹೋಗದಂತೆ, ಇತ್ತ ಭೂಸಮಾಧಿಯಲ್ಲಿ ಇಲ್ಲದೆ ಮಧ್ಯದಲ್ಲಿ ದೆವ್ವಗಳಾಗಿದ್ದರು. ಆ ಇಬ್ಬರು ದೆವ್ವಗಳಾಗಿರುವವರು ಇಬ್ಬರ ಗುರುಗಳ ಮಾತುಗಳನ್ನು ಕೇಳಿ "ಅವರು ಇಬ್ಬರೂ ಹೇಳುವುದು ತಪ್ಪು, ಅವರದು ನಿಜವಾದರೇ ನಾವೇಕೆ ಹೀಗೆ ಯಾವಕಡೆ ಆಗದಂತೆ ಮಧ್ಯದಲ್ಲಿ ಇದ್ದೇವೆ" ಎಂದು ಅವರು ಆ ಗುರುಗಳ ಮೇಲೆ ಕೋಪವಿರುವವರಾಗಿ, ಇವರು ಬದುಕಿದ್ದರೇ ಅಜ್ಞಾನವನ್ನು, ಅಸತ್ಯವನ್ನು ಬೋಧಿಸಿ ಸಮಾಜವನ್ನು ಕೆಡಿಸುವರೆಂದು ತಿಳಿದು, ಅವರನ್ನು ಸಾಯಿಸ ಬೇಕೆಂದುಕೊಂಡು, ಇಬ್ಬರ ಗುರುಗಳ ಶರೀರದೊಳಗೆ ತೂರಿ ಹತ್ತು ದಿನಗಳು ಹಿಂಸಿಸಿ ಅವರನ್ನು ಸತ್ತುಹೋಗುವಂತೆ ಮಾಡಿದ್ದಾರೆ. ಆಗ ಮರಣಿಸಿದ ಇಬ್ಬರು ಗುರುಗಳು ಸಹ ದೆವ್ವಗಳಾಗಿ ಮೊದಲ ಇಬ್ಬರ ದೆವ್ವಗಳೊಂದಿಗೆ ಬೆರೆತುಹೋಗಿದ್ದಾರೆ. ಆಗ ಆ ಇಬ್ಬರು ಗುರುಗಳಿಗೆ ನಾವು ಹೇಳಿರುವುದು ಸತ್ಯವಲ್ಲವೆಂದು ತಿಳಿಯಿತು. ಸತ್ತುಹೋದ ನಂತರ ಭೂಸಮಾಧಿಯಲ್ಲಿ ಇರುತ್ತಾರೆಂದು ಮುಸ್ಲೀಮ್ ಮತ ಹೇಳಿರುವುದು ತಪ್ಪೆಂದು ಮುಸ್ಲೀಮ್ ಗುರುವಿಗೆ ತಿಳಿದುಹೋಯಿತು. ಹಾಗೇ ಸತ್ತುಹೋದನಂತರ ಎಲ್ಲರೂ ಜನ್ಮಕ್ಕೆ ಹೋಗುವುದಿಲ್ಲವೆಂದು ಕೆಲವರು ದೆವ್ವಗಳಾಗುತ್ತಾರೆಂದು ಹಿಂದೂ ಗುರುವಿಗೂ ಸಹ ತಿಳಿಯಿತು. ಆಗ ಅವರು ಅವರ ಮತಗಳ ಪ್ರಕಾರ ಹೇಳುವ ಬೋಧನೆಗಳನ್ನು ಅನುಸರಿಸದೇ ಪ್ರತ್ಯಕ್ಷ ಸಾಕ್ಷ್ಯವಾಗಿರುವ ಬೋಧನೆಗಳನ್ನೇ ಗ್ರಹಿಸಬೇಕೆಂದುಕೊಂಡಿದ್ದಾರೆ. ಅವರು ನಂತರ ಜನ್ಮದಲ್ಲಿ ನಿಜಜ್ಞಾನದಕಡೆ ಧ್ಯಾಸವನ್ನಿಟ್ಟು ನಿಜವಾದ ಜ್ಞಾನಿಗಳಾಗಿ ಬದಲಾಗಿದ್ದಾರೆ. ಆದ್ದರಿಂದ ನೀವೂ ಸಹ ಮತ ಬೋಧಿಸಿದ ಜ್ಞಾನವನ್ನು ಬಿಟ್ಟು ಮತಾತೀತ ಜ್ಞಾನವನ್ನು ತಿಳಿಯಬೇಕೆಂದು ಕೋರುತ್ತಿದ್ದೇವೆ.



**ಅಸತ್ಯವನ್ನು ಸಾವಿರ ಮಂದಿ ಹೇಳಿದರೂ ಅದು ಸತ್ಯವಲ್ಲ.**

**ಸತ್ಯವನ್ನು ಸಾವಿರಮಂದಿ ಅಲ್ಲವೆಂದರೂ ಅದು ಅಸತ್ಯವಲ್ಲ.**

ಪ್ರಮುಖರ ಲೇಖ



# ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಇಂದೂ- ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







**ಸುವಾರ್ತ ಕ್ರೈಸ್ತವ ಸಂಘ (S.K.S)**

(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

*www. suvarthakraisthavasangham.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ** (D.S.S)

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ–509381

e-mail id : info@dravidashreshtisangham.org

***www.dravidashreshtisangham.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ




**ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ (R.B.D.B.S)**

**(Regd.No.: 309/2015)**

ತಾರ್ನಾಕ, ಹೈದರಾಬಾದ್, ತೆಲಂಗಾಣ–500007.

e-mail id : info@ravanabrahmadravidabrahmanasangham.org

*www.ravanabrahmadravidabrahmanasangham.org*

